ರಾಣೀ

# ಅರುಣಕುಮಾರಿ.

[ಐತಿಹಾಸಿಕ ಕಾದಂಬರಿ.]



ಲೇಖಕ:—

ಶ್ರೀ. ನಾಗೇಶ ರಂಗೋ ಕುಲಕರ್ಣಿ

---

ಪ್ರಕಾಶಕ:—

ಶ್ರೀ. ಯ. ಗು. ಕುಲಕರ್ಣಿ

ಸಂಪಾದಕ, ಸದ್ಬೋಧ ಚಂದ್ರಿಕೆ,

ಆನಂದವನ.

ಬೆಲೆ ೧ ರೂ.




ಮಹಾರಾಣಾ ಉದಯಸಿಂಗನ ಕಾಲದ ಕಥಾನಕವಿದು. ಕಥಾನಾಯಕಿಯಾದ ಅರುಣಕುಮಾರಿಯು ಒಬ್ಬ ಸಾಮಾನ್ಯ ಸ್ತ್ರೀಯು. ಅವಳು ತನ್ನ ಸದ್ಗುಣಗಳ ಬಲದಿಂದ ಚಿತ್ತೋಡದ ರಾಣೀ ಪದವನ್ನು ಹೊಂದಿ, ಅಕಬರ ಬಾದಶಹನಂತಹ ಪ್ರಬಲ ಪ್ರತಾಪಿಯನ್ನು ಪರಾಭವಗೊಳಿಸಿದ ಸಂಗತಿಯು ವಿಸ್ಮಯಜನಕವಾಗಿರುವದು. ಅರುಣಕುಮಾರಿಯ ಹಾಗು ಉದಯಸಿಂಗನ ಪಟ್ಟಮಹಿಷಿಯಾದ ರೋಜಕುಂವರಿಯ ಸತೀಧರ್ಮದ ಘನವಂತಿಕೆಯೂ, ಸ್ವಾಮಿ ಅಜಿತಾನಂದರ ಪರೋಪಕಾರ ಬುದ್ಧಿಯೂ ಪ್ರಶಂಸನೀಯವಿರುವವು

ಲೌಕಿಕ ದೃಷ್ಟಿಯಿಂದ ಸಮತ್ವ ಭಾವವು ನೆಲೆಗೊಳ್ಳುವವರೆಗೆ ರಾಷ್ಟ್ರಕ್ಕೂ ಜನಾಂಗಕ್ಕೂ ಸುಖವು ದೊರೆಯಲಾರದು. ಅರುಣಕುಮಾರಿಯು ಎಂತಹ ಯೋಗ್ಯತಾಸಂಪನ್ನಳಿದ್ದರೂ, ತೇಜಸ್ವಿಯಾಗಿದ್ದರೂ, ಶೌರ್ಯ ಧೈರ್ಯ-ಸಾಹಸಗಳ ಮೂರ್ತಿಮಂತ ದೇವತೆಯಾಗಿದ್ದರೂ ಅವಳು ಜನರ ವಿಶಿಷ್ಟ ದೃಷ್ಟಿಗೆ ಹೀನ ಕುಲೋತ್ಪನ್ನಳಾಗಿ ಕಾಣುತ್ತಿದ್ದಳು. ಆದ್ದರಿಂದ ರಾಷ್ಟ್ರಕ್ಕಾಗಿ ಆತ್ಮಬಲಿದಾನಮಾಡಲು ಉದ್ಯುಕ್ತಳಾಗಿದ್ದ ಆ ಆದರ್ಶ-ವೀರಾಂಗನೆಯು ವೈಷಮ್ಯ ದೃಷ್ಟಿಯ ಜನರ ಮಾತ್ಸರ್ಯಾಗ್ನಿಗೆ ಬಲಿಯಾದಳು! ಜಾತಿ ಮಾತ್ಸರ್ಯವೂ ಪರಂಪರಾಗತವಾದ ಧರ್ಮದ ಅಂಧಶ್ರದ್ಧೆಯೂ, ವಿಶಿಷ್ಟತರದ ಲೈಂಗಿಕ ವೈಷಮ್ಯವೂ ನಿರ್ಮೂಲವಾದರೆ ಜನಾಂಗದ ನಿಜವಾದ ಅಭ್ಯುದಯವಾಗುವದು.

ಸದ್ಗುರು ಕೃಪೆಯಿಂದ ಈ ಚಿಕ್ಕ ಕಥೆಯು ಕನ್ನಡಿಗರ ಕೈಸೇರಿದ್ದರಿಂದ ಆನಂದವಾಗಿದೆ. ಸದ್ಬೋಧ ಚಂದ್ರಿಕೆಯ ಸಂಪಾದಕರಾದ ಶ್ರೀ. ಯ. ಗು. ಕುಲಕರ್ಣಿ ಇವರು ಈ ಕಥೆಯ ಹಸ್ತಲಿಖಿತ ಪ್ರತಿಯನ್ನೋದಿ ಆನಂದದಿಂದ ಚಂದ್ರಿಕೆಯಲ್ಲಿ ಮುದ್ರಿಸಿ ಪ್ರಕಟಿಸಿದ್ದರಿಂದ ಆ ಮಹಾಶಯರಿಗೆ ಋಣಿಯಾಗಿರುವೆನು.

ಬನ್ನಿಕೊಪ್ಪ
೨೦—೫—೧೯೪೫

ಕನ್ನಡಿಗರ ಅಡಿಯಾಳು,
ನಾ ಗೇ ಶ.

ಇದನ್ನು ಭಿ. ಪ. ಕಾಳೆ ಇವರು ಆನಂದವನ-ಅಗಡಿಯೊಳಗಿನ ತಮ್ಮ 'ಶ್ರೀ ಶೇಷಾಚಲ ಪ್ರೆಸ್ಸಿ'ನಲ್ಲಿ ಮುದ್ರಿಸಿದರು.



# ರಾಣೀ ಅರುಣಕುಮಾರಿ

## ಪ್ರೇಮವೋ, ಪ್ರಣಯವೋ?

ಸಂಧ್ಯಾಕಾಲವಿತ್ತು. ಆಗಸದಲ್ಲಿ ನೋಡಿದತ್ತ ಮೇಘಗಳು ವ್ಯಾಪಿಸಿದ್ದವು. ಘುಂಘುರ್ಘುಮಾರುತನಿಂದ ಅವು ಒಳ್ಳೆಯ ವೇಗವಾಗಿ ಪರಿಭ್ರಮಣಮಾಡ ತೊಡಗಿದ್ದವು. ಬರಬರುತ್ತ ಮೋಡಗಳ ದಟ್ಟಣೆಯು ಹೆಚ್ಚಾಗಿ, ಸೂರ್ಯದರ್ಶನಕ್ಕೆ ಅವಕಾಶವಿಲ್ಲದಾಯಿತು. ಗುಡುಗಿನ ಗಡಗಡಾಟವೂ ಸಿಡಿಲಿನ ಖಡಖಡಾಟವೂ ನಡೆದಿದ್ದವು. ಬರಬರುತ್ತ ಗಾಳಿಯು ಕಟ್ಟಾಗಿ ಮಹಾವೃಷ್ಟಿಯು ಪ್ರಾರಂಭವಾಯಿತು. ಘನಘೋರವಾದ ಮಳೆಯಿಂದ ಭೂಮಿಯು ಜಲಮಯವಾಯಿತು. ಕಪೋತಾಕ್ಷೀತೀರದ ವನಪ್ರದೇಶದಲ್ಲಿ ಪ್ರಾಣಿಗಳೊಂದೂ ದೃಗ್ಗೋಚರವಾಗದಾಗಿದ್ದವು. ಬರಬರುತ್ತ ಮಳೆಯು ಕಡಿಮೆಯಾಯಿತು ಕಪೋತಾಕ್ಷೀನದಿಯು ತುಂಬಿ ಹರಿಯತೊಡಗಿತು. ಅಷ್ಟರಲ್ಲಿ ಹದಿನಾರುವರ್ಷದ ಒಬ್ಬ ತರುಣನೂ ಹನ್ನೆರಡು ವರ್ಷದ ಒಬ್ಬ ಬಾಲಿಕೆಯೂ ಅಲ್ಲಿಗೆ ಬಂದರು. ಆಗ ಬಾಲಿಕೆಯು ತರುಣನನ್ನು ಕುರಿತು—"ವಿಜಯಲಾಲರೆ, ನೋಡಿದಿರಾ? ಕಪೋತಾಕ್ಷಿಗೆ ಮಹಾಪ್ರವಾಹವು ಬಂದಿರುವದು. ನದಿಯ ಗರ್ಜನೆಯಿಂದ ಕಿವಿಗಳು ಗಡಚಿಕ್ಕುತ್ತವೆ."

"ಕ್ಷುದ್ರರು ಬಹಳೇ ಆಡಂಬರದವರಿರುತ್ತಾರೆ. ಕಪೋತಾಕ್ಷಿಯು ಕ್ಷುದ್ರ ನದಿಯಾಗಿದ್ದರೂ ಮಹಾನದಿಗಿಂತ ಹೆಚ್ಚಾಗಿ ಗರ್ಜಿಸುತ್ತಿರುವದು."

"ಕಪೋತಾಕ್ಷಿಯು ಕ್ಷುದ್ರನದಿಯೆಂದು ಹೀಯಾಳಿಸಬೇಡಿರಿ. ಈಗ ನೀವು ಈ ನದಿಯನ್ನು ದಾಟಲಾರಿರಿ." ಬಾಲಿಕೆಯು ವಿಜಲಾಲನಿಗೆ ಉತ್ತರವಿತ್ತಳು.

"ಅರುಣ ಕುಮಾರಿ." ವಿಜಯಲಾಲನು ಆಶ್ಚರ್ಯತೆಯಿಂದ—"ದೊಡ್ಡ ದೊಡ್ಡ ನದೀ ಪ್ರವಾಹಗಳನ್ನು ನಿರಾಯಾಸವಾಗಿ ದಾಟಿದ ನನಗೆ ಈ ಕಪೋತಾಕ್ಷಿಯ ಪರಿಯೇನು? ಅರೆಗಳಿಗೆಯಲ್ಲಿ ನದಿಯನ್ನು ದಾಟಿ ಬರುವೆನು. ನೀನು ಇಲ್ಲಿಯೇ ಕುಳಿತು ನೋಡು."

ವಿಜಯಲಾಲನು ತನ್ನ ಮೈಮೇಲಿನ ಅರಿವೆಗಳನ್ನು ತೆಗೆಯ ಹತ್ತಿದನು.

ಅವನು ದಿಯಲ್ಲಿ ಬೀಳುವನೆಂಬದು ಗೊತ್ತಾದ ಕೂಡಲೆ ಅರುಣ ಕುಮಾರಿಯು ಭಯಗೊಂಡಳು. ಆಗ ಅವಳು ಕಂಪಿತಧ್ವನಿಯಿಂದ—“ವಿಜಯಲಾಲರೆ, ಕಪೋತಾಕ್ಷಿಯು ಘೋರ್ಗರೆಯುತ್ತಿರುವದು. ತುಂಬಿ ಹರಿಯುವ ನದಿಯಲ್ಲಿ ಬೀಳುವದೇಕೆ? ಇಂದು ಬೇಟೆಯಿಂದ ನೀವು ಬಹಳವಾಗಿ ದಣಿದಿರುವಿರಿ. ಶ್ರಮಗೊಂಡವರಾದ ನೀವು ಪರತೀರವನ್ನು ತಲುಪಬೇಕಾದರೆ ಮತ್ತಿಷ್ಟು ಶ್ರಮವಾಗಬಹುದು. ಮತ್ತೊಮ್ಮೆ ನಿಮ್ಮ ಸತ್ವಪರೀಕ್ಷೆ ಮಾಡುವೆನು. ಈಗ ನೀವು ಅಭಿಮಾನಕ್ಕೆ ಬೀಳಬಾರದು. ನೀರಿನೊಡನೆ ಆಟವು ಕೆಲಸದ್ದಲ್ಲ. ಈಗಾಗಲೆ ಸಂಧ್ಯಾಸಮಯವಾಗಿರುವದು. ನಡೆಯಿರಿ, ಗುಡಿಸಲಿಗೆ ಹೋಗೋಣ. ಅಮ್ಮನು ನಮ್ಮ ದಾರೀನೋಡುತ್ತಿರಬಹುದು.”

“ಅರುಣಕುಮಾರಿ, ಪೈಲತೀರವನ್ನು ಮುಟ್ಟಿ ಬರಲಿಕ್ಕೆ ಬಹಳ ವೇಳೆ ಹಿಡಿಯುವದಿಲ್ಲ. ತುಂಬಿ ಹರಿಯುವ ಕಪೋತಾಕ್ಷಿಯನ್ನು ದಾಟಬೇಕೆಂದು ನಾನು ಬಹಳ ದಿನಗಳಿಂದ ಸಂಕಲ್ಪಿಸಿದ್ದೆನು. ಇಂದು ಅನಾಯಾಸವಾಗಿ ಸಂಧಿ ದೊರೆತಿದೆ.”

“ಬೇಡ; ನೀವು ದೀರ್ಘಸಾಹಸಕ್ಕೆ ಹೋಗುವದು ಬೇಡ. ನದಿಯನ್ನು ದಾಟಿ ಬರಲಿಕ್ಕೆ ಏನಿಲ್ಲೆಂದರೂ ಎರಡು ಗಳಿಗೆಯಾಗುವದು. ಈಗಾಗಲೆ ಸಂಧ್ಯಾಸಮಯವಾಗುತ್ತ ಬಂತು. ಗುಡಿಸಲಿಗೆ ಬೇಗನೆ ಹೋಗೋಣ ನಡೆಯಿರಿ. ಇನ್ನೂ ಮಳೆಯು ‘ಚಿಟಿ ಚಿಟಿ’ ಉದುರುತ್ತದೆ. ಇಂತಹ ಕಟಗುಟ್ಟಿ ನಡಗಿಸುವ ಚಳಿಯಲ್ಲಿ ನದಿಯನ್ನು ದಾಟಬೇಕೆಂಬ ಹಟಹಿಡಿಯಬೇಡಿರಿ.”

“ಅರಣಕುಮಾರಿ,” ವಿಜಯಲಾಲನು ನಸುನಗುತ್ತ:—“ನಾನು ತೋಯಿಸಿಕೊಳ್ಳುವೆನೆಂದು ನಿನಗೆ ದುಃಖವಾಗುತ್ತಿರುವದೇನು?”

“ಹೌದು. ಇಂತಹ ಚಳಿಯೊಳಗೆ ಶೀತಲವಾದ ಜಲದಲ್ಲಿ ಬೀಳುವದರಿಂದ ದೇಹಕ್ಕೆ ಅಪಾಯವಾಗುವ ಸಂಭವವುಂಟು.”

“ಅರುಣ, ನನ್ನ ವಿಷಯವಾಗಿ ನೀನು ಇಷ್ಟು ಸಹಾನುಭೂತಿ ತೋರಿಸುವ ಕಾರಣವೇನು? ನನಗೆ ಅಪಾಯವಾದರೆ ನಿನಗೆ ದುಃಖವಾಗುವದೇಕೆ?”

“ನಿಮಗೆ ದುಃಖವಾದರೆ ನನ್ನ ಮನಸ್ಸು ದುಃಖವಾಗದೇನುಮಾಡೀತು? ನನ್ನ ದುಃಖದಿಂದ ನೀವು ದುಃಖಿತರಾಗುವದಿಲ್ಲವೆ? ಹೋದವರ್ಷ ನನಗೆ ಜಡ್ಡಾದಾಗ ನೀವು ಯಾವಾಗಲೂ ನನ್ನ ಬಳಿಯಲ್ಲಿದ್ದು ಆರೈಕೆ ಮಾಡಿದಿರಿ. ನನ್ನ ಬೇನೆಯು ಗುಣವಾಗುವ ವರೆಗೆ ದಿನಾಲು ಕಣ್ಣೀರು ಸುರಿಸುತ್ತಿದ್ದಿರಿ. ಇಂತಹ ಕಕ್ಕುಲತೆಯುವರಾದ ನಿಮಗೆ ದುಃಖವಾದರೆ ನನಗೆ ದುಃಖವೆನಿಸಲಾರದೆ? ನಮ್ಮಲ್ಲಿ ಕಾಳುಕಡಿಗಳು ತೀರಿದರೆ ನೀವು ಪೇಟೆಗೆ ಹೋಗಿ ತಂದು ಕೊಡುವಿರಿ. ನನಗೆ ವಸ್ತ್ರಗಳನ್ನು ತರುವಿರಿ. ಮನೆಯವರಿಗಿಂತ ಹೆಚ್ಚಾಗಿ ನಡೆಯುವ ನಿಮಗೆ ಅಹಿತವಾದರೆ ನನ್ನ ಮನಸ್ಸು ಕ್ಲೇಶಗೊಳ್ಳುವದು.”

“ನಾನು ನಿಮ್ಮ ಸೇವೆ ಮಾಡುತ್ತಿರುವದರಿಂದ ನೀನು ನನಗೆ ದುಃಖವಾಗ

ಬಾರದೆಂದು ಇಚ್ಛಿಸುತ್ತಿರುವೆಯಾ? ಅಥವಾ ನನ್ನಲ್ಲಿ ಪ್ರೇಮವುಳ್ಳವಳಾಗಿರುವದ ರಿಂದ ನಿನಗೆ ದುಃಖವಾಗುತ್ತಿರುವದೆ? ನೀನು ಇದೀಗ ಕೌಮಾರಾವಸ್ಥೆಯ ಸೀಮೆ ಯನ್ನು ದಾಟಹತ್ತಿರುವದರಿಂದ ನನ್ನಲ್ಲಿ ಅಲ್ಪಮಟ್ಟಿಗಾದರೂ ಪ್ರಣಯವುಳ್ಳವ ಳಾಗಿರುವೆಯೆಂದು ಭಾವಿಸುವೆನು."

"ಪ್ರೇಮ-ಪ್ರಣಯಗಳನ್ನು ನಾನರಿಯೆನು. ಈ ವಿಶಾಲವಾದ ಜಗತ್ತಿನಲ್ಲಿ ಬಾಲಿಕೆಯಾದ ನನ್ನನ್ನೂ ವೃದ್ಧಳಾಗಿದ್ದ ನನ್ನ ಅಮ್ಮನನ್ನೂ ಕೇಳುವವರು ಯಾರೂ ಇಲ್ಲ. ನೀವು ನನ್ನ ಹಾಗು ನನ್ನ ಅಮ್ಮನನ್ನು ಕಂಡರೆ ಸ್ವಕೀಯತನವನ್ನು ತೋರಿ ಸುವಿರಿ. ನಮ್ಮ ಯೋಗಕ್ಷೇಮ ಚಿಂತನೆ ಮಾಡುವಿರಿ. ಈ ಬಗೆಯಾಗಿ ಕಕ್ಕುಲತೆ ಯನ್ನು ತಳೆದ ನಿಮ್ಮ ಮೇಲೆ ನಾನು ಕಕ್ಕುಲತೆಯುಳ್ಳವಳಾದದ್ದು ಸ್ವಾಭಾವಿಕವು. ಇಂತಹ ಚಳಿಯಲ್ಲಿ ತೋಯಿಸಿಕೊಂಡರೆ ನೀವು ಬೇನೆ ಬೀಳಲಿಕ್ಕಿಲ್ಲವೆ? ನಿಮಗೆ ಅಸ್ವಸ್ಥತೆಯುಂಟಾದರೆ ನಿರಾಧಾರಿಗಳೂ ಅನಾಥರೂ ಆದ ನಮ್ಮನ್ನು ಯಾರು ಕೇಳುವರು? ಅಂತೆಯೆ ನಿಮಗೆ ಹಿತವಾಗಬೇಕೆಂದು ನನ್ನ ಇಚ್ಛೆಯಿರುವದು. ಈ ನನ್ನ ಗುಣಕ್ಕೆ ಏನೆನ್ನುವಿರಿ? ಇದೇನು ಪ್ರೇಮವೊ? ಪ್ರಣಯವೊ?"

ಸರಳ ಹೃದಯದ ಬಾಲಿಕೆಯು. ನಿರ್ಮಲವೂ ನಿರ್ವಿಕಾರವೂ ಆದ ವೃತ್ತಿ ಯವಳು. ಆ ಬಾಲಿಕೆಗೆ ತಾರುಣ್ಯದಶೆಯೊಳಗಿನ ಸಹಜಪ್ರೇಮದ ಗಂಧವಾರ್ತೆಯು ಹೇಗೆ ತಗಲಬೇಕು? ವಿಜಯಲಾಲನು ಈಗ ತಾರುಣ್ಯಪ್ರದೇಶವನ್ನು ತಲುಪಿದ್ದನು. ವಯೋಮಾನಕ್ಕನುಗುಣವಾಗಿ ಅವನಲ್ಲಿ ಪ್ರಣಯಪ್ರೇಮಗಳು ಸ್ವಾಭಾವಿಕವಾಗಿ ಹುಟ್ಟಿದ್ದವು. ಅರುಣ ಕುಮಾರಿಯ ಅಮ್ಮನಾದ ಜಾಹ್ನವಿಯು ತನ್ನ ಮೊಮ್ಮಗ ಳನ್ನು ವಿಜಯಲಾಲನಿಗೆ ಕೊಡಬೇಕೆಂದು ನಿರ್ಧರಿಸಿದ್ದಳು. ಅವಳು ಈ ಸಂಗತಿ ಯನ್ನು ವಿಜಯಲಾಲನಿಗೆ ಹೇಳಿದ್ದಳು. ಅರುಣಳು ತನ್ನ ಅರ್ಧಾಂಗಿಯಾಗುವ ಳೆಂಬ ಭಾವನೆಯು ಹುಟ್ಟಿದಂದಿನಿಂದ ವಿಜಯಲಾಲನು ಅವಳಲ್ಲಿ ಪ್ರೇಮವುಳ್ಳವ ನಾಗಿದ್ದನು. ಮೊದಲಿನ ನಿರ್ವಿಕಾರ ಪ್ರೇಮಕ್ಕೆ ರೂಪಾಂತರವುಂಟಾಗಿತ್ತು; ಆದರೆ ತನ್ನ ಹೃದಯದಲ್ಲಿ ಹುದುಗಿಕೊಂಡಿದ್ದ ಪ್ರೇಮವನ್ನು ಬಹಿರಂಗಕ್ಕೆ ತರಲಿಕ್ಕೆ ಅವ ಕಾಶವಿದ್ದಿಲ್ಲ. ಯಾಕಂದರೆ ಅರುಣಕುಮಾರಿಯು ಇದೀಗ ಹನ್ನೆರಡು ವರ್ಷದವ ಳಾಗಿದ್ದಳು. ಅವಳ ಮನಸ್ಸು ಜಾಹ್ನವಿಯ ಜಲದಂತೆ ಪವಿತ್ರವೂ ನಿರ್ಮಲವೂ ಆಗಿತ್ತು. ನಿರ್ವ್ಯಾಜವಾದ ಅವಳ ಹೃದಯದರ್ಪಣದಲ್ಲಿ ಪ್ರೇಮಪ್ರಣಯಗಳ ಚಿತ್ರವು ಹೇಗೆ ದೃಗ್ಗೋಚರವಾಗಬೇಕು? ವಿಜಯಲಾಲನು ಮಾತ್ರ ಅರುಣಕುಮಾ ರಿಯ ಹೃದಯವನ್ನು ಮೇಲಿಂದ ಮೇಲೆ ಪರೀಕ್ಷಿಸುತ್ತಿದ್ದನು; ಅವಳಲ್ಲಿ ಪ್ರೇಮವು ಅಂಕುರಿಸುವ ಅಧಿಕಾರವುಂಟಾಗುವ ಅವಧಿಯನ್ನು ಒಳ್ಳೆಯ ಆಸ್ಥೆಯಿಂದ ನಿರೀಕ್ಷಿಸ ತೊಡಗಿದ್ದನು. ಅವನು ಅರುಣಳ ಹೃದಯವನ್ನು ಇನ್ನಿಷ್ಟು ಪರೀಕ್ಷಿಸಬೇಕೆಂಬ ಉದ್ದೇಶದಿಂದ—"ಅರುಣಕುಮಾರಿ, ನಾನು ನಿನ್ನ ಹಾಗು ನಿನ್ನ ಅಮ್ಮನ ಯೋಗ ಕ್ಷೇಮವನ್ನೇನು ನೋಡುವೆನು? ಇಡೀ ಜಗತ್ತಿನ ಕ್ಷೇಮಚಿಂತನೆಯ ಭಾರವು

ಸರ್ವಶಕ್ತನಾದ ಪರಮಾತ್ಮನ ಮೇಲಿರುವದು."

"ಪರಮಾತ್ಮನೇ ನಮ್ಮ ಹಿತಚಿಂತನೆ ಮಾಡುವದಕ್ಕಾಗಿ ನಿಮ್ಮಲ್ಲಿ ಸದ್ಬುದ್ಧಿಯನ್ನು ಉತ್ಪನ್ನ ಮಾಡಿರುವನು."

"ಶಸ್ತ್ರಾಸ್ತ್ರವಿದ್ಯೆಯನ್ನು ಕಲಿಯುವದಕ್ಕಾಗಿ ನಾನು ಎರಡನೆಯ ಸ್ಥಳಕ್ಕೆ ಹೋಗಬೇಕೆಂದು ಯೋಚಿಸಿರುವೆನು. ಅನಂತರದಲ್ಲಿ ನೀನು ಹೇಗೆ ಮಾಡುವೆ?"

ವಿಜಯಲಾಲನ ಮಾತುಗಳನ್ನು ಕೇಳಿದೊಡನೆಯೆ ಅರುಣಳ ಕಣ್ಣುಗಳು ದುಃಖಾಶ್ರುಗಳಿಂದ ತುಂಬಿದವು. ಕಂಠವು ಸದ್ಗದಿತವಾಯಿತು. ಅವಳು ಗದ್ಗದ ಸ್ವರದಿಂದ:—"ನೀವು ಅನಾಥರಾದ ನಮ್ಮನ್ನು ಬಿಟ್ಟು ಹೋಗುವಿರಾ? ನೀವು ಹೊರಟು ಹೋದ ಬಳಿಕ ನಮ್ಮ ಗತಿ ಏನು? ನೀವು ನಾಲ್ಕು ದಿನ ಬಾರದ್ದರಿಂದ ಅಮ್ಮನು ಹೃದ್ರೋಗ ಹತ್ತಿದವರಂತೆ ಅವಸ್ಥೆ ಹೊಂದಿರುವಳು. ಅಂತೆಯೆ ನಾನು ನಿಮ್ಮನ್ನು ಕರೆಯಲಿಕ್ಕೆ ಬಂದಿರುವೆನು. ವಿಜಯಲಾಲರೆ, ನಾನು ನಿಮ್ಮ ಬಾಲ್ಯ ಸ್ನೇಹಿಯಲ್ಲವೆ? ಇಂತಹಳನ್ನು ದುಃಖದಲ್ಲಿ ಕೆಡಹಿ ಹೇಗೆ ಹೋಗುವಿರಿ? ನನ್ನ ವಿಯೋಗವು ನಿಮಗೆ ಸಹಿಸುವದೆ? ನಾನು ನಿಮ್ಮನ್ನು ಹೋಗಗೊಡೆನು."

"ನನ್ನನ್ನು ಕಟ್ಟಿಹಾಕುವೆಯಾ?"

"ನೀವು ಹೀಗೆ ದುರಾಗ್ರಹ ಹಿಡಿದರೆ ನನ್ನ ಉಪಾಯವಿಲ್ಲ. ನಿಮ್ಮ ಹೃದಯವು ಇಷ್ಟು ಕಠೋರವಾದದ್ದಿರುವದೆಂಬದು ಮೊದಲೇ ತಿಳಿದಿದ್ದರೆ—"

ಅರುಣ ಕುಮಾರಿಯ ಬಾಯಿಯಿಂದ ಮಾತುಗಳು ಹೊರಡದಾದವು. ನೇತ್ರಗಳಲ್ಲಿ ದುಃಖಾಶ್ರುಗಳು ಧಾರೆಗಟ್ಟಿ ಹರಿಯತೊಡಗಿದವು. ಅವಳ ಸ್ಥಿತಿಯನ್ನು ಕಂಡು ವಿಜಯಲಾಲನ ಹೃದಯವು ಕರಗಿತು. ತನ್ನಿಂದ ನಿಷ್ಕಾರಣವಾಗಿ ಪ್ರಮಾದವು ಘಟಿಸಿತೆಂದು ಅವನು ಬಗೆದು, ಅರುಣಳ ಅಶ್ರುಗಳನ್ನು ಕೈಯಿಂದ ಒರಿಸುತ್ತ—"ಅರುಣ, ದುಃಖಿತಳಾಗದಿರು. ನೀನಂದಂತೆ ನಾನು ನಿನ್ನ ವಿಯೋಗವನ್ನು ಸಹಿಸಲಾರೆನು. ಕೆಲವು ದಿನಗಳ ವರೆಗೆ ಶಸ್ತ್ರಾಸ್ತ್ರ ವಿದ್ಯಾಭ್ಯಾಸ ಮಾಡಬೇಕೆಂಬ ಮನಸ್ಸಿದ್ದುದರಿಂದ ನಿನ್ನೆದುರಿಗೆ ಪ್ರಸ್ತಾಪತೆಗೆದೆನು. ನಿನಗೆ ಇದು ರುಚಿಸದಿದ್ದರೆ ಸದ್ಯಕ್ಕೆ ಹೋಗುವದಿಲ್ಲ. ಅರುಣಕುಮಾರಿ, ನಾನು ಒಂದು ವಿಷಯದ ಬಗ್ಗೆ ನಿನ್ನನ್ನು ವಿಚಾರಿಸಬೇಕೆಂದು ಯೋಚಿಸಿರುವೆನು. ಉತ್ತರ ಕೊಡುವೆಯಾ?"

ಅರುಣಕುಮಾರಿಯು ವಿಜಯಲಾಲನ ಸಾಂತ್ವನಪರ ಭಾಷಣದಿಂದ ಸಂತುಷ್ಟಳಾದಳು. ಆಗ ಅವಳು ನಸುನಗುತ್ತ:—ನೀವು ಕೇಳಬೇಕೆಂದು ಯೋಚಿಸಿರುವ ಮಾತಾವದು? ಯಾವದೊಂದು ವಿಷಯವನ್ನು ಕೇಳಬೇಕಾದರೆ ನನ್ನ ಅಜ್ಞೆಯ ಅವಶ್ಯಕತೆಯೇನು? ಕೇಳುವದನ್ನು ತಟ್ಟನೆ ಕೇಳಿಬಿಟ್ಟರಾಯಿತು. ಗೊತ್ತಿದ್ದರೆ ಉತ್ತರ ಕೊಟ್ಟೇ ಕೊಡುವೆನು."

"ನೀನು ನನ್ನ ಹಿತವನ್ನೇ ಬಯಸುತ್ತಿರುವೆ. ನನಗೆ ಅಪಾಯವಾದರೆ ನಿನ್ನ ಮನಸ್ಸು ವಿಷಾದಗೊಳ್ಳುವದು. ನನ್ನಲ್ಲಿ ಈ ಬಗೆಯಾಗಿ ಕಕ್ಕುಲತೆ ತೋರಿಸಲಿಕ್ಕೆ

ಕಾರಣವೇನು? ತನ್ನ ಮನಸ್ಸಿನಂತೆ ನಡೆದು ತನ್ನನ್ನು ಸಂತಸಪಡಿಸದವರ ಸ್ನೇಹ ಬಳೆಯಿಸುವ ಬಗೆ ಹೇಗೆ? ನನ್ನ ವಿಷಯವಾಗಿ ಯಾವ ಕಾರಣದಿಂದ ತನ್ನತನವು ನೆಲೆಗೊಂಡಿರುವದನ್ನು ಹೇಳಿದರೆ ಮಾತ್ರ ನಾನು ನಿನ್ನ ಗುಡಿಸಲಿಗೆ ಬರುವೆನು."

ಅರುಣಕುಮಾರಿಯು ವಿಜಯಲಾಲನ ಕೈಯೊಳಗಿನ ತನ್ನ ಮುಖವನ್ನು ಬಿಡಿಸಿಕೊಂಡು—"ನೀವು ಬಹಳೇ ಚಂಡಿತನದವರು." ಎಂದು ನುಡಿದು ಸ್ವಲ್ಪ ದೂರ ಸರಿದು ಲಜ್ಜಾವನತ ಮುಖಿಯಾಗಿ—"ನಿಮ್ಮೊಡನೆ ನನ್ನ ವಿವಾಹ ಮಾಡ ಬೇಕೆಂದು ಅಮ್ಮನು ಯೋಚಿಸಿರುವಳು. ನಿಮಗೆ ಈ ಸಂಗತಿಯು ಗೊತ್ತಿದ್ದರೂ, ನನ್ನ ಮುಖದಿಂದಲೆ ಮಾತಾಡಿಸಬೇಕೆಂಬ ಸಾಹಸ ಮಾಡಿದಿರಿ. ಈಗಾದರೂ ನಿಮ್ಮ ಮನಸ್ಸು ಸಮಾಧಾನವಾಯಿತೆ? ಇದೊಂದು ಕಾರಣವು ನನ್ನ ನಿಮ್ಮ ಸ್ನೇಹವನ್ನು ಮೊದಲಿಗಿಂತ ಬಲಪಡಿಸಿರುವದು"

"ನಿನ್ನನ್ನು ನನಗೆ ಕೊಡಬೇಕೆಂದು ನಿನ್ನ ಅಮ್ಮನ ನಿಶ್ಚಯವಿರುವದು. ನಾನಾದರೂ ನಿನ್ನನ್ನು ವರಿಸಬೇಕೆಂದು ಮನಸ್ಸು ಮಾಡಿರುವೆನು. ನನ್ನನ್ನು ವರಿಸಲಿಕ್ಕೆ ನೀನು ಸ್ವಸಂತೋಷದಿಂದ ಸಿದ್ಧಳಾಗುವೆಯಾ?"

"ಓಹೋ! ನಿಮ್ಮನ್ನು ನಾನು ಲಗ್ನವಾಗಬೇಕೆಂದು ಇಚ್ಛಿಸುತ್ತಿರುವೆನು."

"ಮೂವರ ಇಚ್ಛೆಗಳೂ ಒಂದಾದವು. ಹೀಗಿದ್ದ ಮೇಲೆ ವಿವಾಹಕಾರ್ಯವು ಬೇಗನೆ ಜರುಗುವದರಲ್ಲಿ ಸಂದೇಹವಿಲ್ಲ"

"ವಿಜಯಲಾಲರೆ, ಕೇವಲ ಮನುಷ್ಯರ ಇಚ್ಛೆಯಂತೆ ಎಲ್ಲ ಕಾರ್ಯಗಳು ನಡೆಯುತ್ತಿರುವದಿಲ್ಲ."

ಅರುಣಕುಮಾರಿಯ ಮಾತುಗಳನ್ನು ಕೇಳಿ ವಿಜಯಲಾಲನು ಬೆರಗಾದನು. ಅರುಣಳು ಚಿಕ್ಕವಳಾದರೂ ಮಾತಿನಲ್ಲಿ ಇಷ್ಟು ಜಾಣ್ಮೆಯನ್ನು ತೋರಿಸಿದ್ದನ್ನು ಅವನು ಎಂದೂ ಕಂಡಿದ್ದಿಲ್ಲ. ಆಗ ಅವನು ಉತ್ಕಂಠಿತನಾಗಿ:—"ವಿವಾಹವಾಗುವವರೂ ಕೊಡುವವರೂ ಸರಳರಿದ್ದರೆ ಇತರರ ಇಚ್ಛೆಯ ಅವಶ್ಯಕತೆಯೇನು?"

"ಅವಶ್ಯಕತೆಯುಂಟು. ನಾನು ಯಾವನ ಇಚ್ಛೆಯ ಅವಶ್ಯಕತೆಯುಂಟೆಂದು ಹೇಳುವೆನೋ ಅವನ ಇಚ್ಛಾಮಾತ್ರದಿಂದ ಅಘಟಿತ ಕಾರ್ಯಗಳ ಘಟನೆಯಾಗುವದು."

"ಅಂತಹ ನಿನ್ನ ಸ್ವಕೀಯನಾರು? ಯಾರ ಇಚ್ಛೆಯಿಂದ ನನ್ನ ನಿನ್ನ ವಿವಾಹ ಕಾರ್ಯವು ನೆರವೇರಬೇಕಾಗಿದೆ?"

"ಭಗವದಿಚ್ಛೆ! ಭಗವಂತನೇ ಕೇವಲ ನನ್ನ ಸ್ವಕೀಯನು. ಅವನ ಇಚ್ಛೆಯಿಲ್ಲದೆ ಕೇವಲ ನನ್ನ ನಿಮ್ಮ ಇಚ್ಛೆಗಳ ಪ್ರಯೋಜನವೇನು?"

"ಅರುಣಕುಮಾರಿ, ನೀನು ಕುಶಲಳಿರುವೆ. ಭಗವದಿಚ್ಛೆಯಮೇರೆಗೆ ಎಲ್ಲ ಕಾರ್ಯಗಳು ನಡೆಯುವವೆಂಬದು ನಿಜ. ಆತನ ಪ್ರೇರಣೆಯಿಂದಲೇ ಸ್ನೇಹ ಸಂಬಂಧವು ಘಟಿಸುತ್ತದೆ; ಪ್ರೇಮಸಂಯೋಗವಾಗುತ್ತದೆ. ನೀನು ನನ್ನನ್ನು

ವರಿಸಬೇಕೆಂಬ ಇಚ್ಛೆಯುಳ್ಳವಳಾಗಿರುವೆಯಷ್ಟೆ? ನೀನು ಹೀಗೆ ಇಚ್ಛೆಯನ್ನು ತಳೆದಿರುವದು ಯಾರ ಪ್ರೇರಣೆಯಿಂದ?''

“ಅಮ್ಮನ ಪ್ರೇರಣೆಯಿಂದ. ನನ್ನನ್ನು ನಿಮಗೆ ಕೊಡಬೇಕೆಂದು ಅವಳು ಯಾವಾಗಲೂ ಅನ್ನುತ್ತಿರುವದರಿಂದ ನಾನೂ ಅನ್ನುತ್ತಿರುವೆನು. ಅವಳು ಅನ್ನುತ್ತಿರುವದರಿಂದಲೇ ನನ್ನ ಮನಸ್ಸಿನಲ್ಲಿ ನಿಮ್ಮನ್ನು ವರಿಸಬೇಕೆಂಬ ಇಚ್ಛೆಯು ಉತ್ಪನ್ನವಾಗಿರುವದು. ಭಗವಂತನ ಪ್ರೇರಣೆಯಿಂದ ನನ್ನಲ್ಲಿ ಈ ಬಗೆಯ ವಿಚಾರವೂ ಇಚ್ಛೆಯೂ ಉತ್ಪನ್ನವಾಗಿರುವವೆಂದು ಕಾರ್ಯಘಟನೆಯಾಗುವವರೆಗೆ ನಾನು ಹೇಗೆ ಹೇಳಲಿ?'

“ಒಳ್ಳೆಯ ವಿಚಿತ್ರ ಭಾಷಣವಿದು!” ವಿಜಯಲಾಲನು ನಗುತ್ತ ನುಡಿದನು:— “ಅರುಣಕುಮಾರಿ, ದೇವರ ಇಚ್ಛೆಯೂ ನಿಮ್ಮ ಅಮ್ಮನ ಇಚ್ಛೆಯೂ ಹೇಗೆಯೇ ಇರಲಿ; ನೀನು ನನ್ನನ್ನು ವರಿಸಬೇಕೆಂದು ದೃಢಸಂಕಲ್ಪ ಮಾಡಿಕೊಂಡಿರುವಿಯಾ?”

“ವಿಜಯಲಾಲರೆ, ಅಮ್ಮನು ನನ್ನ ವಿವಾಹಕಾರ್ಯ ಮಾಡುವವಳು. ಅವಳು ಮಾಡುವ ಕಾರ್ಯಕ್ಕೆ ನಾನು ಹೇಗೆ ದೃಢಸಂಕಲ್ಪ ಮಾಡಿಕೊಳ್ಳಲಿ?”

“ನಿನ್ನ ಮಾತುಗಳಿಂದ ನನ್ನ ಮನಸ್ಸು ಮತ್ತಿಷ್ಟು ಸಂದೇಹಗೊಳ್ಳುತ್ತಿರುವದು. ನನ್ನ ಸಹವಾಸವನ್ನೂ ಸ್ನೇಹವನ್ನೂ ನೀನು ಬಯಸುತ್ತಿರುವೆ. ನನ್ನ ವಿಯೋಗದಿಂದ ನಿನ್ನ ಮನಸ್ಸು ಕ್ಲೇಶಗೊಳ್ಳುವದು. ನನ್ನ ದೇಹಕ್ಕೆ ಅಪಾಯವಾದರೆ, ಇಲ್ಲವೆ ನನಗೆ ಸಂಕಟಗಳೊದಗಿದರೆ ನೀನು ದುಃಖಿತಳಾಗುವೆ. ಇದು ಯಾತರ ದ್ಯೋತಕವು? ನಿನ್ನ ಅಮ್ಮನು ನಿನ್ನನ್ನು ನನಗೆ ಧಾರೆಯೆರೆದುಕೊಡಬೇಕೆಂದು ಮಾತಾಡಹತ್ತಿದಂದಿನಿಂದ ನನ್ನನ್ನು ವರಿಸಬೇಕೆಂಬ ವಿಚಾರವು ನಿನ್ನ ಮನಸ್ಸಿನಲ್ಲಿ ಹುಟ್ಟಿರುವದು. ಇಷ್ಟಾದರೂ ನನ್ನನ್ನು ವರಿಸುವ ವಿಷಯವಾಗಿ ನೀನು ನಿರ್ಧಾರದ ಮಾತುಗಳನ್ನಾಡಲೊಲ್ಲೆ. ನನ್ನಲ್ಲಿ ಪ್ರೇಮವುಳ್ಳವಳಾದ ಬಗ್ಗೆ ನಿನ್ನ ಮನೋದಯವು ವ್ಯಕ್ತವಾಗಲೊಲ್ಲದು.”

“ವಿಜಯಲಾಲರೆ, ನಿಮ್ಮ ಮಾತಿನ ಅರ್ಥವಾಗಲೊಲ್ಲದು. ನೀವು ಹೇಳುತ್ತಿರುವದೆಲ್ಲವೂ ನಿಜವು. ನಿಮಗೆ ದುಃಖವಾದರೆ ನನ್ನ ಮನಸ್ಸೂ ದುಃಖಿಯಾಗುವದು. ನಿಮಗೆ ನನ್ನನ್ನು ಕೊಡಬೇಕೆಂದು ಅಮ್ಮನಾಡುತ್ತಿರುವದರಿಂದ ನಾನಾದರೂ ನಿಮ್ಮನ್ನು ಲಗ್ನವಾಗಬೇಕೆಂದು ಅನ್ನುತ್ತಿರುವೆನು. ನಿಮ್ಮನ್ನೇ ವರಿಸುವೆನೆಂದು ಪ್ರತಿಜ್ಞೆ ಮಾಡಿ ಹೇಳಲಿಕ್ಕೆ ನಾನೆಷ್ಟರವಳು? ಈಶಘಟನೆಯಂತೆ ಕಾರ್ಯಗಳಾಗುವವೆಂದು ನಾನು ಆಗಲೆ ಹೇಳಲಿಲ್ಲವೆ? ಇನ್ನು ನನ್ನ ವರ್ತನದಲ್ಲಿ ಯಾವ ಭಾವಗಳು ವ್ಯಕ್ತವಾಗುವವೆಂಬದು ಅನಭಿಜ್ಞಳಾದ ನನಗೆ ತಿಳಿಯದು. ನೀವೇ ಹೇಳಿರಿ, ನನ್ನ ಸ್ವಭಾವದಲ್ಲಿ ಯಾವ ಭಾವವು ವ್ಯಕ್ತವಾಗುತ್ತಿರುವದು? ಪ್ರೇಮವೊ, ಪ್ರಣಯವೊ?”

ಅರುಣಕುಮಾರಿಯ ಮಾತುಗಳಿಂದ ವಿಜಯಲಾಲನಿಗೆ ಮನಶ್ಶಾಂತಿಯು ಲಭಿಸಲಿಲ್ಲ. ಅಲ್ಪವಯಸ್ಕಳಾದ ಬಾಲಿಕೆಯ ನಿರ್ವಿಕಾರ ಮನೋಭಾವವು ಯುವಕ

ನಾದ ವಿಜಯಲಾಲನ ಪ್ರೇಮಿ ಹೃದಯವನ್ನು ಶಾಂತಗೊಳಿಸಲು ಸಮರ್ಥವಾಗಲಿಲ್ಲ. ಅವನ ಮನಸ್ಸು ಅನೇಕ ಬಗೆಯ ವಿಚಾರಗಳಲ್ಲಿ ನಿಮಗ್ನವಾಯಿತು. ಆಗ ಅರುಣಕುಮಾರಿಯು—"ವಿಜಯಲಾಲರೆ, ಸೂರ್ಯಾಸ್ತಸಮಯವಾಯಿತು. ಗುಡಿಸಲಲ್ಲಿ ಅಮ್ಮನು ಒಬ್ಬಳೇ ನಮ್ಮ ಹಾದಿಯನ್ನು ನೋಡುತ್ತ ಕುಳಿತಿರಬಹುದು. ನಡೆಯಿರಿ, ಗುಡಿಸಲಿಗೆ ಹೋಗೋಣ."

ವಿಜಯಲಾಲನೂ ಅರುಣಕುಮಾರಿಯೂ ಕಪೋತಾಕ್ಷೀ ತೀರದಿಂದ ಹೊರಟು ಗುಡಿಸಲನ್ನು ತಲುಪಿದರು.

---

## ಮನಸ್ಸಿನ ಗೊಂದಲ.

ಜಾಹ್ನವಿಯು ವಯಾತೀತಳು. ವಯೋಮಾನಕ್ಕನುಸಾರವಾಗಿ ಅವಳು ತೀರ ಅಶಕ್ತಳಾಗಿದ್ದಳು. ಕೋಲಿನ ಆಧಾರವಿಲ್ಲದೆ ಅವಳು ಮುಂದೆ ಹೆಜ್ಜೆಯಿಡುತ್ತಿದ್ದಿಲ್ಲ. ಅವಳ ಕಣ್ಣು ಕಿವಿಗಳು ಮಂದವಾಗಿದ್ದವು. ಅನೇಕ ಬಗೆಯ ಮನೋಯಾತನೆಗಳಿಂದ ಅವಳ ಮುಪ್ಪಿನ ಪ್ರಕೃತಿಯು ಮತ್ತಿಷ್ಟು ಜರ್ಜರಿತವಾಗಿತ್ತು. ಅವಳಿಗೆ ಅರುಣಕುಮಾರಿಯೂ ವಿಜಯಲಾಲನೂ ಆಶ್ರಯವಾಗಿದ್ದುದರಿಂದಲೆ ಇಂದಿನವರೆಗೆ ಜೀವಧಾರಣೆ ಮಾಡಿದ್ದಳು. ಅರುಣಕುಮಾರಿಯೊಬ್ಬಳೇ ಅವಳಿಗೆ ವಿಶಾಲವಾದ ಜಗತ್ತಿನೊಳಗಿನದೊಂದು ಸೂಕ್ಷ್ಮವಾದ ಆಶಾತಂತುವು. ಅರುಣಳು ಕೆಲವು ಕ್ಷಣಗಳ ವರೆಗೆ ಕಣ್ಮರೆಯಾದರೆ ಜಾಹ್ನವಿಗೆ ಬಲವಾದ ದುಃಖವಾಗುತ್ತಿತ್ತು. ಪ್ರಾತಃಕಾಲದಲ್ಲಿಯೆ ಹೋದ ಅರುಣಕುಮಾರಿಯು ಸಂಧ್ಯಾಕಾಲವಾಗುತ್ತಬಂದಿದ್ದರೂ ಬಾರದ್ದರಿಂದ ಅವಳು ಶೋಕಗ್ರಸ್ತಳಾಗಿದ್ದಳು. ಅವಳ ಮನಸ್ಸಿನಲ್ಲಿ ಅನೇಕಪ್ರಕಾರದ ವಿಚಾರಗಳು ಹುಟ್ಟತೊಡಗಿದ್ದವು. ಅಷ್ಟರಲ್ಲಿ ಅರುಣಕುಮಾರಿಯೂ ವಿಜಯಲಾಲನೂ ಅಲ್ಲಿಗೆ ಬಂದರು. ಅರುಣಳು ತನ್ನ ಹೇಳಿಕೆಯ ಮೇರೆಗೆ ವಿಜಯಲಾಲನನ್ನು ಕರೆತಂದದ್ದಕ್ಕಾಗಿ ಜಾಹ್ನವಿಗೆ ಬಹಳ ಸಂಭ್ರಮವಾಯಿತು. ಅವಳು ಇಬ್ಬರನ್ನೂ ಆಲಿಂಗಿಸಿ, ಅರುಣಳನ್ನು ಕುರಿತು— "ಅರುಣಕುಮಾರಿ, ಒಂದೆರಡು ಗಳಿಗೆಗಳಲ್ಲಿ ಬರುತ್ತೇನೆಂದು ಪ್ರಾತಃಕಾಲದಲ್ಲಿಯೆ ಹೋದವಳು ಸಂಜೆಗೇ ಬರಬೇಕೇನು?"

"ಅಮ್ಮಾ, ನಾನೇನುಮಾಡಲಿ? ವಿಜಯಲಾಲರು ಬೇಗನೆ ಹೊರಡಲಿಲ್ಲ. ಈಗ ಅವರು ಶಸ್ತ್ರಾಸ್ತ್ರ ವಿದ್ಯೆಯನ್ನು ಕಲಿಯಲಾರಂಭಿಸಿರುವರು. ತಾವು ಕಲಿತ ವಿದ್ಯೆಯ ಪರೀಕ್ಷೆ ತೆಗೆದುಕೊಳ್ಳಲಿಕ್ಕೆ ನನ್ನನ್ನು ಹಚ್ಚಿದ್ದರು. ಶಸ್ತ್ರಾಸ್ತ್ರ ವಿದ್ಯೆಯ ವಿಷಯವಾಗಿ ನನಗೂ ಅಭಿಲಾಷೆಯುಂಟು. ಗುರಿಹೊಡೆಯುವದು, ಖಡ್ಗಪ್ರಹಾರ, ಕೋಲು ತಿರುಗಿಸುವದು ಮೊದಲಾದ ಕಲೆಗಳಲ್ಲಿ ಇವರು ಅಲ್ಪಾವಧಿಯೊಳಗೆ ನಿಷ್ಣಾತರಾದದ್ದನ್ನು ನೋಡಿ ಸೋಜಿಗವೆನಿಸಿತು."

"ವಿಜಯಲಾಲನು ಶಸ್ತ್ರಾಸ್ತ್ರವಿದ್ಯೆಯಲ್ಲಿ ಪ್ರವೀಣನಾಗಿರುವನೆ?" ಜಾಹ್ನವಿಯು ವಿಸ್ಮಯದಿಂದ ಕೇಳಿದಳು.

"ನಾನು ಸುಳ್ಳು ಹೇಳುವೆನೆ? ಇವರು ನಿಜವಾಗಿ ಕ್ಷಾತ್ರಧರ್ಮಕ್ಕೆ ಭೂಷಣಪ್ರಾಯರಾಗಿರುವರು."

"ಅರುಣ, ಬಿಲ್ಲು-ಬಾಣಗಳ ಹೆಸರು ಕೇಳದ ನೀನು ವಿಜಯಲಾಲನ ಶಸ್ತ್ರಾಸ್ತ್ರವಿದ್ಯೆಯನ್ನು ಹೇಗೆ ಪರೀಕ್ಷಿಸಿದೆ?"

"ಅಮ್ಮಾ," ವಿಜಯಲಾಲನು ನಡುವೆ ಬಾಯಿಹಾಕಿ—"ಈ ಅರುಣಕುಮಾರಿಯು ಬಾಲಿಕೆಯಾದರೂ ಶಸ್ತ್ರಾಸ್ತ್ರ ವಿದ್ಯೆಯಲ್ಲಿ ತನ್ನ ಯೋಗ್ಯತೆ ಮೀರಿ ಜಾಣಳಾಗಿರುವಳು. ಗುಡಿಸಲಲ್ಲಿ ಕುಳಿತುಕೊಂಡಿರುತ್ತಿದ್ದ ನಿಮಗೆ ಈ ವೀರ ಕುಮಾರಿಯ ಕೃತಿಗಳು ತಿಳಿಯಲಿಕ್ಕೆ ಸಾಧ್ಯವಿಲ್ಲ. ಇವಳು ಗುರಿಹೊಡೆಯುವದರಲ್ಲಿಯೂ ಖಡ್ಗಪ್ರಹಾರ ಮಾಡುವದರಲ್ಲಿಯೂ ಅತ್ಯಂತ ಚಪಲಳಿರುವಳು. ಇಂದು ಒಂದೇ ಬಾಣದಿಂದ ಇವಳು ಕೊಬ್ಬಿದ ಹುಲಿಯನ್ನು ಕೊಂದಳು. ಅರುಣಳೆಂದರೆ ಸಾಮಾನ್ಯ ಬಾಲಿಕೆಯೆಂದು ಭಾವಿಸಬೇಡಿರಿ. ಇವಳು ಆದರ್ಶ ಆರ್ಯಾಂಗನೆಯಾಗುವಳು. ಈ ಕ್ಷಾತ್ರಬಾಲಿಕೆಯು ನಿಜವಾಗಿಯೂ ತೇಜಸ್ವಿಯಾಗಿರುವಳು."

ವಿಜಯಲಾಲನು ಮಾತನಾಡುತ್ತ ಹೋದಂತೆ ಜಾಹ್ನವಿಯ ಆನಂದ ಶರಧಿಯು ಉಕ್ಕೇರುತ್ತ ನಡೆದಿತ್ತು. ಕೊನೆಯ ಮಾತನ್ನು ಕೇಳಿದೊಡನೆಯೆ ಅವಳ ಹಿಗ್ಗುಗೊಂಡ ಮೋರೆಯು ಸುರ್ರನೆ ಸುಕ್ಕಿತು. ಈ ದೃಶ್ಯಾಭ್ಯಂತರದ ಕಡೆಗೆ ವಿಜಯಲಾಲನ ಲಕ್ಷ್ಯವಿದ್ದಿಲ್ಲ. ಅವನು ಅರುಣಕುಮಾರಿಯ ಗುಣವರ್ಣನೆಯಲ್ಲಿಯೆ ತಲ್ಲೀನನಾಗಿದ್ದನು. ಅರುಣಳು ಮಾತ್ರ ತನ್ನ ವರ್ಣನೆ ಮಾಡುತ್ತಿರುವ ವಿಜಯಲಾಲನನ್ನೊಮ್ಮೆ, ಆನಂದಶರಧಿಯಲ್ಲಿ ಓಲಾಡಹತ್ತಿದ ತನ್ನ ಅಮ್ಮನನ್ನೊಮ್ಮೆ ನೋಡುತ್ತ ಕುಳಿತಿದ್ದಳು. ಅವಳಿಗೆ ಜಾಹ್ನವಿಯ ಮುಖದಲ್ಲುಂಟಾದ ದೃಶ್ಯಾಭ್ಯಂತರದ ಸ್ಥಿತಿಯು ತಿಳಿಯದಿರಲಿಲ್ಲ. ತನ್ನ ವರ್ಣನೆಯು ನಡೆದಾಗ ಅವಳ ಮುಖಲಕ್ಷಣದಲ್ಲಿ ಸ್ಥಿತ್ಯಂತರವುಂಟಾದದ್ದಕ್ಕಾಗಿ ಅವಳಿಗೆ ಆಶ್ಚರ್ಯವಾಯಿತು. ಅವಳು ಜಾಹ್ನವಿಯ ಮನೋವಯವನ್ನು ತಿಳಿದುಕೊಳ್ಳಬೇಕೆಂದು ಹವಣಿಸಿದ್ದಳು; ಆದರೆ ವಿಷಯವು ರಹಸ್ಯವಾದದ್ದಾಗಿದ್ದರೆ ವಿಜಯಲಾಲನಿದ್ದಾಗ ತನ್ನ ಅಮ್ಮನು ಹೇಳಲಿಕ್ಕಿಲ್ಲವೆಂಬ ಸಂದೇಹದಿಂದ ಅವಳು ಸುಮ್ಮನಾದಳು. ಜಾಹ್ನವಿ ಅರುಣಕುಮಾರಿಯರ ಮನಸ್ಸು ಗೊಂದಲದಲ್ಲಿ ಸಿಲುಕಿದ್ದು ವಿಜಯಲಾಲನಿಗೆ ಗೊತ್ತಾಗುವದು ಸಾಧ್ಯವಿದ್ದಿಲ್ಲ. ಅವನು ಅರುಣಳ ಸ್ತುತಿಯನ್ನು ಮನಸೋಕ್ತವಾಗಿ ನಡೆಸಿದ್ದನು. ಕೆಲವು ವೇಳೆಯ ಮೇಲೆ ಅರುಣಕುಮಾರಿಯು ವಿಜಯಲಾಲನನ್ನು ಕುರಿತು—"ನೀವು ಬಹಳೇ ವಾಕ್ಚತುರರಿರುವಿರಿ. ಅರಿಯದವರಾರಾದರೂ ಕೇಳಿದರೆ ನಿಮ್ಮ ಮಾತುಗಳೆಲ್ಲ ನಿಜವೆಂದು ತಿಳಿಯಬಹುದು. ಸಾಕುಮಾಡಿರಿ; ನಿಮ್ಮ ವರ್ಣನೆಯನ್ನು, ಶಕ್ತಿಯನ್ನು ಗುಡ್ಡದಷ್ಟು ಮಾಡಿ ಹೇಳಿದರೆ, ಅದು ಅಮ್ಮನಿಗೆ ಎಂದೂ ನಿಜವಾಗಿ

ತೋರಲಾರದು. ಯಾಕೆ ಅಮ್ಮಾ? ನನ್ನೊಬ್ಬಳಿಂದ ಕೊಬ್ಬಿದ ಹುಲಿಯನ್ನು ಹೊಡೆಯುವದು ಸಾಧ್ಯವಾಗಬಹುದೆ?"

ಅರುಣಕುಮಾರಿಯ ಈ ಮಾತುಗಳನ್ನು ಕೇಳಿದ ಕೂಡಲೆ ಜಾಹ್ನವಿಯ ವಿಚಾರಮಗ್ನವಾದ ಮನಸ್ಸು ಚಂಚಲವಾಯಿತು. ವಿಜಯಲಾಲನ ವರ್ಣನೆಯು ನಿಜವೆಂದೇ ಅವಳ ಭಾವನೆಯಾಯಿತು ಆಗ ಅವಳು ತನ್ನ ವಾತ್ಸಲ್ಯದ ಬೊಮ್ಮಗಳ ಬೆನ್ನ ಮೇಲೆ ಮಮತೆಯಿಂದ ಕೈಯಾಡಿಸುತ್ತ:—"ಮಗೂ, ನೀವಿಬ್ಬರೂ ಕೂಡಿಯಾದರೂ ಹುಲಿಯನ್ನು ಹೊಡೆದ ಸಂಗತಿಯು ನಿಜವೆಂದಂತಾಯಿತು."

"ಅಮ್ಮಾ, ನಾನು ಹೊಡೆದವನಲ್ಲ. ಅರುಣಳೇ ಹುಲಿಯನ್ನು ಹೊಡೆದದ್ದು ನಿಜವು." ಎಂದು ವಿಜಯಲಾಲನು ನುಡಿದನು.

"ವಿಜಯಲಾಲರೇ, ನೀವು ಹುಲಿಯನ್ನು ಇಕ್ಕಟ್ಟಿನಲ್ಲಿ ಸಿಲುಕಿಸದಿದ್ದರೆ ನನ್ನಿಂದ ಹೊಡೆಯುವದಾಗುತ್ತಿತ್ತೆ? ನೀವು ಅದಕ್ಕೆ ಓಡಿಹೋಗಲಿಕ್ಕೆ ಮಾರ್ಗ ದೊರೆಯದ ಹಾಗೆ ಮಾಡಿದಿರಿ. ನನ್ನ ಬಾಣವು ಆಯಕಟ್ಟಿಗೆ ಬಡೆದದ್ದರಿಂದ ಅದು ಸತ್ತುಬಿತ್ತು."

ಜಾಹ್ನವಿಯು ಅರುಣಳ ಭುಜವನ್ನು ಚಪ್ಪರಿಸಿ:—ಶಾಬಾಸ್! ವೀರ ಕುಮಾರಿ! ಶರಸಂಧಾನದಲ್ಲಿ ನೀನು ಬಹಳೇ ಚಪಲಳಾದಂತೆ ತೋರುವಿ! ಮಗೂ, ನೀನು ಶಸ್ತ್ರಾಸ್ತ್ರವಿದ್ಯೆಯನ್ನು ಯಾವಾಗ ಕಲಿತೆಯವ್ವಾ? ಇಷ್ಟು ಚಿಕ್ಕ ಬಾಲಿಕೆಯಾದ ನಿನ್ನಿಂದ ಈಗಲೆ ಕಲಿತನದ ಕಾರ್ಯಗಳು ಜರುಗಹತ್ತಿವೆ; ಮುಂದೆ ನೀನು ಹೆಸರುವಾಸಿಯಾಗುವದರಲ್ಲಿ ಸಂದೇಹವಿಲ್ಲ."

"ಅಮ್ಮಾ, ಅರುಣಕುಮಾರಿಯು ನನ್ನೊಡನೆ ಶಸ್ತ್ರಾಭ್ಯಾಸ ಮಾಡಹತ್ತಿ ಒಂದು ವರ್ಷವಾಯಿತು. ಗುರಿಹೊಡೆಯುವದರಲ್ಲಿ ಇವಳು ನನಗಿಂತಲೂ ನಿಪುಣಳಾಗಿರುವಳು. ಇವಳು ಖಡ್ಗವನ್ನು ತಿರುಗಿಸತೊಡಗಿದರೆ ಬೇರೆಯವರ ಅಸ್ತ್ರಗಳು ಇವಳಿಗೆ ತಾಕಲಾರವು. ಗುಡಿಸಲಲ್ಲಿ ಹುಟ್ಟಿ ಗುಡಿಸಲಲ್ಲಿಯೆ ಬೆಳೆದ ಈ ಜೀವನದ ಯೋಗ್ಯತೆಯು ದೊಡ್ಡದಿರುವದು. ಇಂದು ಇವಳು ಹುಲಿಯನ್ನು ಹೊಡೆದಾಗಿನಿಂದ ನನ್ನ ಮನಸ್ಸು ಕೌತುಕಕ್ಕೊಳಗಾಗಿದೆ. ನಾವು ಮಳೆಯ ಪರಿವೆಯಿಲ್ಲದೆ ಬೇಟೆಯನ್ನು ನಡೆಯಿಸಿದ್ದೆವು; ಆದರೆ ನೀವು ನಮ್ಮ ಹಾದಿಯನ್ನು ನೋಡುತ್ತಿರಬಹುದೆಂದು ಅರುಣಕುಮಾರಿಯು ನೆನಪು ಮಾಡಿದ ಮೇಲೆ ನಮ್ಮ ಗುಡಿಸಲಿಗೆ ಹೋಗಿ ಅರಿವೆಗಳನ್ನು ಬೇರೆ ಮಾಡಿಕೊಂಡು ಇತ್ತ ಹೊರಟು ಬಂದೆವು."

"ಇವಳ ತಂದೆಯಾದ ಕೃಷ್ಣಲಾಲನು ಮಗಳ ಸಾಹಸದ ಕೃತ್ಯಗಳನ್ನು ಕಾಣಲಿಲ್ಲ." ಎಂದು ನುಡಿಯುತ್ತಲೇ ಜಾಹ್ನವಿಯ ಕಣ್ಣುಗಳು ದುಃಖಾಶ್ರುಪರಿಪೂರ್ಣವಾದವು. ಕಂಠವು ಸದ್ಗದಿತವಾಗಿ ಬಾಯಿಂದ ಮಾತುಗಳೇ ಹೊರಡದಾದವು. ಅರುಣಕುಮಾರಿಯೂ ಕಣ್ಣೀರು ಸುರಿಸತೊಡಗಿದಳು. ಅವರ ಸ್ಥಿತಿಯನ್ನು ನೋಡಿ ವಿಜಯಲಾಲನಿಗೆ ವ್ಯಸನವಾಯಿತು. ಆಗ ಅವನು ಜಾಹ್ನವಿ ಅರುಣ

ಕುಮಾರಿಯರನ್ನು ಸಾಂತ್ವನಗೊಳಿಸುವದಕ್ಕಾಗಿ—"ಕೃಷ್ಣಲಾಲರು ಸುಲಿಗೆಗಾರರ ಕೈಯಲ್ಲಿ ಸಿಲುಕಿದ್ದೇನೋ ನಿಜವು. ಆದರೆ ಅವರ ಕೊಲೆಯಾಗಿರುವದೆಂಬ ಮಾತಿಗೆ ಆಧಾರಗಳಿಲ್ಲ. ಬಹಳವಾಡಿ ಅವರು ಸುಲಿಗೆಗಾರರ ಸೆರೆಯಲ್ಲಿರಬಹುದು; ಇಲ್ಲವೆ ಯುಕ್ತಿ-ಪ್ರಯುಕ್ತಿಗಳಿಂದ ಪಾರಾಗಿ ದೇಶಾಟನ ಮಾಡುತ್ತ ಎತ್ತಕಡೆಗಾದರೂ ಹೊರಟು ಹೋಗಿರಬಹುದು. ಕೃಷ್ಣಲಾಲರ ಕೊಲೆಯಾಗಿಲ್ಲವೆಂದು ಕೆಲವು ಜನರ ಅಭಿಪ್ರಾಯವಿದೆ. ಅವರು ಜೀವಂತವಾಗಿ ಉಳಿದಿದ್ದರೆ ಬೇಗನೆ ಇಲ್ಲಿಗೆ ಬರಬಹುದು. ನೀವು ಅವರ ಸಲುವಾಗಿ ದುಃಖಿಸಬೇಡಿರಿ. ಮುಪ್ಪಿನಿಂದ ಕೃಶರಾದ ನೀವು ಚಿಂತೆಯನ್ನು ಹಚ್ಚಿಕೊಂಡು ಮತ್ತಿಷ್ಟು ಕೊರಗಬೇಡಿರಿ. ಅವರು ಇಲ್ಲಿಗೆ ಬಂದು ತಮ್ಮ ಮಗಳ ಸಾಹಸದ ಕೃತ್ಯಗಳನ್ನೂ ಸದ್ಗುಣಗಳನ್ನೂ ಕಂಡು ಸಂತುಷ್ಟರಾಗುವರು. ನಿಮ್ಮ ಮನಸ್ಸನ್ನೂ ಸಮಾಧಾನ ಪಡಿಸುವರು. ಅವರು ಜೀವಂತರಾಗಿ ಉಳಿದಿರುವರೆಂದು ನನ್ನ ಮನೋದೇವತೆಯು ಹೇಳುತ್ತಲಿರುವದು."

"ವಿಜಯಲಾಲ, ನನ್ನ ಮಗನು ನನಗೆ ಭೆಟ್ಟಿಯನ್ನು ಕೊಡಬಹುದೆ? ತನ್ನ ಮಗಳನ್ನು ನೋಡಿ ಸಂಭ್ರಮಗೊಳ್ಳಬಹುದೆ?" ಬ್ರಾಹ್ಮಣಿಯು ನೆರಗಿನಿಂದ ಕಣ್ಣೀರನ್ನೊರಿಸಿಕೊಳ್ಳುತ್ತ:—"ಸುಲಿಗೆಗಾರರ ಕೈಯಿಂದ ಕೃಷ್ಣಲಾಲನು ಪಾರಾಗಿದ್ದರೆ ಇಲ್ಲಿಗೆ ಬರುತ್ತಿದ್ದನು. ನಿನ್ನ ಮೊದಲಿನ ಅಭಿಪ್ರಾಯದಂತೆ ಅವನು ಕಳ್ಳರ ಸೆರೆಯಲ್ಲಿರಬಹುದು. ದೈವವಶದಿಂದ ಪಾರಾಗಿ ಬಂದರೆ ಅವನ ಭೆಟ್ಟಿಯಾಗುವದು. ನನಗೆ ವೃದ್ಧಾಪ್ಯವು ಆವರಿಸಿರುವದರಿಂದ ಯಾವ ಕಾಲಕ್ಕೆ ಇಹಲೋಕವನ್ನು ತ್ಯಜಿಸುವೆನೆಂಬದರ ನಿಯಮವಿಲ್ಲ. ಕೃಷ್ಣಲಾಲನ ಆಗಮನವಾಗದಿದ್ದರೆ ಈ ಅರುಣಕುಮಾರಿಗೆ ರಕ್ಷಕರಾರು? ಈ ಬಾಲಿಕೆಯ ವಿಷಯವಾಗಿ ನಾನು ಬಹಳೇ ಚಿಂತಿಸತೊಡಗಿರುವೆನು."

"ಅಮ್ಮಾ, ನೀವು ಅರುಣಕುಮಾರಿಯ ವಿಷಯವಾಗಿ ಚಿಂತಿಸಬೇಡಿರಿ. ಇವಳು ಪರಕೀಯಳೆಂದು ನಾನು ತಿಳಿದಿಲ್ಲ. ನಾವು ಪರಸ್ಪರರು ಆತ್ಮೀಯ ಭಾವನೆಯಿಂದ ವರ್ತಿಸುತ್ತಿರುವೆವು. ನಮ್ಮ ಈಗಿನ ಪ್ರೇಮಳ ಸಹಚರ್ಯವನ್ನು ಸ್ಥಿರಪಡಿಸುವ ಭಾರವು ನಿಮ್ಮನ್ನೇ ಅವಲಂಬಿಸಿ...."

"ವಿಜಯಲಾಲ, ಅನುಮಾನವೇಕೆ? ಮಾತನಾಡು. ನಿಮ್ಮ ಪ್ರೇಮಳಸಹವಾಸವು ಕಡೆತನಕ ಉಳಿಯುವಂತೆ ಮಾಡಬೇಕೆಂದು ನಿನ್ನ ಅಭಿಪ್ರಾಯವಿರುವದಷ್ಟೆ? ಈ ಜಗತ್ತಿನಲ್ಲಿ ನನಗೆ ನನ್ನವರೆನ್ನುವವರು ನಿನ್ನ ಹೊರತು ಮತ್ತಾರಿರುವರು? ನೀನು ನನ್ನ ಅರುಣಳಿಗೆ ಅನುರೂಪನಾದ ವರನೆಂಬದು ನನ್ನ ಮನವರಿಕೆಯಾಗಿದೆ. ನಿಮ್ಮಿಬ್ಬರ ಮಂಗಲಮಹೋತ್ಸವವನ್ನು ಕಣ್ಣಾರೆ ಕಾಣಬೇಕೆಂಬ ಕುತೂಹಲವು ನನ್ನಲ್ಲಿ ಉತ್ಪನ್ನವಾಗಿದೆ. ಕೃಷ್ಣಲಾಲನು ಜೀವಂತನಾಗಿದ್ದರೆ ಬೇಗನೆ ಬರಬಹುದು. ಅವನು ಬೇಗನೆ ಬಂದರೆ ಇವಳ ವಿವಾಹ ಮಾಡಲಿಕ್ಕೆ ಅನುಕೂಲವಾಗುವದು. ಅರುಣಳನ್ನು ನಿನಗೆ ಲಗ್ನಮಾಡಿಕೊಡಬೇಕೆಂದು ನನ್ನ ಉತ್ಕಟೇಚ್ಛೆ

ಯಿರುವದೆಂದು ಮನಃಪೂರ್ವಕವಾಗಿ ಹೇಳುವೆನು. ಭಗವದಿಚ್ಛೆಯು ಹೇಗಿರುವದೋ ಹಾಗೆ ಆಗುವದು. ನನ್ನ ತರುವಾಯ ಈ ಅರುಣಾಳ ಯೋಗಕ್ಷೇಮಚಿಂತನೆಯನ್ನು ನಿನ್ನ ಹೊರತು ಮತ್ತಾರು ಮಾಡಬೇಕು? ಇವಳು ಇನ್ನೂ ಅಪ್ರಬುದ್ಧಳಿರುವಳು. ಈ ಬಾಲಿಕೆಗೆ ವಿವಾಹವೆಂದರೇನು, ಸಂಸಾರವೆಂದರೇನು ಮೊದಲಾದ ವಿಷಯಗಳ ಜ್ಞಾನವಿಲ್ಲ. ಸ್ವಲ್ಪ ಪ್ರಬುದ್ಧಳಾದೊಡನೆಯೆ ವಿವಾಹ ಕಾರ್ಯವನ್ನು ನೆರವೇರಿಸುವೆನು.''

ಜಾಹ್ನವಿಯ ಮಾತುಗಳು ವಿಜಯಲಾಲನಿಗೆ ಪರಮಾವಧಿಯಾದ ಆನಂದವನ್ನುಂಟು ಮಾಡಿದವು. ವಿಜಯಲಾಲನು ಅರುಣಾಳ ಮೇಲೆ ಚಿಕ್ಕಂದಿನಿಂದಲೂ ಮಮತೆ ಮಾಡುತ್ತಿದ್ದನು. ಅವನಿಗೆ ತಾರುಣ್ಯವು ಪ್ರಾಪ್ತವಾದ ಮೇಲೆ ಅವನಲ್ಲಿಯ ಮೊದಲಿನ ನಿರ್ವಿಕಾರವೂ ಪವಿತ್ರವೂ ಆದ ಪ್ರೇಮವು ರೂಪಾಂತರ ಹೊಂದಿತ್ತು. ಅರುಣಾಳಂತಹ ಆದರ್ಶ ಲಲನೆಯು ತನ್ನ ಗ್ರಹಿಣಿಯಾಗಬೇಕೆಂದು ಇಚ್ಛಿಸುತ್ತಿದ್ದರೆ ಅವನ ಅಪರಾಧವೇನು? ಜಾಹ್ನವಿಯ ಮನೋದಯವು ವ್ಯಕ್ತವಾದ ಮೇಲಂತು ಅವನ ಈ ಇಚ್ಛೆಯು ಪ್ರಬಲವಾಗತೊಡಗಿತು.

ಜಾಹ್ನವಿಯ ಮಾತುಗಳಿಂದ ಅರುಣಕುಮಾರಿಯ ಮನಸ್ಸಿನ ಮೇಲೆ ಸುಪರಿಣಾಮವಾಗಲಿ, ದುಷ್ಪರಿಣಾಮವಾಗಲಿ ಉಂಟಾಗಲಿಲ್ಲ. ಯಾವ ಕಾರಣದಿಂದಲೋ ಏನೋ ವಿಷಯಾಂತರ ಮಾಡಬೇಕೆಂಬ ವಿಚಾರವು ಅವಳಲ್ಲಿ ಹುಟ್ಟಿತು. ಆಗ ಅವಳು ಜಾಹ್ನವಿಯನ್ನು ಕುರಿತು—''ಅಮ್ಮಾ, ವಿಜಯಲಾಲರು ಇತ್ತೀಚಿಗೆ ನಮ್ಮನ್ನು ಉಪೇಕ್ಷಿಸುತ್ತಿರುವಂತೆ ತೋರುವದು ಈಗೆರಡು ದಿವಸವಂತು ಅವರ ದರ್ಶನವೇ ಇಲ್ಲ. ನಿರಾಶ್ರಿತರಾಗಿದ್ದ ನಮ್ಮನ್ನು ಇವರು ಈ ಪರಿಯಾಗಿ ಉಪೇಕ್ಷಿಸತೊಡಗಿದರೆ ಮುಂದೆ ಗತಿಯೇನು?''

''ತಮ್ಮಾ, ವಿಜಯಲಾಲ, ನೀನು ಎರಡು ದಿನಗಳಿಂದ ಬಾರದ್ದಕ್ಕಾಗಿ ಮನಸ್ಸು ಕ್ಲೇಶಗೊಂಡಿತ್ತು. ಅಂತೆಯೆ ನಿನ್ನನ್ನು ಕರೆಯುವದಕ್ಕಾಗಿ ಅರುಣಕುಮಾರಿಯನ್ನು ಕಳುಹಿಸಿದೆನು. ನೀನು ಇಲ್ಲಿರದಿದ್ದರೆ ಕುರುಡರ ಕೈಯೊಳಗಿನ ಕೋಲು ಹೋದಂತೆ ನನ್ನ ಅವಸ್ಥೆಯಾಗುವದು. ಅರುಣಕುಮಾರಿಗೆ ನೀನಿಲ್ಲದೆ ಹೊತ್ತು ಹೋಗುವದಿಲ್ಲ. ಇನ್ನು ಮೇಲೆ ನೀನು ದಿನಾಲು ಒಮ್ಮೆಯಾದರೂ ಈ ಬಡವಿಯ ಗುಡಿಸಲಿಗೆ ಬಂದು ಹೋಗು.''

ಜಾಹ್ನವಿಯು ಹೀಗೆ ನುಡಿದ ಮೇಲೆ ಅರುಣಕುಮಾರಿಯು ಮ್ಲಾನವದನೆಯಾಗಿ—''ಅಮ್ಮಾ, ವಿಜಯಲಾಲರು ಯುದ್ಧಕಲೆಯ ಅಭ್ಯಾಸ ಮಾಡುವದಕ್ಕಾಗಿ ಕೆಲವು ದಿವಸ ಬೇರೆ ಸ್ಥಳಕ್ಕೆ ಹೋಗುವವರಿರುವರಂತೆ.''

''ವಿಜಯಲಾಲ!'' ಜಾಹ್ನವಿಯು ಗಾಬರಿಯಿಂದ—''ಅರುಣಾಳು ಅನ್ನುತ್ತಿರುವ ಮಾತು ನಿಜವೇನು?''

''ಹೀಗೆಯೆ ಸ್ವಸ್ಥವಾಗಿ ಕುಳಿತುಕೊಂಡರೆ ಹೇಗೆ? ವೀರ ರಜಪೂತ ವಂಶದಲ್ಲಿ

ಹುಟ್ಟಿದ ಮೇಲೆ ಸ್ವಧರ್ಮೋಚಿತವಾದ ಕರ್ತವ್ಯಕರ್ಮರತನಾಗದಿರುವದು ವಿಹಿತವೆ? ಈಗಿನ ವನ್ಯ ಅವಸ್ಥೆಯನ್ನು ನೀಗಿ ಅಭ್ಯುದಯವನ್ನು ಹೊಂದಬೇಕಾದರೆ ಕರ್ತವ್ಯ ಪ್ರಭಾವವನ್ನು ತೋರಿಸಬೇಕಾಗುವದು. ಕ್ಷತ್ರಿಯನು ತೇಜಸ್ವಿಯೆನಿಸಿಕೊಳ್ಳುವದಕ್ಕೆ ಶಸ್ತ್ರಾಸ್ತ್ರ ವಿದ್ಯೆಯು ಆವಶ್ಯಕವಿರುವದಲ್ಲವೆ?"

ವಿಜಯಲಾಲನ ಮಾತುಗಳು ಜಾಹ್ನವಿಗೆ ಸಮಂಜಸವಾಗಿ ಕಂಡವು. ನಿರಾಧಾರ ಸ್ಥಿತಿಯಲ್ಲಿದ್ದ ತನ್ನನ್ನೂ ಅರುಣಕುಮಾರಿಯನ್ನೂ ವಿಜಯಲಾಲನು ತ್ಯಜಿಸಿ ಹೋದರೆ ತಾವು ಗಂಡಾಂತರದಲ್ಲಿ ಬೀಳುವೆವೆಂದು ಅವಳು ಖಂಡಿತವಾಗಿ ತಿಳಿದಳು; ಆದರೆ ತಮ್ಮ ಸೌಖ್ಯಕ್ಕಾಗಿ ಪ್ರಗತಿ ಹೊಂದುವ ಜೀವನದ ಮುಂದೋಟವನ್ನು ಕುಂಠಿತಮಾಡಬಾರದೆಂದು ಅವಳು ಸುಮ್ಮನಿದ್ದಳು. ಜಾಹ್ನವಿಯು ಮೌನವಾಗಿದ್ದುದು ಸಹನವಾಗದೆ ಅರುಣಕುಮಾರಿಯು ಏರಿಕೆಯ ಧ್ವನಿಯಿಂದ—"ಅಮ್ಮಾ, ಇವರು ನಮ್ಮನ್ನು ಈ ಅರಣ್ಯದಲ್ಲಿ ಬಿಟ್ಟು ಹೋದರೆ ಗತಿಯೇನು? ನೀನು ವೃದ್ಧಳು; ನಾನು ಅಪ್ರಬುದ್ಧ ಬಾಲಿಕೆಯು. ನಮ್ಮ ಯೋಗಕ್ಷೇಮ ಚಿಂತನೆಯನ್ನು ಮಾಡುವವರು ಇವರ ಹೊರತು ಈ ಜಗತ್ತಿನಲ್ಲಿ ಮತ್ತಾರಿರುವರು?"

"ಮಗೂ, ನಿನ್ನ ಮಾತು ನಿಜವು. ನಮ್ಮ ಸಲುವಾಗಿ ವಿಜಯಲಾಲನು ತನ್ನ ಆಯುಷ್ಯವನ್ನು ವ್ಯರ್ಥಮಾಡಿಕೊಳ್ಳುವದೇಕೆ? ನಮಗೆ ದೇವರೇ ಗತಿ! ಜಗತ್ತನ್ನೇ ರಕ್ಷಿಸುವ ಪರಮಾತ್ಮನು ನಮ್ಮನ್ನು ರಕ್ಷಿಸಲಾರನೆ?"

"ತಂದೆಯವರು ಬರುವವರೆಗಾದರೂ ಈ ವಿಜಯಲಾಲರು ನಮ್ಮನ್ನು ತ್ಯಜಿಸಿ ಹೋಗಬಾರದೆಂದು ನನ್ನ ಅಭಿಪ್ರಾಯವುಂಟು. ಶಸ್ತ್ರಾಸ್ತ್ರ ವಿದ್ಯಾಭ್ಯಾಸವನ್ನು ಇಲ್ಲಿಯೇ ಮಾಡಲಿಕ್ಕೆ ಅಡ್ಡಿಯೇನು?"

ಅರುಣಕುರಿಯ ಮಾತುಗಳು ಜಾಹ್ನವಿಗೆ ಯೋಗ್ಯವಾಗಿ ಕಂಡವು ಆಗ ಅವಳು ವಿಜಯಲಾಲನನ್ನು ಕುರಿತು—"ತಮ್ಮಾ, ನೀನು ಅರುಣಳ ಹೇಳಿಕೆಯ ಮೇರೆಗೆ ವರ್ತಿಸಿದರೆ ಒಳಿತಾಗುವದು."

ವಿಜಯಲಾಲನು ಸ್ವಲ್ಪ ವೇಳೆ ವಿಚಾರಿಸಿ:—"ಅಮ್ಮಾ, ನಾನು ನಿಮ್ಮ ಆಜ್ಞೆಯ ಹೊರತಿಲ್ಲ. ನಾನು ಅರುಣ ಕುಮಾರಿಯ ಸಹವಾಸದಲ್ಲಿಯೇ ಇದ್ದು ಅವಳೊಡನೆ ಶಸ್ತ್ರಾಸ್ತ್ರ ವಿದ್ಯಾಭ್ಯಾಸ ಮಾಡುತ್ತಿರುವೆನು."

"ಅಮ್ಮಾ!" ಅರುಣಕುಮಾರಿಯು ವಿಜಯಲಾಲನ ಮಾತುಗಳಿಂದ ಆನಂದವುಳ್ಳವಳಾಗಿ—"ವಿಜಯಲಾಲರು ನಿಮ್ಮ ಆಜ್ಞೆಗೆ ಹೊರತಿಲ್ಲ. ಇವರು ಸದ್ಗುಣಮಂಡಿತರಿರುವರು. ದೀನರ ಮೇಲೆ ಇವರ ಅಂತಃಕರಣ ಬಹಳ."

"ಮಗೂ, ಅರುಣ, ವಿಜಯಲಾಲನು ಗುಣಾಢ್ಯನಿರುವದರಿಂದಲೆ ನಾನು ನಿನ್ನನ್ನು ಇವನಿಗೆ ಧಾರೆಯೆರೆದು ಕೊಡಬೇಕೆಂದು ಯೋಚಿಸಿರುವೆನು."

ಜಾಹ್ನವಿಯ ಮಾತಿನಿಂದ ಅರುಣಳಿಗೆ ಲಜ್ಜೆಯಾಯಿತು. ಅವಳು ಕೆಲವು ವೇಳೆ ಮುಖವನ್ನು ಬಾಗಿಸಿ ಕುಳಿತುಕೊಂಡಳು. ಅನಂತರದಲ್ಲಿ ವಿಷಯಾಂತರ

ಮಾಡಬೇಕೆಂದು—"ಅಮ್ಮಾ, ಇಂದು ನಾವು ಬಹಳೇ ಹಸಿದಿರುವೆವು. ಮಧ್ಯಾಹ್ನದ ಅಡಗೆಯು ಉಳಿದಿರುವದೇನು?"

"ಅರುಣ, ನಾನು ಮಧ್ಯಾಹ್ನದಲ್ಲ ಅಡಿಗೆಯನ್ನೇ ಮಾಡಿಲ್ಲ. ವಿಜಯಲಾಲ ನನ್ನು ಮಧ್ಯಾಹ್ನಕ್ಕೆ ಕರೆದುಕೊಂಡು ಬರುವೆನೆಂದು ಹೇಳಿಪ್ಪೆ. ನೀವು ವೇಳೆಗೆ ಬಾರದ್ದರಿಂದ ಮನಸ್ಸಿನಲ್ಲಿ ಇಲ್ಲದ ಆಲೋಚನೆಗಳು ಹುಟ್ಟಿದವು. ಮನಸ್ಸಿಗೆ ಸ್ವಸ್ಥವಿಲ್ಲದಾಗ ಅಡಿಗೆಯನ್ನು ಹೇಗೆ ಮಾಡಲಿ?"

ಜಾಹ್ನವಿಯು ಸಂಜೆಯ ವರೆಗೆ ಉಪವಾಸವಿದ್ದ ಸಂಗತಿಯನ್ನು ಕೇಳಿ ಅರುಣ ಕುಮಾರಿಯ ಹಾಗು ವಿಜಯಲಾಲನ ಮನಸ್ಸಿಗೆ ಕ್ಲೇಶವಾಯಿತು. ಆಗ ವಿಜಯ ಲಾಲನು ಕಕ್ಕುಲತೆಯಿಂದ—"ಅಮ್ಮಾ, ಮುಪ್ಪಿನವರಾದ ನೀವು ಉಪವಾಸ ಬಿದ್ದು ದೇಹವನ್ನು ಮತ್ತಿಷ್ಟು ಕ್ಷೀಣಮಾಡಿಕೊಳ್ಳುವಿರಿ" ಎಂದು ನುಡಿದು ಅರುಣಳನ್ನು ಕುರಿತು—"ಅರುಣಕುಮಾರಿ, ಹೋಗು; ಬೇಗನೆ ಅಡಿಗೆಯನ್ನು ಸಿದ್ಧಪಡಿಸು."

ಅರುಣಕುಮಾರಿಯು ಅಡಿಗೆ ಮಾಡುವದಕ್ಕಾಗಿ ಅಲ್ಲಿಂದ ಎದ್ದಳು. ಆಗ ಅವಳ ಮನಸ್ಸು ಗೊಂದಲದಲ್ಲಿ ಬಿದ್ದಿತ್ತು. ವಿಜಯಲಾಲನು ತನ್ನ ಪರಾಕ್ರಮದ ಸುದ್ದಿಯನ್ನು ಹೇಳುತ್ತಿರುವಾಗ ತನ್ನ ಅಮ್ಮನ ಮುಖದಲ್ಲಿಯ ಆನಂದದ ಚಿಹ್ನವು ಒಮ್ಮೆಲೆ ನಷ್ಟವಾಗಿ, ಆ ಸ್ಥಾನವನ್ನು ಕ್ಲೇಶದ ಚಿಹ್ನವು ಆವರಿಸಿದ್ದನ್ನು ನೋಡಿ ಅರುಣಕುಮಾರಿಯು ವಿಚಾರಕ್ಕೊಳಗಾಗಿದ್ದಳು. ಹೀಗೆ ವ್ಯತ್ಯಾಸ್ಯಂತರವಾದ ಕಾರಣವನ್ನು ವಿಚಾರಿಸಬೇಕೆಂದು ಅವಳು ನಿರ್ಧರಿಸಿದ್ದಳು. ವಿಜಯಲಾಲನು ಇಲ್ಲದ ವೇಳೆಯಲ್ಲ ಅವಳು ಈ ವಿಷಯವನ್ನು ತೆಗೆಯಬೇಕೆಂದು ಯೋಚಿಸಿಕೊಂಡು ಸುಮ್ಮನಾದಳು. ಅರುಣಕುಮಾರಿಯು ಅಡಿಗೆಗೆ ಪ್ರಾರಂಭಿಸಿದ ಕೂಡಲೆ, ವಿಜಯ ಲಾಲನು ಸಂಧ್ಯಾಸಮಯದ ಸೃಷ್ಟಿ ಸೌಂದರ್ಯವನ್ನು ನಿರೀಕ್ಷಿಸುವದಕ್ಕೆ ಗುಡಿಸಲ ಹೊರಗೆ ಹೋದನು. ಈ ಸಂಧಿಯನ್ನು ಸಾಧಿಸಿ ಅರುಣಕುಮಾರಿಯು—"ಅಮ್ಮಾ, ವಿಜಯಲಾಲರು ನನ್ನ ಶಸ್ತ್ರಚಾಪಲ್ಯವನ್ನು ಬಣ್ಣಿಸುವಾಗ ಆನಂದಯುಕ್ತವಾದ ನಿನ್ನ ಮುಖವು ಒಮ್ಮೆಲೆ ಕಳೆಗುಂದಿದ ಕಾರಣವೇನು? ಕಣ್ಣುಗಳಲ್ಲಿ ದುಃಖಾಶ್ರುಗಳು ತುಂಬಿದವೇಕೆ?"

"ಅರುಣ," ಜಾಹ್ನವಿಯು ಮೊಮ್ಮಗಳ ಕುಶಾಗ್ರಬುದ್ಧಿಯನ್ನೂ ಚಿಕಿತ್ಸಕ ಸ್ವಭಾವವನ್ನೂ ಕಂಡು ಬೆರಗಾಗಿ—"ನೀನು ಜಾಣಳಿರುವೆಯಮ್ಮಾ! ಮನಸ್ಸಿನೊಳಗಿನ ಸಂಗತಿಯನ್ನು ಮುಖಚರ್ಯೆಯಮೇಲಿಂದ ನೀನು ಕಂಡು ಹಿಡಿಯುವೆ. ನೀನು ನನ್ನ ವಿಷಾದದ ಸಂಗತಿಯನ್ನು ತೆಗೆದುಕೊಂಡು ಮಾಡುವದೇನು?"

"ನನ್ನ ಮುಂದೆ ನೀನು ಮನೋಗತವನ್ನು ಬಚ್ಚಿಡುವೆಯಾ?" ಅರುಣ ಕುಮಾರಿಯು ಸಣ್ಣಮೋರೆಮಾಡಿ ನುಡಿದಳು.

"ಮತ್ತೆ ಯಾವಾಗಾದರೂ ಹೇಳುವೆನು. ಈಗ ನೀನು ಅವಸರ ಮಾಡ ಬೇಡ. ಈಗ ನೀನೂ ಹಸಿದಿರುವೆ; ವಿಜಯಲಾಲನೂ ಹಸಿದಿರುವನು ಬೇಗನೆ

ಊಟಮಾಡಿರಿ. ಅನುವು ದೊರೆತಾಗ ನಾನು ನಿನಗೆ ಎಲ್ಲ ಸಂಗತಿಗಳನ್ನು ಹೇಳುವೆನು."

ಜಾಹ್ನವಿಯ ಮಾತುಗಳಿಂದ ಅರುಣಳ ಮನಸ್ಸು ಮತ್ತಿಷ್ಟು ಗೊಂದಲದಲ್ಲಿ ಬಿದ್ದಿತು.

---

## ಸ್ವಾಮಿ ಅಜಿತಾನಂದ.

ಶರದೃತುವಿನ ಸುಂದರವಾದ ರಾತ್ರಿಯು. ನೀಲಾಕಾಶದಲ್ಲಿ ಉಜ್ವಲ ಚಂದ್ರಮನು ಲಕಲಕಿಸತೊಡಗಿದ್ದನು. ಧವಲ ಜ್ಯೋತ್ಸ್ನಾ ಪ್ರಕಾಶದಲ್ಲಿ ಪ್ರಕೃತಿದೇವಿಯು ನೊಬಗುಗೊಂಡಿದ್ದಳು. ಸೃಷ್ಟಿಯ ಈ ವಿಲಕ್ಷಣವಾದ ಶೋಭೆಯನ್ನು ನೋಡಿ ತಾರಕಾಗಣವು ಆನಂದದಿಂದ ಹಾಸ್ಯಗೈಯುತ್ತಿತ್ತು. ಮುರ್ಶಿದಾಬಾದ ರಾಜಧಾನಿಯಿಂದ ಹದಿನೈದು ಕ್ರೋಶಗಳ ಅಂತರದಲ್ಲಿದ್ದ ಒಂದು ನಿಬಿಡವಾದ ಅರಣ್ಯದೊಳಗಿನ ಒಂದು ತಟಾಕದ ತೀರದಲ್ಲಿ ಇಬ್ಬರು ನೈಸರ್ಗಿಕ ಸೃಷ್ಟಿಸೌಂದರ್ಯವನ್ನು ನಿರೀಕ್ಷಿಸುತ್ತ ಕುಳಿತಿದ್ದರು. ಆ ಸರೋವರದ ನೀರು ಅತ್ಯಂತ ಶುಭ್ರವಾಗಿದ್ದದರಿಂದ ಚಂದ್ರಿಕೆಯ ಪ್ರಕಾಶದಿಂದ ಮತ್ತಿಷ್ಟು ಶೋಭೆ ಹೊಂದಿದ್ದವು. ವಾಯುಲಹರಿಯಿಂದೇಳುವ ಜಲತರಂಗಗಳಿಂದಲೂ, ಖಳಖಳ ಸಪ್ಪಳದಿಂದಲೂ ಆ ಸರೋವರವು ಒಳ್ಳೆಯ ಚಿತ್ತಾಕರ್ಷಕವಾಗಿತ್ತು. ಆ ಸರೋವರದಲ್ಲಿ ಕಮಲಗಳು ಬಹಳವಾಗಿದ್ದುದರಿಂದ ಅದಕ್ಕೆ ಪದ್ಮಸರೋವರವೆಂಬ ಅನ್ವರ್ಥಕನಾಮವು ಬಂದಿತ್ತು.

ಪದ್ಮಸರೋವರದ ತೀರದಲ್ಲಿ ಕುಳಿತ ಇಬ್ಬರು ಮನುಷ್ಯರಲ್ಲಿ ಒಬ್ಬನು ತರುಣನಾಗಿದ್ದನು; ಮತ್ತೊಬ್ಬನು ವೃದ್ಧನಿದ್ದು ಜಟಾವಲ್ಕಲಧಾರಿಯಾಗಿದ್ದನು. ಅವನ ಮುಖವು ಕಾಂತಿಯುಕ್ತವಾಗಿದ್ದು ಕೌಮುದಿಯ ಪ್ರಕಾಶದಲ್ಲಿ ಮತ್ತಿಷ್ಟು ತೇಜಸ್ವಿಯಾಗಿ ಕಾಣುತ್ತಿತ್ತು. ಆ ತಪೋನಿಧಿಯನ್ನು ನೋಡಿದ ಕೂಡಲೆ ಜನರಲ್ಲಿ ಪೂಜ್ಯಬುದ್ಧಿಯು ಉತ್ಪನ್ನವಾಗುತ್ತಿತ್ತು. ಕೆಲವು ವೇಳೆಯ ವರೆಗೆ ಇಬ್ಬರೂ ಮೌನವಾಗಿ ಕುಳಿತಿದ್ದರು. ಅನಂತರದಲ್ಲಿ ತರುಣನು ಮೂಕವೃತ್ತಿಯನ್ನು ತ್ಯಜಿಸಿ—"ಮಹಾತ್ಮನ್, ನಾನು ಇನ್ನೂ ಎಷ್ಟು ದಿನಗಳ ವರೆಗೆ ಈ ಪಾರತಂತ್ರ್ಯ ದುಃಖವನ್ನನುಭವಿಸಬೇಕು? ಕೊಲೆಗಡಕರೂ, ನೀಚರೂ ಆದ ಸುಲಿಗೆಗಾರರ ದುಷ್ಕೃತಿಗಳನ್ನು ನೋಡಿ ನನಗೆ ಮರಣಪ್ರಾಯವಾದ ವ್ಯಥೆಯಾಗುವದು. ಈ ನೀಚರಿಗೆ ಮಂಕುಬೂದಿ ಹಚ್ಚಿ ಇಷ್ಟರಲ್ಲಿ ಪಾರಾಗಿ ಹೋಗುತ್ತಿದ್ದೆನು; ಆದರೆ ನೀವು ನನಗೆ ಅಡ್ಡಿಮಾಡತೊಡಗಿರುವದರಿಂದ ನಿರುಪಾಯನಾಗಿರುವೆನು. ನನ್ನ ವೃದ್ಧಮಾತೆಯೂ ಅಲ್ಪವಯಸ್ಕಳಾದ ಕುಮಾರಿಯೂ ಯಾವ ಅವಸ್ಥೆ ಹೊಂದಿರುವರೋ ಏನೋ? ನಿರಾಶ್ರಿತರಾದ ಅವರು ಎಷ್ಟು ಬಗೆಯ ಸಂಕಟಗಳಿಗೊಳಗಾಗಿರುವರೆಂಬದನ್ನು ಕಲ್ಪಿಸಿದರೆ ಅಂತಃ

ಕರಣಕ್ಕೆ ಬರೆಕೊಟ್ಟಂತಾಗುವದು. ಸ್ವಾಮಿಮಹಾರಾಜರೆ, ನೀವು ಸದುಪದೇಶದಿಂದ ನನ್ನ ಪ್ರಯಾಣಕ್ಕೆ ಅಡ್ಡಿಯನ್ನುಂಟುಮಾಡುತ್ತಿರಬಹುದು. ನಾನು ಇಲ್ಲಿರುವದ ರಿಂದ ನನ್ನ ತಾಯಿಯೂ ವಾತ್ಸಲ್ಯದ ಮಗಳೂ ಹೇಗೆ ರಕ್ಷಣೆ ಹೊಂದಬೇಕು?"

"ವೀರಮಾಣಿಕ," ಸ್ವಾಮಿಮಹಾರಾಜರು ದಯಾರ್ದ್ರತೆಯಿಂದ --"ನೀನು ನಿನ್ನ ತಾಯಿಯ ಹಾಗು ಮಗಳ ವಿಷಯವಾಗಿ ಯೋಚನೆ ಮಾಡಬೇಡ. ಜಗನ್ನಾಯಕಿಯಾದ ಜಗದಂಬೆಯು ಇಡೀ ಜಗತ್ತನ್ನೇ ಪೋಷಿಸುತ್ತಿರುವಳು. ಅವಳ ಸಂಕೇತದಂತೆ ಸೃಷ್ಟಿಯೊಳಗಿನ ಎಲ್ಲ ಕಾರ್ಯಗಳು ನಡೆಯುತ್ತವೆ. ಜಗನ್ಮಾತೆಯ ಅನುಗ್ರಹವೊಂದಿದ್ದರೆ ಮನುಷ್ಯರಿಗೆ ಯಾವ ಬಗೆಯ ದುಃಖವೂ ಘಟಿಸುವದಿಲ್ಲ; ಅವಳು ಕ್ಷೋಭೆಗೊಂಡರೆ ಜೀವಿಗಳಿಗೆ ಮತ್ತಾರು ತಾರಕರುಂಟು? ನೀನು ಇನ್ನೂ ಕೆಲವು ದಿನಗಳ ವರೆಗೆ ಇಲ್ಲಿಯೇ ಇದ್ದರೆ ನಿನ್ನ ಭಾಗ್ಯೋದಯವಾಗುವದು. ಅಂತೆಯೆ ನಾನು ನಿನ್ನನ್ನು ತಡೆಯುತ್ತಿರುವೆನು."

"ನಾನು ನಿಮ್ಮ ಆಜ್ಞೆಗೆ ಹೊರತಿಲ್ಲ. ನಿಮ್ಮ ಕೃಪೆಯಿಂದಲೆ ನಾನು ಸುರಕ್ಷಿತನಾಗಿ ಉಳಿದಿರುವೆನು. ಅಸುರಸಮನಾದ ವನರಾಜನು ನನ್ನ ಕೊಲೆಮಾಡಬೇಕೆಂದು ಸಾಹಸ ನಡೆಯಿಸಿದಾಗ ನೀವೇ ಅವನ ಮನಸ್ಸು ತಿರುಗಿಸಿದಿರೆಂಬದನ್ನು ನಾನು ಕೇಳಿರುವೆನು. ಉಪಕಾರ ಕರ್ತರಾದ ನಿಮ್ಮ ಅಪ್ಪಣೆಯನ್ನು ಮೀರುವಂತಹ ನರಾಧಮನು ನಾನಲ್ಲ ಸದ್ಯದ ಸ್ಥಿತಿಯಲ್ಲಿ ತಾಯಿಯ ಹಾಗು ಮಗಳ ವಿಷಯವಾಗಿ ನನ್ನ ಮನಸ್ಸು ಕ್ಲೇಶಗೊಂಡಿರುವದು. ಅವರು ಸುರಕ್ಷಿತರಾಗಿ ಬಾಳಲಿಕ್ಕೆ ಉಪಾಯವನ್ನು ತಿಳಿಸಿದರೆ ನಾನು ನಿಶ್ಚಿಂತನಾಗುವೆನು."

"ಮಾಣಿಕ," ಸ್ವಾಮಿಮಹಾರಾಜರು ಮಾಣಿಕನನ್ನು ಕುರಿತು--"ಇಲ್ಲಿಯವರೆಗೆ ನಿನ್ನ ತಾಯಿಯೂ ಮಗಳೂ ಸುರಕ್ಷಿತರಾಗಿರುವರು. ನಿನ್ನ ಕುಮಾರಿಯನ್ನು ಯುಕ್ತಿಪ್ರಯುಕ್ತಿಯಿಂದ ಇಲ್ಲಿಗೆ ಕರೆಯಿಸಿಕೊಳ್ಳುವೆನು. ಈಗಾದರೂ ನಿನ್ನ ಮನಸ್ಸು ಸಮಾಧಾನ ಹೊಂದಿತೆ?"

"ಮಹಾತ್ಮರೆ, ಕುಮಾರಿಯೊಬ್ಬಳೇ ಇಲ್ಲಿಗೆ ಬಂದರೆ ವಯೋತೀತಳಾದ ನನ್ನ ತಾಯಿಯ ಅವಸ್ಥೆಯೇನು?"

"ನೀನು ನಿನ್ನ ತಾಯಿಯ ವಿಷಯವಾಗಿಯೂ ಚಿಂತಿಸುವ ಕಾರಣವಿಲ್ಲ. ಅವಳು ನಾಲ್ಕಾರುದಿನಗಳಲ್ಲಿ ತನ್ನ ಜೀವನ ಯಾತ್ರೆಯನ್ನು ಮುಗಿಸುವಳು. ನೀನು ಅವಳನ್ನು ಮಾತ್ರ ಇಲ್ಲಿಗೆ ಕರೆಯಿಸುವ ಆಲೋಚನೆ ಮಾಡಬೇಡ"

ತನ್ನ ತಾಯಿಯು ಬೇಗನೆ ಜೀವನ ಯಾತ್ರೆಯನ್ನು ಮುಗಿಸುವವಳಿರುವಳೆಂಬ ಸಂಗತಿಯು ಸ್ವಾಮಿಮಹಾರಾಜರಿಂದ ತಿಳಿದ ಕೂಡಲೆ ಮಾಣಿಕನ ಕಣ್ಣುಗಳಲ್ಲಿ ದುಃಖಾಶ್ರುಗಳು ತುಂಬಿದವು. ಅವನ ಸಚಿಂತ ಮುಖಮುದ್ರೆಯನ್ನು ನೋಡಿ ಸ್ವಾಮಿಮಹಾರಾಜರು—"ಮಾಣಿಕ, ನೀನು ದುಃಖಮಾಡುವದೇಕೆ? ಹುಟ್ಟಿದ ಪ್ರಾಣಿಗೆ ಮರಣವು ನಿಶ್ಚಯವಾಗಿ ಒದಗತಕ್ಕದ್ದೇ. ಅದಕ್ಕಾಗಿ ನೀನು

ಚಿಂತಿಸುವ ಕಾರಣವಿಲ್ಲ. ತಾಯಿಯ ಮರಣಕಾಲಕ್ಕೆ ಬಳಿಯಲ್ಲಿರಬೇಕೆಂದು ನೀನು ಇಚ್ಛಿಸುತ್ತಿರಬಹುದು. ನೀನು ಇಲ್ಲಿಂದ ಹೋದರೆ ಮುಂದೆ ದೊರೆಯಬಹುದಾದ ಸೌಖ್ಯಕ್ಕೆ ಎರವಾಗುವೆ.''

ಸ್ವಾಮಿಮಹಾರಾಜರು ತ್ರಿಕಾಲಜ್ಞಾನಿಗಳು. ಅವರು ಹೇಳುತ್ತಿರುವ ಮಾತಿನಲ್ಲಿ ಮಾಣಿಕನು ವಿಶ್ವಾಸವುಳ್ಳವನಾಗಿ ಸುಮ್ಮನಾದನು. ಕೆಲವು ವೇಳೆಯಮೇಲೆ ಅವನು—''ಮಹಾರಾಜರೆ, ನನ್ನ ಕುಮಾರಿಯನ್ನು ಇಲ್ಲಿಗೆ ಕರೆತರಲಿಕ್ಕೆ ಯಾವ ಹಂಚಿಕೆ ಮಾಡುವಿರಿ? ಅವಳನ್ನು ಇಲ್ಲಿಗೆ ಯಾರು ಕರೆತರುವರು?''

''ಮಾಣಿಕ, ನಿನ್ನ ಕುಮಾರಿಯನ್ನು ಹೇಗೆ ಕರೆಯಿಸಬೇಕೆಂಬದರಬಗ್ಗೆ ನಾನು ಹಂಚಿಕೆ ಹುಡುಕಿರುವೆನು. ಈಗಲೇ ನಿನಗೆ ಎಲ್ಲ ಸಂಗತಿಗಳು ಗೊತ್ತಾಗುವವು. ನಿನ್ನ ಕುಮಾರಿಯು ಎಲ್ಲಿರುವಳು?''

''ಕಪೋತಾಕ್ಷೀ ತೀರದಲ್ಲಿದ್ದ ಪರ್ಣಶಾಲೆಯಲ್ಲಿ. ನಮ್ಮ ಗುಡಿಸಲು ಇಲ್ಲಿಂದ ಎಂಟು ಕ್ರೋಶಗಳ ಮೇಲಿರುವದು.''

''ಏನೂ ಅಡ್ಡಿಯಿಲ್ಲ. ನಾಳೆಗೇ ನಿನ್ನ ಮಗಳನ್ನು ಕರೆಯಿಸುವ ವ್ಯವಸ್ಥೆ ಮಾಡುವೆನು. ದೇವಾಲಯಕ್ಕೆ ಹೋಗೋಣ ನಡೆ.''

ಸ್ವಾಮಿಮಹಾರಾಜರೂ ನೀರ ಮಾಣಿಕನೂ ಪದ್ಮಸರೋವರದ ತೀರದಿಂದ ಹೊರಟು, ಸಮೀಪದಲ್ಲಿದ್ದ ಜಗದಂಬೆಯ ದೇವಸ್ಥಾನವನ್ನು ಪ್ರವೇಶಿಸಿದರು. ಅವರು ಒಳಗೆ ಹೋಗಿ ದೇವಿಯ ಸಮ್ಮುಖದಲ್ಲಿ ನಿಂತು ಕೈ ಜೋಡಿಸಿ—''ಜಯ ಜಗದಂಬ! ಜಯ ಜಗದಂಬ!'' ಎಂದು ಪ್ರಾರ್ಥನೆ ಮಾಡಿ ಅಲ್ಲಿಯೆ ಕುಳಿತರು. ಅನಂತರದಲ್ಲಿ ಸ್ವಾಮಿಮಹಾರಾಜರು ತಾರಕಸ್ವರದಿಂದ—''ಹೊರಗೆ ಯಾರಿರುವಿರಿ?'' ಎಂದು ಕೂಗಿದರು. ಕೂಡಲೆ ಒಬ್ಬನು ಅಲ್ಲಿಗೆ ಬಂದು ಕೈ ಜೋಡಿಸಿ ವಿನಯದಿಂದ—''ಸ್ವಾಮಿ ಮಹಾರಾಜರೆ, ಅಪ್ಪಣೆಯಾಗಬೇಕು.''

''ಈಗಲೆ ವನರಾಜನನ್ನು ಕಳುಹಿಸು.''

ಸ್ವಾಮಿಮಹಾರಾಜರು ಹೀಗೆ ಆಜ್ಞಾಪಿಸಿದ ಮೇಲೆ ಆ ಮನುಷ್ಯನು ಅಲ್ಲಿಂದ ಹೊರಟನು. ಮುಂದೆ ಸ್ವಲ್ಪ ವೇಳೆಯಲ್ಲಿಯೆ ಅಚ್ಚ ಕರಿಯ ಆರೆಯಂತೆ ಬಣ್ಣವಿದ್ದವನೂ, ಆದರಂತೆಯೆ ಗಟ್ಟಿಮುಟ್ಟಾದವನೂ, ಟೊಣಪನೂ ಆದ ಒಬ್ಬ ಮನುಷ್ಯನು ಅಲ್ಲಿಗೆ ಬಂದನು. ಅವನು ನೋಡುವವರಿಗೆ ಕರಾಲ ಸ್ವರೂಪಿಯಾಗಿ ಕಾಣುತ್ತಿದ್ದನು. ಅವನು ಸ್ವಾಮಿಮಹಾರಾಜರ ಬಳಿಗೆ ಬಂದು ಕೈಜೋಡಿಸಿ—''ಸ್ವಾಮಿ ಮಹಾರಾಜರೆ, ತಮ್ಮ ಆಜ್ಞೆಯೇನು?''

''ವನರಾಜ,'' ಸ್ವಾಮಿಮಹಾರಾಜರು ಗಾಂಭೀರ್ಯದಿಂದ—''ನಾನು ನಾಲ್ಕು ದಿನಗಳ ಹಿಂದೆ ಹೇಳಿದ ಮಾತನ್ನು ಮರೆತಂತೆ ತೋರುವದು?''

''ಮಹಾರಾಜರೆ, ತಾವು ನನಗೆ ಯಾವ ವಿಷಯವನ್ನು ತಿಳಿಸಿದ್ದಿರಿ?''

''ನೀನು ಈಗ ವಿಷಯಾಂಧನಾಗಿರುವೆ. ನೀನು ನನ್ನ ಆಜ್ಞೆಯನ್ನುಪೇಕ್ಷಿ

ಸುತ್ತ ಕೇವಲ ವಿಲಾಸಸುಖದಲ್ಲಿಯೆ ಕಾಲಕಳೆಯುತ್ತೊಡಗಿರುವೆ. ನಿನ್ನ ವರ್ತನವು ಇದೇ ಬಗೆಯದಾಗಿ ಉಳಿದರೆ ನಿಶ್ಚಯವಾಗಿ ಆತ್ಮನಾಶಮಾಡಿಕೊಳ್ಳುವೆ."

"ಕ್ಷಮಿಸಿರಿ. ನಾನು ಎಂದಿಗೂ ನಿಮ್ಮನ್ನು ಉಪೇಕ್ಷಿಸಲಾರೆನು. ಮಾನವ ಮಾತ್ರರಿಗೆ ಸ್ವಭಾವ ಸಿದ್ಧವಾದ ವಿಸ್ಮೃತಿಯು ನನ್ನನ್ನು ಆವರಿಸಿರುವದು. ನಾನು ಬುದ್ಧಿಪೂರ್ವಕವಾಗಿ ನಿಮ್ಮ ಆಜ್ಞೆಯನ್ನು ಮನ್ನಿಸದೆ ಕುಳಿತಿಲ್ಲ."

"ವನರಾಜ, ಸದ್ಯಕ್ಕೆ ನಿನ್ನ ಮೂವರು ಸ್ತ್ರೀಯರು ನನಗೆ ಪೂಜಾಸಾಮಗ್ರಿಗಳನ್ನೊದಗಿಸಿ ಕೊಡತ್ತಿರುವರು. ಸರ್ವಸಂಗಪರಿತ್ಯಾಗಿಯಾದ ನಾನು ವಿಷಯಾಸಕ್ತ ಸ್ತ್ರೀ ಪುರುಷರಿಂದ ಪೂಜಾಸಾಧನಗಳನ್ನೊದಗಿಸಿಕೊಳ್ಳಲಿಕ್ಕೆ ಮನಸ್ಸಿಲ್ಲದವನಾಗಿರುವೆನು. ಅದಕ್ಕಾಗಿ ಒಬ್ಬ ಕುಮಾರಿಯನ್ನು ತರಬೇಕೆಂದು ನಾನು ನಿನಗೆ ಹೇಳಿದ್ದಿಲ್ಲವೆ?"

"ಹೌದು. ಮಹಾರಾಜರೆ, ನಿಮಗೆ ಇಷ್ಟು ಬೇಗನೆ ಒಬ್ಬ ಕುಮಾರಿಯ ಆವಶ್ಯಕತೆಯಿರುವದೆಂದು ಅಂದು ನನಗೆ ತಿಳಿಯಲಿಲ್ಲ. ಯಥಾವಕಾಶವಾಗಿ ನಿಮ್ಮ ಕೆಲಸ ಮಾಡಬಹುದೆಂದು ತಿಳಿದಿದ್ದೆನು."

"ನಾಳೆ ಸಂಜೆಯೊಳಗಾಗಿ ನೀನು ಒಬ್ಬ ಕುಮಾರಿಯನ್ನು ತಂದು ಕೊಡಲಿಕ್ಕೆ ಬೇಕು. ಕಪೋತಾಕ್ಷೀತೀರದಲ್ಲಿ ಒಂದು ಗುಡಿಸಲಿದ್ದದ್ದನ್ನು ನೀನು ಬಲ್ಲೆಯಾ?"

"ಓಹೋ! ಗೊತ್ತಿರದೇನು? ಕಾನನವಾಸಿಗಳಾದ ನಮಗೆ ಎಲ್ಲ ಸ್ಥಳಗಳ ಪೂರ್ಣಪರಿಚಯವುಂಟು. ಆ ಗುಡಿಸಲಲ್ಲಿ ಒಬ್ಬ ಮುದುಕೆಯೂ ಒಬ್ಬ ಬಾಲಿಕೆಯೂ ಇರುವರು. ಅಲ್ಲಿಗೆ ಮತ್ತೊಬ್ಬ ರಜಪುತ ಯುವಕನು ನಿತ್ಯದಲ್ಲಿಯೂ ಬಂದು ಹೋಗುತ್ತಾನೆ. ಬಾಲಿಕೆಯನ್ನು ರಜಪುತ ಯುವಕನಿಗೆ ಕೊಡಬೇಕೆಂದು ಮುದುಕೆಯು ನಿರ್ಧರಿಸಿರುವಳೆಂದು ಕೇಳಿರುವೆನು."

"ಭಗವದಿಚ್ಛೆಯು ಹಾಗಿಲ್ಲ. ಬಹಳ ಮಾಡಿ ಬಾಲಿಕೆಯ ವಿವಾಹವು ಆ ರಜಪುತ ತರುಣನೊಡನೆ ಆಗಲಿಕ್ಕಿಲ್ಲ."

"ಸ್ವಾಮಿಮಹಾರಾಜರೆ, ಆ ಬಾಲಿಕೆಯು ದಿವ್ಯಲಾವಣ್ಯವತಿಯಿರುವಳು. ಅವಳನ್ನು ವರಿಸುವವನು ನಿಜವಾಗಿಯೂ ಭಾಗ್ಯವಂತನಿರಲಿಕ್ಕೆ ಬೇಕು"

"ಭಾಗ್ಯವಂತರಿಗಲ್ಲದೆ ಮಿಕ್ಕವರಿಗೆ ಅವಳು ಹೇಗೆ ಲಭಿಸುವಳು?" ಎಂದು ಸ್ವಾಮಿಮಹಾರಾಜರು ನುಡಿದು—"ಆ ಕನ್ಯೆಯನ್ನು ನಾಳೆ ಸಂಧ್ಯಾಕಾಲದೊಳಗಾಗಿ ಇಲ್ಲಿಗೆ ತರಲಿಕ್ಕೆ ಬೇಕು."

"ಮಹಾರಾಜರೆ, ನಾನು ಈ ಕಾರ್ಯಕ್ಕಾಗಿ ಈಗಲೇ ನನ್ನ ಅನುಚರರನ್ನು ಕಳುಹಿಸುವೆನು." ಎಂದು ನುಡಿದು, ಸ್ವಾಮಿಮಹಾರಾಜರ ಅಪ್ಪಣೆ ಹೊಂದಿ ವನರಾಜನು ಹೊರಟು ಹೋದನು. ಅನಂತರದಲ್ಲಿ ಮಾಣಿಕನೂ ಹೊರಟನು. ಸ್ವಾಮಿಮಹಾರಾಜರು ವ್ಯಾಘ್ರಾಸನದ ಮೇಲೆ ಶಯನಮಾಡಿದರು.

ಮಹಾಶಯರೆ, ಎಲ್ಲರೂ ಸ್ವಾಮಿಮಹಾರಾಜರೆಂದು ಸಂಬೋಧಿಸುತ್ತಿದ್ದ

ಯತಿಗಳ ಹೆಸರು ಸ್ವಾಮಿ ಅಜಿತಾನಂದರೆಂದಿತ್ತು. ವನರಾಜನು ಸುಲಿಗೆಗಾರರ ನಾಯಕನು. ವೀರಮಾಣಿಕನೇ ಬಾಷ್ಕಲಿಯ ಮಗನೂ ಅರುಣಕುಮಾರಿಯ ತಂದೆಯೂ ಆದ ಕೃಷ್ಣಲಾಲನು. ವನರಾಜನ ಸೈನ್ಯದಲ್ಲಿ ಏಳೆಂಟುನೂರು ಜನ ಅನುಚರರಿದ್ದರು. ಈ ಜನರು ಬೇಕಾದಂತಹ ರಾಕ್ಷಸೀ ಅತ್ಯಾಚಾರಗಳನ್ನು ಮಾಡ ಹೇಸದಂಥವರಾಗಿದ್ದರು. ವನರಾಜನು ತನ್ನ ಅನುಚರರೊಂದಿಗೆ ನಾಲ್ಕೂ ಕಡೆಗೆ ಹೋಗಿ ಸುಲಿಗೆ ಮಾಡುತ್ತಿದ್ದನು. ಅವನ ಬಳಿಯಲ್ಲಿ ಹೇರಳವಾದ ಧನಸಂಗ್ರಹವೂ ಶಸ್ತ್ರಾಸ್ತ್ರಗಳೂ ಇದ್ದವು. ನಿಬಿಡವಾದ ಅರಣ್ಯಮಧ್ಯದಲ್ಲಿದ್ದ ಗುಪ್ತಪುರಿಯೆಂಬ ಪ್ರದೇಶವೇ ವನರಾಜನ ಅಟವೀರಾಜ್ಯದ ರಾಜಧಾನಿಯು. ಗುಪ್ತಪುರಿಯು ವಿಶಾಲವಾದದ್ದಿದ್ದರೂ ಗುಪ್ತವಾಗಿಯೇ ಇತ್ತು. ಅಲ್ಲಿ ಯಾವ ಜನರೂ ಬರುತ್ತಿದ್ದಿಲ್ಲ. ಪದ್ಮಸರೋವರ, ಮಹಾಕಾಲಿಯ ದೇವಾಲಯ, ಸುಲಿಗೆಗಾರರ ವಸತಿಗೃಹ, ಶಸ್ತ್ರಾಗಾರ, ಧಾನ್ಯಗಳ ಉಗ್ರಾಣ ಮೊದಲಾದ ಕಟ್ಟಡಗಳು ಗುಪ್ತಪುರಿಯಲ್ಲಿದ್ದವು. ಅವುಗಳಲ್ಲಿ ಕೆಲವು ಕಟ್ಟಡಗಳು ಕಲ್ಲಿನವಿದ್ದು ಬಹು ಪ್ರಾಚೀನ ಕಾಲದಲ್ಲಿ ಕಟ್ಟಲ್ಪಟ್ಟವುಗಳೆಂದು ಪ್ರಸಿದ್ಧವಿತ್ತು. ವನರಾಜನ ರಾಜಧಾನಿಯಾದ ಈ ಗುಪ್ತಪುರಿಯು ಇದ್ದ ಸ್ಥಳದಲ್ಲಿ ಪ್ರಾಚೀನ ಕಾಲದಲ್ಲಿ ಯಾವದೋ ಒಬ್ಬ ದೊಡ್ಡ ರಾಜನ ರಾಜಧಾನಿಯಿತ್ತೆಂದು ಎಷ್ಟೋ ಜನರು ಅನ್ನುತ್ತಿದ್ದರು. ಗುಪ್ತಪುರಿಯ ಸುತ್ತು ಮುತ್ತು ನಾಲ್ಕಾರು ಕ್ರೋಶಗಳ ವರೆಗೆ ನಿಬಿಡವಾದ ಕಾನನವಿದ್ದುದರಿಂದ ಅಲ್ಲಿ ಜನರ ಪ್ರವೇಶವಾಗುವ ಸಂಭವವಿದ್ದಿಲ್ಲ. ಅದರಲ್ಲಿ ವನರಾಜನಂತಹ ಬಲಾಢ್ಯ ಸುಲಿಗೆಗಾರನ ಆಧಿಪತ್ಯದಲ್ಲಿ ಆ ಅಟವೀ ರಾಜ್ಯವು [illegible], ಅಲ್ಲಿ ಪ್ರವೇಶ ಮಾಡಲಿಕ್ಕೆ ಎಂತಹ ಬಲಾಢ್ಯನ ಎದೆಯೂ ಆಗುತ್ತಿದ್ದಿಲ್ಲ. ವನರಾಜನು ನಿಜವಾಗಿ ವನರಾಜನಂತೆಯೆ ಇದ್ದನು.

ವನರಾಜನು ಗುಪ್ತಪುರಿಯನ್ನು ಆಕ್ರಮಿಸುವದಕ್ಕಿಂತ ಮುಂಚಿತವಾಗಿಯೆ ಸ್ವಾಮಿ ಅಜಿತಾನಂದರು ಅಲ್ಲಿ ವಾಸಿಸಿದ್ದರು. ಅವರು ತಪೋಧನರಿದ್ದುದರಿಂದ ಯಾವಾಗಲೂ ಜಗದಂಬೆಯ ಧ್ಯಾನಾಸಕ್ತರಾಗಿಯೆ ಇರುತ್ತಿದ್ದರು. ಅವರು ಗುಪ್ತಪುರಿಯಲ್ಲಿ ವಸತಿ ಮಾಡಿದ ಚೋರರಾಜ-ವನರಾಜನ ಹಾಗು ಅವನ ಅನುಯಾಯಿಗಳ ಕೃತಿಗಳ ಕಡೆಗೆ ತಿಲಮಾತ್ರವಾದರೂ ಲಕ್ಷ್ಯಗೊಡುತ್ತಿದ್ದಿಲ್ಲ. ಇರುತ್ತಿರುತ್ತ ಸುಲಿಗೆಗಾರರ ದುಷ್ಕೃತಿಗಳು ಅಜಿತಾನಂದರಿಗೆ ಅಸಹ್ಯವಾಗತೊಡಗಿದವು. ಸುಲಿಗೆಗಾರರ ನಾಯಕನಾದ ವನರಾಜನು ನಿತ್ಯದಲ್ಲಿ ದೇವಿಯ ದರ್ಶನಕ್ಕೆ ಹೋದಾಗ ಸ್ವಾಮಿ ಮಹಾರಾಜರನ್ನು ಕಂಡು ಭಕ್ತಿಪೂರ್ವಕವಾಗಿ ಮಾತು-ಕಥೆಗಳನ್ನಾಡಿ ಬರುತ್ತಿದ್ದನು. ಆಗ ಸ್ವಾಮಿ ಅಜಿತಾನಂದರು ಅವನಿಗೆ ಸನ್ಮಾರ್ಗ ಬೋಧ ಮಾಡುತ್ತಿದ್ದರು. ಅವರ ಉಪದೇಶದ ಪರಿಣಾಮವು ವನರಾಜನ ಮೇಲೆ ತಕ್ಕಮಟ್ಟಿಗೆ ಆಗತೊಡಗಿತ್ತು. ಅಜಿತಾನಂದರ ಉಪದೇಶದಿಂದಲೆ ಕೃಷ್ಣಲಾಲನು ಕಾರಾಗೃಹದಿಂದ ಪಾರಾಗಿದ್ದನು. ವನರಾಜನ ಕ್ರೂರಕರ್ಮಗಳಿಗೆ ಸೌಮ್ಯಸ್ವರೂಪವು ಬರಲಿಕ್ಕೆ ಅವರ ಬೋಧವೇ

ಕಾರಣವಾಗಿತ್ತು. ವನರಾಜನನ್ನೂ ಅವನ ಅನುಚರರನ್ನೂ ಸತ್ಕಾರ್ಯಕ್ಕೆ ತೊಡಗಿಸಬೇಕೆಂದೂ ದೇಶದೊಳಗಿನ ಜನರನ್ನು ಸುಲಿದು ಸಂಗ್ರಹಿಸಿದ ದ್ರವ್ಯದ ಬಹು ದೊಡ್ಡ ನಿಧಿಯು ಪರೋಪಕಾರಕ್ಕಾಗಿಯೇ ವೆಚ್ಚವಾಗುವಂತೆ ಮಾಡಬೇಕೆಂದೂ ಅಜಿತಾನಂದರ ಸಂಕಲ್ಪವಿದ್ದಿತು. ದುಷ್ಕರ್ಮಿಯಾದ ವನರಾಜನು ತನ್ನ ಕರ್ಮಕ್ಕನುಸಾರವಾಗಿ ಬೇಗನೆ ನಾಶವೊಂದುವನೆಂದು ಅಜಿತಾನಂದರು ತಿಳಿದಿದ್ದರು. ವನರಾಜನ ತರುವಾಯ ಅವನ ಎಲ್ಲ ಸ್ವತ್ತನ್ನೂ ಅನುಚರರನ್ನೂ ಕೃಷ್ಣಲಾಲನ ಸ್ವಾಧೀನ ಪಡಿಸಬೇಕೆಂದು ಅವರ ಸಂಕಲ್ಪವಿತ್ತು. ಅಂತೆಯೇ ಅವರು ಕೃಷ್ಣಲಾಲನಿಗೆ ನಿರೋಪಕೊಡಲಾದವರಾಗಿದ್ದರು. ಕೃಷ್ಣಲಾಲನ ಶೌರ್ಯ ಧೈರ್ಯಗಳಿಗೂ ಸದ್ಗುಣಗಳಿಗೂ ಅಜಿತಾನಂದರು ಮೆಚ್ಚಿದ್ದರು. ಅವನಿಂದ ದೇಶಹಿತದ ಕಾರ್ಯಗಳಾಗುವವೆಂಬ ಬಗ್ಗೆ ಅವರಿಗೆ ನಂಬಿಗೆಯುಂಟಾಗಿತ್ತು.

ಕೃಷ್ಣಲಾಲನು ಸುಲಿಗೆಗಾರರ ಕೈಯಲ್ಲಿ ಹೇಗೆ ಸಿಲುಕಿದನೆಂಬದನ್ನು ತಿಳಿದುಕೊಳ್ಳುವದಕ್ಕಾಗಿ ವಾಚಕ ಮಹಾಶಯರು ಆತುರಗೊಂಡಿರಬಹುದು ಈ ಸಂಗತಿಯನ್ನು ಹೇಳಿಯೇ ಮುಂದಿನ ಕಥಾನಕವನ್ನು ಪ್ರಾರಂಭಿಸುವದೊಳಿತು.

ಮುರ್ಶಿದಾಬಾದದ ನವಾಬನ ಸೈನ್ಯದಲ್ಲಿ ಕೃಷ್ಣಲಾಲನು ಸರದಾರನಾಗಿದ್ದನು. ಅವನು ಕಪೋತಾಕ್ಷಿ ತೀರದಲ್ಲಿ ಒಂದು ಗುಡಿಸಲ ಕಟ್ಟಿಸಿ, ಅಲ್ಲಿ ತನ್ನ ವೃದ್ಧ ತಾಯಿಯನ್ನೂ ಹೆಂಡತಿಯನ್ನೂ ಮಗಳನ್ನೂ ಇರಿಸಿದ್ದನು. ಅವನ ಮಗಳಾದ ಅರುಣಕುಮಾರಿಯು ಒಂದು ವರ್ಷದವಳಾಗುತ್ತಲೇ ಮಾತೃವಿಹೀನಳಾದಳು. ಆಗಿನಿಂದ ಕೃಷ್ಣಲಾಲನು ಉದಾಸೀನನಾದನು. ಅವನು ತನ್ನ ತಾಯಿಯ ಹಾಗು ಮಗಳ ಸಮಾಚಾರವನ್ನು ತಿಳಿದುಕೊಳ್ಳಲಿಕ್ಕೆ ವರ್ಷದಲ್ಲಿ ಒಮ್ಮೆ ಮಾತ್ರ ಹೋಗಹತ್ತಿದನು. ಇತ್ತೀಚಿಗೆ ಮೂರು ನಾಲ್ಕು ವರ್ಷಗಳಿಂದ ಅವನು ಅವರ ಬಳಿಗೆ ಹೋಗಿರಲಿಲ್ಲ. ಬರಬರುತ್ತ ಅವನಿಗೆ ನವಾಬನ ಸೇವೆಯು ಬೇಸರವೆನಿಸತೊಡಗಿತು. ಆಗ ಅವನು ತನ್ನ ಧನವನ್ನೆಲ್ಲ ತೆಗೆದುಕೊಂಡು ಹತ್ತೆಂಟುಜನ ಅಂಗರಕ್ಷಕರೊಡನೆ ಕಪೋತಾಕ್ಷೀ ತೀರಕ್ಕೆ ಹೊರಟನು. ದಾರಿಯಲ್ಲಿ ವನರಾಜನೂ ಅವನ ಅನುಚರರೂ ಗಂಟುಬಿದ್ದು, ಕೃಷ್ಣಲಾಲನ ದ್ರವ್ಯವನ್ನೆಲ್ಲ ಸುಲಿದುಕೊಂಡು, ಅವನನ್ನು ಕೈಸೆರೆ ಹಿಡಿದೊಯ್ದರು. ಕೃಷ್ಣಲಾಲನು ಸುಲಿಗೆಗಾರರೊಡನೆ ನಡೆಯಿಸಿದ ಕಾದಾಟದಿಂದ ಅವನ ಶೌರ್ಯ ಧೈರ್ಯ-ಸಾಹಸಗಳು ವನರಾಜನಿಗೆ ಗೊತ್ತಾದವು. ಅವನು ತಮ್ಮ ಗುಂಪಿನಲ್ಲಿದ್ದರೆ, ತಾವು ನಡೆಯಿಸಿರುವ ಕಾರ್ಯಕ್ಕೆ ಮತ್ತಿಷ್ಟು ಅನುಕೂಲವಾಗುವವೆಂಬ ಬುದ್ಧಿಯಿಂದಲೆ ಅವನನ್ನು ವನರಾಜನು ಸೆರೆಹಿಡಿದೊಯ್ದಿದ್ದನು.

ಸ್ವಾಮಿ ಅಜಿತಾನಂದರು ಗುಣಗ್ರಾಹಿಗಳೂ ಸದಯಾಂತಃಕರಣಿಗಳೂ ಆಗಿದ್ದುದರಿಂದಲೆ ಕೃಷ್ಣಲಾಲನು ಬೇಗನೆ ಸೆರೆಯಿಂದ ಮುಕ್ತನಾದನು. ಸ್ವಾಮಿ ಮಹಾರಾಜರ ಆಜ್ಞೆಯ ಮೇರೆಗೆ ವನರಾಜನು ಅವನನ್ನು ತನ್ನ ಸೈನ್ಯದ ಉಪನಾಯಕನನ್ನಾಗಿ ಮಾಡಿದನು. ಜೊಕ್ಕಸದ ಹಾಗು ಧಾನ್ಯಗಳ ಉಗ್ರಾಣದ

ಮತ್ತು ಶಸ್ತ್ರಾಗಾರದ ಸಂಪೂರ್ಣ ಒಡೆತನವು ಕೃಷ್ಣಲಾಲನ ಕಡೆಗಿತ್ತು. ಸೈನಿಕರ ಮೇಲೆ ವನರಾಜನ ವರ್ಚಸ್ವವಿರುತ್ತಿದ್ದು, ಅವನ ಅಜ್ಞೆಯಂತೆ ಕೃಷ್ಣಲಾಲನು ಆ ಜನರಿಂದ ಕೆಲಸ ಮಾಡಿಸುತ್ತಿದ್ದನು.

ಸುಲಿಗೆಗಾರರ ಮುಖ್ಯನಾಯಕನಾದ ವನರಾಜನು ಮೂವರು ಕುಲೀನ ಸ್ತ್ರೀಯರ ಪಾವಿತ್ರ್ಯನಾಶಮಾಡಿ ಅವರನ್ನು ತನ್ನ ಬಳಿಯಲ್ಲಿರಿಸಿಕೊಂಡಮೇಲೆ, ಅಜಿತಾನಂದರು ಅವನ ವಿಷಯವಾಗಿ ಬಹಳೇ ತಿರಸ್ಕಾರವುಳ್ಳವರಾಗಿದ್ದರು. ಕಾಲಿ ಮಾತೆಯ ಅನುಗ್ರಹದಿಂದ ಭೂತಭವಿಷ್ಯಜ್ಞಾನವುಳ್ಳವರಾದ ಅವರು ವನರಾಜನ ಭವಿತವ್ಯವನ್ನು ಕಂಡುಹಿಡಿದದ್ದರಿಂದಲೆ ಕೃಷ್ಣಲಾಲನನ್ನು ಗುಪ್ತಪುರಿಯಿಂದ ಹೋಗಗೊಡಲಾರದವರಾಗಿದ್ದರು.

ಅದ್ವಿತೀಯ ತೇಜಸ್ವಿಯಾದ ಕೃಷ್ಣಲಾಲನ ಶೌರ್ಯಧೈರ್ಯಾದಿ ಗುಣಗಳಿಗೆ ಮೆಚ್ಚಿದ ಅಜಿತಾನಂದರು ಅವನಿಗೆ ಪ್ರೇಮಪುರಸ್ಸರವಾಗಿ ವೀರಮಾಣಿಕನೆಂಬ ಹೆಸರು ಕೊಟ್ಟಿದ್ದರು.

ಮಹಾಶಯರೆ, ಸ್ವಾಮಿ ಅಜಿತಾನಂದರಿಂದ ಅನುಗ್ರಹಿತನಾದ ವೀರಮಾಣಿಕನು ಹೇಗೆ ಅಭ್ಯುದಯಹೊಂದಿದನೆಂಬದನ್ನು ಪ್ರಸಂಗಾನುಸಾರವಾಗಿ ತಿಳಿದುಕೊಳ್ಳಬಹುದು.

## ಕರ್ಮ ಕಥೆ!

ವಿಜಯಲಾಲನು ತನ್ನ ಪ್ರಶಂಸೆ ಮಾಡುತ್ತಿರುವಾಗ ಆನಂದಭರಿತವಾದ ಅಮ್ಮನ ಮುಖವು ಮುಂದೆ ಒಂದೇ ಕ್ಷಣದಲ್ಲಿ ದುಃಖಚರ್ಯೆಯಿಂದೊಡಗೂಡಿದ್ದನ್ನು ನೋಡಿದಾಗಿನಿಂದ ಅರುಣಕುಮಾರಿಯ ಮನಸ್ಸು ಬಹಳೇ ಗೊಂದಲದಲ್ಲಿ ಬಿದ್ದಿತ್ತು. ತನ್ನನ್ನು ಆದರ್ಶ ಆರ್ಯಾಂಗನೆಯೆಂದೂ ತೇಜಸ್ವಿಯಾದ ಕ್ಷಾತ್ರ ಬಾಲಿಕೆಯೆಂದೂ ವರ್ಣಿಸಿದ್ದಕ್ಕಾಗಿ ಅವಳ ಮನಸ್ಸು ಕ್ಲೇಶಹೊಂದಿದ ಕಾರಣವೇನಿರಬಹುದೆಂದು ಅರುಣಳು ಬಹುಪರಿಯಾಗಿ ಯೋಚಿಸಿದಳು. ತಾನು ನಿಜವಾಗಿ ಕ್ಷತ್ರಿಯ ಕುಮಾರಿಯಾಗಿರಲಿಕ್ಕಿಲ್ಲವೇನು? ತನ್ನ ವಂಶವು ಸುಚರಿತವಾದದ್ದಿರಲಿಕ್ಕಿಲ್ಲವೇನು? ತಾನು ಪವಿತ್ರವಾದ ರಜಪುತ ಕುಲದಲ್ಲಿ ಜನ್ಮಿಸಿರಲಿಕ್ಕಿಲ್ಲವೇನು? ಮೊದಲಾದ ಆಲೋಚನೆಗಳು ಅವಳಲ್ಲಿ ಉದ್ಭವಿಸಿದ್ದವು. ಈ ವಿಷಯವಾಗಿ ಅವಳು ಮೇಲಿಂದಮೇಲೆ ತನ್ನ ಅಮ್ಮನನ್ನು ವಿಚಾರಿಸುತ್ತಿದ್ದಳು. ಜಾಹ್ನವಿಯು ಅರುಣಳಿಗೆ ವಸ್ತುಸ್ಥಿತಿಯನ್ನು ತಿಳಿಸಲಿಕ್ಕೆ ಯಾವ ಕಾರಣದಿಂದಲೊ ಅನುಮಾನಿಸಹತ್ತಿದ್ದಳು. ಒಂದು ದಿವ ಅರುಣಕುಮಾರಿಯು ತನ್ನ ಅಮ್ಮನ ಬಳಿಗೆ ಹೋಗಿ—

"ಅಮ್ಮಾ, ನೀನು ನಿನ್ನ ಮನೋಗತವನ್ನು ವ್ಯಕ್ತಪಡಿಸಲಿಕ್ಕೆ ಹಿಂಜರಿಯುತ್ತಿರುವ ಕಾರಣವೇನು? ನೀನು ನನಗೆ ತಿಳಿಸಬೇಕಾಗಿದ್ದ ವಿಷಯವು ಬಹಳೇ ಗುಪ್ತವಾದದ್ದಿರುವದೇನು? ಅದು ನಿನ್ನ ಹೊರತು ಯಾರಿಗೂ ತಿಳಿದಿಲ್ಲವೆ? ಕಾಲಾಂತರದ

ಮೇಲಾದರೂ ಅದು ನನ್ನ ಕಿವಿಗೆ ಬೀಳಲಿಕ್ಕಿಲ್ಲವೆ? ನೀನು ನಿನ್ನ ಮನೋಗತವನ್ನು ನನ್ನೆದುರಿಗಿಡುವದರಿಂದ ಯಾರ ಹಾನಿಯಾದರೂ ಆಗುವಂತಿದ್ದರೆ, ಅದನ್ನು ತಿಳಿದು ಕೊಳ್ಳಲಿಕ್ಕೆ ನಾನಾದರೂ ಅಷ್ಟೇಕೆ ಆತುರಪಡಲಿ? ನಿನ್ನ ರಹಸ್ಯವು ತಿಳಿಸುವಂತಹ ದಿದ್ದರೆ ತಿಳಿಸು"

"ಕುಮಾರಿ!" ಜಾಹ್ನವಿಯು ಒನ್ನೆ ದೀರ್ಘವಾದ ನಿಟ್ಟುಸಿರು ಬಿಟ್ಟು, "ನೀನು ತಿಳಿದುಕೊಳ್ಳಲಿಚ್ಛಿಸುವ ವಿಷಯವೇನೂ ರಹಸ್ಯವಾಗಿಲ್ಲ; ಅದು ಜಗದ್ವಿಖ್ಯಾತ ವಿರುವದು. ನೀನು ಚಿಕ್ಕವಳಿರುವದರಿಂದ ಆ ವಿಷಯದಲ್ಲಿ ಇನ್ನೂ ಅಜ್ಞಾತಳಿರುವೆ. ಬರಬರುತ್ತ ತಾನಾಗಿ ಎಲ್ಲ ಸಂಗತಿಯು ಗೊತ್ತಾಗುವಂತಿದೆ. ಬಾಲಿಕೆಯಾದ ನಿನ್ನೆ ದುರಿಗೆ ನನ್ನ ದುಶ್ಚರಿತವನ್ನು ಹೇಳುವದರಿಂದ ಪ್ರಯೋಜನವಿಲ್ಲೆಂದು ತಿಳಿದು ಮೌನ ತಾಳಿದ್ದೆನು. ಚಾಣಾಕ್ಷಳಾದ ನೀನು ಮುಖಚಿಹ್ನದಿಂದಲೇ ನನ್ನ ಮನೋಗತ ವನ್ನು ಗುರುತಿಸಿದೆ. ಅರುಣ, ನೀನು ಎಷ್ಟು ಚತುರಳಾಗಿದ್ದರೂ, ಎಂತಹ ಆದರ್ಶ ಬಾಲಿಕೆಯಾಗಿದ್ದರೂ ಎಲ್ಲವೂ ವ್ಯರ್ಥವು. ನೀನು ವೀರಪುತ್ರಿಯಿರುವೆ. ವೀರ ಲಲನೆಯಾಗುವೆ. ಆದರೆ ಆದರ್ಶ ಆರ್ಯಾಂಗನೆಯೆಂದೂ ಅದ್ವಿತೀಯ ಕ್ಷತ್ರಿಯ ರಮಣಿಯೆಂದೂ ಹೊಗಳಿಸಿಕೊಳ್ಳಲಿಕ್ಕೆ ಅನರ್ಹಳಾಗಿರುವೆ. ನನ್ನ ಕರ್ಮದ ಫಲ ವನ್ನು ನಾನು ಅನುಭವಿಸಿದ್ದಲ್ಲದೆ, ನನ್ನ ಸಂತತಿಗೂ ಮೋಸಲಾಗಿಟ್ಟಿರುವೆನು. ಅರುಣ, ನಾನು ಪರಮ ಪಾತಕಿಯು! ಕುಲಾಂಗಾರಳು! ಚಾಂಡಾಲಿನಿಯು!! ಅಘೋರ ಪಿಶಾಚಿನಿಯು!!!"

ಜಾಹ್ನವಿಯ ಮುಖದಿಂದ ಮುಂದೆ ಮಾತುಗಳು ಹೊರಡದಾದವು ನೇತ್ರಗಳು ಬಾಷ್ಪಪೂರಿತವಾದವು. ಅವಳು ಮುಖಕ್ಕೆ ಸೆರಗು ಮುಚ್ಚಿಕೊಂಡು ರೋದಿಸ ತೊಡಗಿದಳು. ತನ್ನ ಅಮ್ಮನನ್ನು ದುಃಖಿತಳನ್ನಾಗಿಮಾಡಲಿಕ್ಕೆ ತಾನೇ ಕಾರಣೀ ಭೂತಳಾದೆನೆಂದು ಅರುಣಳಿಗೆ ಖೇದವಾಯಿತು. ಅವಳ ಕಣ್ಣುಗಳೂ ಅಶ್ರುಗಳಿಂದ ತುಂಬಿದವು. ಸ್ವಲ್ಪಹೊತ್ತಿನ ಮೇಲೆ ಅವಳು ಮನಸ್ಸನ್ನು ಶಾಂತಪಡಿಸಿ ಕೊಂಡು, "ಅಮ್ಮಾ, ನಿನ್ನನ್ನು ನೀನೇ ಯಾಕೆ ನಿಂದಿಸಿಕೊಳ್ಳುವೆ? ನಿನ್ನಿಂದ ಅಂತಹ ಪ್ರಮಾದವೇನುಘಟಿಸಿರುವದು? ನಿನ್ನ ರಹಸ್ಯವನ್ನು ವ್ಯಕ್ತಮಾಡುವದರಿಂದ ಮನಸ್ಸಿಗೆ ದುಃಖವಾಗುತ್ತಿದ್ದರೆ, ಅದನ್ನು ನೀನು ಹೇಳುವ ಅವಶ್ಯಕತೆಯಿಲ್ಲ; ನಾನಾ ದರೂ ಆ ಸಂಗತಿಯನ್ನು ಕೇಳಲಿಚ್ಛಿಸುವದಿಲ್ಲ. ಮುಪ್ಪಿನಿಂದ ಹಾಗಲಹಣ್ಣಿನಂತಾದ ನಿನಗೆ ದುಃಖಕೊಡುವದು ನನ್ನ ಕರ್ತವ್ಯವಲ್ಲ. ನೀನು ಸಮಾಧಾನದಿಂದಿದ್ದರೆ ನನಗೆ ಆನಂದವಾಗುತ್ತದೆ. ನಿನ್ನ ಕಣ್ಣೊಳಗೆ ನೀರು ಹೊರಟದ್ದನ್ನು ಕಂಡರೆ, ನನ್ನ ಹೃದಯಕ್ಕೆ ಸಾವಿರಾರು ಚೇಳುಗಳು ಕಡಿದಷ್ಟು ವೇದನೆಯಾಗುವದು. ಅಮ್ಮಾ, ನೀನು ನನ್ನ ಮುಂದೆ ನಿನ್ನ ರಹಸ್ಯವನ್ನು ತಿಳಿಸುವಕಾರಣವಿಲ್ಲ. ಅದನ್ನು ತಿಳಿದು ಕೊಳ್ಳುವದರಿಂದ ನನಗಾದರೂ ದೊರೆಯುವ ಲಾಭವೇನು? ಕ್ಷತ್ರಿಯರ ಪಾವಿ ತ್ರ್ಯವು ನಾಶವಾಗುವ ಯಾವದೊಂದು ಸಂಗತಿಯು ಘಟಿಸಿರಬಹುದೆಂದು ಊಹಿಸಿ

ನಾನು ಸಮಾಧಾನಹೊಂದುವೆನು. ಮಿಂಚಿಹೋದ ಮಾತಿಗಾಗಿ ಚಿಂತಿಸಿ ಫಲ ವೇನು? ತಾತ್ವಿಕ ಮನುಷ್ಯರು ಜಾತಿಗೆ ಬೆಲೆಕೊಡುವದಿಲ್ಲ; ಜೀವನಕ್ಕೆ ನಿಜವಾದ ಬೆಲೆಯಿರುತ್ತದೆ. ಚಲೋರತ್ನವು ಕೆಸರಲ್ಲಿ ಬಿದ್ದಿದ್ದರೆ ಅದು ಎಂದಾದರೂ ಕಪರ್ದಿ ಗಿಂತ ಕೀಳಾಗಬಹುದೇ? ಹೇಗೆ? ಕಪರ್ದಿಕವನ್ನು ಸುವರ್ಣ ಮಂಜೂಷೆಯಲ್ಲಿಟ್ಟರೆ ಅದಕ್ಕೆ ಹೆಚ್ಚಿನ ಮಹತ್ವವುಂಟಾಗುವದೇನು?"

"ನೀನು ಹೇಳುವ ಮಾತುಗಳು ಸರಿಯಾದವುಗಳಿರುವವು. ಆದರೆ ಜಗತ್ತಿನ ಸೃಷ್ಟಿಯು ವಿಶಿಷ್ಟಪ್ರಕಾರದ್ದಿರುವದು. ಅಂತೆಯೇ ರಾಜವೈಭವಗಳನ್ನು ಹೊಂದಲು ಸಾಧ್ಯವಿದ್ದರೂ ನಾವು ಈ ವನವಾಸವನ್ನನುಭವಿಸಬೇಕಾಗಿದೆ."

"ಅಮ್ಮಾ!" ಅರುಣೆಯು ವಿಸ್ಮಯವ್ಯಂಜಕಸ್ವರದಿಂದ, "ನೀನು ಹೇಳಬೇ ಕೆಂದಿರುವ ರಹಸ್ಯವು ರಹಸ್ಯಪೂರ್ಣವಿರಬಹುದೆಂದು ನಾನು ತರ್ಕಿಸುವೆನು. ಏನೇ ಇರಲಿ. ಆ ಸಂಗತಿಗಳನ್ನು ನೆನೆದರೆ ನಿನಗೆ ದುಃಖವಾಗತ್ತಿರುವದರಿಂದ ಆ ಮಾತಿನ ಉಸಾಬರಿಯೇಕೆ?"

"ಕುಮಾರಿ, ನನ್ನ ಚರಿತ್ರವು ರಹಸ್ಯಪೂರ್ಣವಿರುವದೇನೋ ನಿಜವು ಜಗ ತ್ತಿನ ದೃಷ್ಟಿಯಿಂದ ನಾನು ಪಾತಕಿಯೂ ಕುಲಾಂಗಾರಳೂ ಪಿಶಾಚಿಯೂ ಚಾಂ ಡಾಲಿನಿಯೂ ಆಗಿ ತೋರುತ್ತಿದ್ದರೂ, ದೇವರ ದೃಷ್ಟಿಯಿಂದ ಪವಿತ್ರಳಾಗಿರು ವೆನು. ಈ ಜಾಹ್ನವಿಯ ಹೃದಯವು ಎಂದಿನಿಂದಲೂ ಜಾಹ್ನವಿಯ ಜಲದಂತೆ ನಿರ್ಮಲವೂ ಪವಿತ್ರವೂ ಆಗಿರುವದು. ಜಗತ್ತಿನ ದೋಷೈಕ ದೃಷ್ಟಿಗೆ ನಾನು ಅಪರಾಧಿಯಾಗಿ ತೋರುತ್ತಿರುವದರಿಂದ, ನನ್ನ ಆಯುಷ್ಯವು ದುಃಖಮಯವಾ ಗಿ ಹೋದದ್ದಲ್ಲದೆ, ಮುಂದಿನ ಸಂತತಿಯೂ ದುಃಖಾಬ್ಧಿಯಲ್ಲಿ ಮುಳುಗಿ ಹೋಗು ವಂತಾಯಿತು."

ಅರುಣ ಕುಮಾರಿಯು ಜಾಹ್ನವಿಯ ಈ ಮಾತುಗಳನ್ನು ಕೇಳಿ ವಿಸ್ಮಿತ ಳಾದಳು. ತನ್ನ ಅಮ್ಮನು ದುಃಖಿತಳಾದರೂ ಚಿಂತೆಯಿಲ್ಲ; ಅವಳ ಮನಸ್ಸಿನೊ ಳಗಿನ ರಹಸ್ಯದ ಸಂಗತಿಯನ್ನು ತಿಳಿದು ಕೊಳ್ಳಬೇಕೆಂಬ ವಿಚಾರವು ಆ ಬಾಲಿ ಕೆಯಲ್ಲಿ ಉತ್ಪನ್ನವಾಯಿತು. ಆಗ ಅವಳು, "ಅಮ್ಮಾ, ಗತಿಸಿ ಹೋದ ಸಂ ಗತಿಯನ್ನು ಹೇಳಲಿಕ್ಕೆ ನೀನು ಇಷ್ಟೇಕೆ ಖೇದಗೊಳ್ಳಬೇಕು? ನಿನ್ನ ಇತಿಹಾಸವು ಒಳ್ಳೆಯ ವಿಸ್ಮಯಜನಕವೂ ರಹಸ್ಯಪೂರ್ಣವೂ ಇರುವಂತೆ ತೋರುವದು. ನಿರ್ದೋಷಿ ಯಾದ ನೀನು ಲೌಕಿಕ ದೃಷ್ಟಿಯಿಂದ ಹೇಗೆ ಅಪರಾಧಿಯಾದೆ? ನೀನು ಅಪರಾಧಿ ಯಾದದ್ದಕ್ಕಾಗಿ ನಿನ್ನ ಸಂತತಿಗೆ ಸಹ ಆ ದೋಷವು ಹೇಗೆ ಅಂಟಿಕೊಂಡಿತು? ಮುರುಕ ಗುಡಿಸಲಲ್ಲಿ ಕಾಲಹರಣ ಮಾಡಹತ್ತಿದ ನಿನಗೆ ಯಾವ ರಾಜವೈಭವಗಳು ದೊರಕುವಂತಿದ್ದವು? ಅವು ಹೇಗೆ ವ್ಯರ್ಥವಾದವು? ನೀನು ತಿಲಾಂಶವಾದರೂ ಚಿಂತಿಸದೆ ಎಲ್ಲ ಸಂಗತಿಗಳನ್ನರುಹಿದರೆ ನನ್ನ ಮನಸ್ಸು ಸಮಾಧಾನಗೊಳ್ಳುವದು."

"ಅರುಣಕುಮಾರಿ!" ಜಾಹ್ನವಿಯು ತನ್ನ ಕರ್ಮ ಕಥೆಯನ್ನು ಹೇಳತೊಡ

ಗಿದಳು. “ರಾಜಸ್ಥಾನದೊಳಗಿನ ವಲ್ಲರಾ ಎಂಬ ಪ್ರಾಂತದೊಳಗಿನ ಒಂದು ಗ್ರಾಮದಲ್ಲಿ ನಾನು ಹುಟ್ಟಿದೆನು. ನನ್ನ ತಂದೆಯು ವಲ್ಲರಾದ ರಾಜನಲ್ಲಿ ಸರದಾರನಿದ್ದನು. ಅವನು ರಜಪುತ ಧರ್ಮದ ಕಟ್ಟಾಭಿಮಾನಿಯಾಗಿದ್ದು, ಒಳ್ಳೆಯ ಶೂರನೂ ಪ್ರತಿಷ್ಠಿತನೂ ಆಗಿದ್ದನು. ನಮ್ಮ ಮನೆತನವು ಒಳ್ಳೆಯ ಪವಿತ್ರವಾದದ್ದು. ಯವನರೊಡನೆ ಶರೀರಸಂಬಂಧ ಮಾಡುವ ರಜಪುತರನ್ನು ಕಂಡರೆ ನನ್ನ ತಂದೆಯು ಸಂತಪ್ತನಾಗುತ್ತಿದ್ದನು. ರಜಪುತರಲ್ಲಿ ಚಾರಿತ್ರ್ಯದೋಷವಿದ್ದರೆ ಅದು ಅವನಿಗೆ ಸಹನವಾಗುತ್ತಿದ್ದಿಲ್ಲ.

“ನನ್ನ ತಾಯಿತಂದೆಗಳಿಗೆ ನಾನೊಬ್ಬಳೇ ಅಕ್ಕರೆಯ ಮಗಳು. ಅವರು ನನ್ನನ್ನು ಜೀವಕ್ಕಿಂತ ಹೆಚ್ಚಾಗಿ ಪ್ರೀತಿಸುತ್ತಿದ್ದರು. ನಾನು ಬೆಳೆದು ದೊಡ್ಡವಳಾದೆನು. ರೂಪವತಿಯಾದ ನನ್ನನ್ನು ವರಿಸಬೇಕೆಂದು ಎಷ್ಟೋ ಶ್ರೀಮಂತ ಮನೆತನದ ರಜಪುತ ತರುಣರು ಇಚ್ಛಿಸುತ್ತಿದ್ದರು. ನನ್ನನ್ನು ಒಳ್ಳೇ ಮನೆತನ ನೋಡಿ ಕೊಡಬೇಕೆಂದು ನನ್ನ ತಂದೆಯ ಇಚ್ಛೆಯಿತ್ತು. ನಮ್ಮ ಮನೆಯ ಸಮೀಪದಲ್ಲಿ ಒಂದು ಪ್ರಸಿದ್ಧ ಶ್ರೀಮಂತಿಕೆಯ ರಜಪುತ ಮನೆತನವಿತ್ತು. ಆ ಮನೆತನದ ಒಡೆಯನೂ ವಲ್ಲರಾರಾಜನಲ್ಲಿ ಸರದಾರನಿದ್ದನು. ಆ ಸರದಾರನ ತರುಣ ಪುತ್ರನು ಶೂರನೂ ಸುಂದರನೂ ಆಗಿದ್ದನು. ಅವನಿಗೆ ನನ್ನನ್ನು ಕೊಡಬೇಕೆಂದು ನನ್ನ ತಾಯಿತಂದೆಗಳು ನಿಶ್ಚಯಿಸಿಕೊಂಡರು. ಅವರು ಹೀಗೆ ನಿಶ್ಚಯಿಸುವದಕ್ಕಿಂತ ಮೊದಲೆ, ನನ್ನ ಪ್ರೇಮವು ಆ ಸರದಾರನ ಪುತ್ರನಲ್ಲಿ ನೆಲೆಗೊಂಡಿತ್ತು. ಅವನಾದರೂ ನನ್ನಲ್ಲಿ ಪ್ರಣಯವುಳ್ಳವನಾಗಿದ್ದನು. ತಂದೆ-ತಾಯಿಗಳ ನಿಶ್ಚಯವು ತಿಳಿದಮೇಲೆ ಪರಸ್ಪರರಲ್ಲಿ ಪ್ರೇಮವು ಗಣಿತಶ್ರೇಢಿಯಿಂದ ಬೆಳೆಯಲಾರಂಭಿಸಿತು. ಪರಸ್ಪರರು ಆತ್ಮಾರ್ಪಣೆಮಾಡಿದೆವು ಅಂತಃಕರಣಗಳು ಏಕಜೀವವಾದವು ಆಗ ನಮ್ಮ ವಿವಾಹವಾಗಿರಲಿಲ್ಲ. ವಿವಾಹಸಂಸ್ಕಾರವು ಅನೇಕ ಕಾರಣಗಳಿಂದ ದಿನಾವಧಿಗೆ ಬಿದ್ದಿತ್ತು. ಪ್ರಣಯಿಗಳ ಅಂತಃಕರಣವು ಏಕಜೀವವಾದ ಬಳಿಕ ವಿವೇಕವು ನಷ್ಟಹೊಂದುವದರಲ್ಲಿ ಆಶ್ಚರ್ಯವಿಲ್ಲ. ವಿವಾಹಸಂಸ್ಕಾರವು ನೆರವೇರದಿದ್ದರೂ ಪರಸ್ಪರರು ಪರಸ್ಪರರನ್ನು ಮನಸಾವರಿಸಿದ್ದರಿಂದ, ನಾವು ದಂಪತಿಗಳಂತೆ ಕಾಲಹರಣ ಮಾಡತೊಡಗಿದೆವು. ನಮ್ಮ ಈ ಪ್ರೇಮವಿವಾಹದ ಸಂಗತಿಯು ಅತ್ಯಂತ ಗೌಪ್ಯವಾಗಿತ್ತು.

ವಿವಾಹ ಮುಹೂರ್ತವು ನಿಶ್ಚಿತವಾಯಿತು. ಲಗ್ನವು ನಾಲ್ಕು ದಿನ ಉಳಿದಿತ್ತು. ನಮ್ಮ ಮನೆಯಲ್ಲಿಯೂ ವರನ ಮನೆಯಲ್ಲಿಯೂ ಸೌರಣೆಯು ಭರದಿಂದ ಸಾಗಿತ್ತು. ಎರಡೂ ಮನೆತನಗಳು ಶ್ರೀಮಂತಿಕೆಯವು. ಅಂದ ಮೇಲೆ ವಿವಾಹ ಕಾರ್ಯವು ಸಡಗರದಿಂದ ನಡೆಯತೊಡಗಿದ್ದುದರಲ್ಲಿ ವಿಸ್ಮಯವೇನು? ಲಗ್ನದ ಸೌರಣೆಯು ನಡೆದಾಗಿನಿಂದ ನಾನು ನನ್ನ ಪತಿಯ ಮನೆಗೆ ಹೋಗಿರಲಿಲ್ಲ. ಹೋಗದಿರಲಿಕ್ಕೆ ಒಂದು ಕಾರಣವಿತ್ತು. ನಾನು ಭಾವನಾಪ್ರಧಾನಳು. ನನ್ನ ಮನಸ್ಸಿನಭಾವನೆಯೇ ನನ್ನನ್ನು ಎರಡನೆಯ ಸ್ಥಳಕ್ಕೆ ಹೋಗಗೊಡದಂತೆ ಮಾಡಿತ್ತು. ಆ ಭಾವನೆಯಿಂದಲೇ ನಾನು ಒಂದೇ ಸವನೆ ಕುದಿಯುತ್ತಿದ್ದೆನು. ನನ್ನಿಂದ ಒಂದು

ದೊಡ್ಡ ಅಧರ್ಮ ಕೃತ್ಯವು ಘಟಿಸಿರುವದೆಂದು ನನ್ನ ಮನಸ್ಸಿಗೆ ತಿಳಿಯ ಹತ್ತಿತ್ತು. ನನ್ನ ಮನಸ್ಸಿನ ದುಗುಡವು ನನ್ನ ಹೊರತು ಯಾರಿಗೂ ತಿಳಿದಿದ್ದಿಲ್ಲ. ಇನ್ನು ಮೇಲೆ ಮಾತ್ರ ಅದನ್ನು ಬಚ್ಚಿಡುವದು ಸಾಧ್ಯವಿಲ್ಲ. ಜಾಣಾಕ್ಷರು ನನ್ನನ್ನು ಕಂಡರೆ ದೋಷಿಯೆಂದು ನಿರ್ಧರಿಸುವಂತೆ ನನ್ನ ಸ್ಥಿತಿಯಾಗಿತ್ತು. ಅದಕ್ಕಾಗಿ ನಾನು ಬೈಲಿಗೆ ಬೀಳದೆ ಮನೆಯಲ್ಲಿಯೇ ಹುದುಗಿಕೊಂಡಿರುತ್ತಿದ್ದೆನು.

"ಇನ್ನು ಮೇಲೆ ಹೀಗೆಯೇ ಒಳಗೆ ಹುದುಗಿಕೊಂಡು ಕುಳಿತುಕೊಳ್ಳುವದು ಸಾಧ್ಯವಿದ್ದಿಲ್ಲ. ನಾನು ಬೈಲಿಗೆ ಬೀಳಬೇಕಾಯಿತು. ನಮ್ಮ ಕುಲದೇವತೆಯ ಮಂದಿರಕ್ಕೆ ಹೋಗುವಾಗ ಬರುವಾಗ ಎಲ್ಲರೂ ನನ್ನನ್ನು ನೋಡಿದರು. ಎಷ್ಟೋ ಜನರು 'ಕುಚು ಕುಚು' ಮಾತಾಡಹತ್ತಿದ್ದು ನನ್ನ ಕಿವಿಗೆ ಸ್ಪಷ್ಟವಾಗಿ ಕೇಳಹತ್ತಿತು. ಅವರು ಎಷ್ಟು ಮೆಲ್ಲಗೆ ಮಾತಾಡುತ್ತಿದ್ದರೂ, 'ಕಳ್ಳನ ಜೀವ ಹುಳ್ಳಹುಳ್ಳಗೆ' ಎಂಬಂತೆ ಅವರ ಮಾತಿನೊಳಗಿನ ಪ್ರತಿಯೊಂದು ಶಬ್ದವೂ, ಶಬ್ದದೊಳಗಿನ ಪ್ರತಿಯೊಂದು ಅಕ್ಷರವೂ, ಅನುಸ್ವಾರ ವಿಸರ್ಗ ಕನ್ನೆಮಾತ್ರೆಗಳೂ ನನ್ನ ಕರ್ಣರಂಧ್ರವನ್ನು ಪ್ರವೇಶಿಸಿದಂತಾಗಿ ಎದೆಯು 'ದಡ ದಡ' ಹಾರತೊಡಗಿತು. ಆಗ ಎದೆಯೊಡೆದು ನೀರಾಯಿತು. ಆ ನೀರು ಮುಖದ ಮೇಲೆ ಸೆಲೆಯೊಡೆಯಿತು; ಕಣ್ಣುಗಳಲ್ಲಿ ಒಸರತೊಡಗಿತು. ಅದೇ ನೀರು ಪ್ರತಿಯೊಂದು ಧಮನಿಗಳಲ್ಲಿ ತುಂಬಿ ನನ್ನನ್ನು ಪೂರಾ ನಿರ್ವಿಣ್ಣಳನ್ನಾಗಿ ಮಾಡಿತು. ಪ್ರಕೃತಿಯ ಸ್ವಸ್ಥತೆಯ ನೆವದಿಂದ ದೇವಾಲಯಕ್ಕೆ ಹೊರಡುವ ಸಂಧಿಯನ್ನು ತಪ್ಪಿಸಿ ಬಿಟ್ಟಿದ್ದರೆ ಒಳಿತಾಗುತ್ತಿತ್ತೆಂದು ನನಗೆ ಆಗ ತಿಳಿಯಿತು. ಪಾಪವೂ ಹೊರಬೀಳುವ ಪರಿತಾಪವೂ ಯತ್ನದಿಂದ ಮುಚ್ಚುವ ಬಗೆ ಹೇಗೆ? ನನ್ನ ಮನಸ್ಸು ಚಿಂತಾಗ್ನಿಯಿಂದ ದಹಿಸುತ್ತಿರುವಾಗ ಕನ್ಯೆಯು ಆರು ತಿಂಗಳು "ಗರ್ಭಿಣಿಯಿದ್ದಂತೆ ತೋರುವಳು!" ಎಂಬ ಮಾತುಗಳು ನನ್ನ ಕಿವಿಗೆ ಬಿದ್ದವು. ಕಿವಿಯಲ್ಲಿ ಕಾದೆಣ್ಣೆ ಹೊಯ್ದಂತಾಯಿತು. ನನ್ನ ಸುತ್ತುಮುತ್ತಲಿದ್ದ ಸುವಾಸಿನಿಯರಲ್ಲಿ ಇದೇ ಗಲಭೆಯು ನಡೆಯಿತು. ಆ ಗಲಭೆಯು ನನ್ನ ತಾಯಿಯ ಕಿವಿಯ ವರೆಗೆ ಹೋಯಿತು. ಎಲ್ಲರೂ ಮನೆಗೆ ಹೋದೆವು. ನನ್ನ ತಾಯಿಯು ದೊಡ್ಡದನಿ ತೆಗೆದು ಅಳತೊಡಗಿದಳು. ನನ್ನ ರಹಸ್ಯವು ಹೊರಬಿತ್ತು. ಗುಟ್ಟು ರಟ್ಟಾಯಿತು. ನಾನು ಘಟ್ಟಾದೆನು. ಮನೆಯಲ್ಲಿ ನೋಡಿದತ್ತ ಕೋಲಾಹಲವದ್ದಿತು. ಎಲ್ಲರೂ ನನಗೆ ಛೀ ಮಾಡಿದರು; ಬೈದರು; ನಿಂದೆಯಾಡಿದರು. ನಾನು ಆಗ ನಿಜವಾಗಿಯೂ ಆರು ತಿಂಗಳು ಗರ್ಭಿಣಿಯಾಗಿದ್ದೆನು!

"ನಾನು ಪಾತಕಿಯೆಂದು ನಿರ್ಧರಿಸಲ್ಪಟ್ಟೆನು. ರಜಪುತರ ಪವಿತ್ರ ಕುಲಕ್ಕೆ ಕಲಂಕ ಹಚ್ಚಿದಳೆಂದು ಎಲ್ಲರೂ ಕೂಗಹತ್ತಿದರು. ನನ್ನ ತಂದೆಯು ರೌದ್ರಾವತಾರ ತಾಳಿದನು. ಕುಲಕಲಂಕಿನಿಯಾದ ನನ್ನ ಕೊಲೆ ಮಾಡಬೇಕೆಂದು ಅವನು ನಿರ್ಧರಿಸಿದನು. ನಾನು ಇದು ವರೆಗೆ ಎಲ್ಲರಿಗೂ ವಾತ್ಸಲ್ಯದವಳಾಗಿದ್ದೆನು; ನನ್ನ ಪಾಪಕೃತ್ಯವು ಬೈಲಿಗೆ ಬಿದ್ದ ಕೂಡಲೆ ಎಲ್ಲ ಜನರ ಕ್ಷೋಭೆಗೆ ಗುರಿಯಾದೆನು.

"ರಜಪುತರು ಅನೇಕ ಬಗೆಯ ಸಂಕಟಗಳನ್ನು ಆನಂದದಿಂದ ಸಹಿಸುವರು. ಅನ್ನ ನೀರಿಲ್ಲದೆ ಬಳಲುವದಕ್ಕೆ ಸಿದ್ಧರಾಗುವರು. ಕೇಸರಿಯಾ ವ್ರತಾಚರಣೆ ಮಾಡಿ ತಮ್ಮ ಆತ್ಮಬಲಿದಾನ ಮಾಡಲು ಹಿಂದೆಮುಂದೆ ನೋಡಲಾರರು; ಆದರೆ ಚರಿತ್ರ ದೋಷವನ್ನು ಅವರು ಎಂದೂ ಸಹಿಸಲಾರರು. ಅದರಲ್ಲಿ ಸ್ತ್ರೀಯರ ಚರಿತ್ರವು ಕಲಂಕಿತವಾದರೆ ಅವರು ಎಂದೂ ತಡೆದುಕೊಳ್ಳಲಾರರು. ಹೊಟ್ಟೆಯ ಮಗಳು ಅಧರ್ಮಾಚರಣೆ ಮಾಡಿದ್ದಕ್ಕಾಗಿ ನನ್ನ ತಂದೆಯ ಮನಃಸ್ಥಿತಿಯು ಹೇಗಾಯಿತೆಂಬ ದನ್ನು ಬಾಯಿಂದ ಹೇಳಿದರೆ ತೀರುವಂತಿಲ್ಲ. ಅವನು ನನ್ನ ಶಿರಚ್ಛೇದನ ಮಾಡ ಬೇಕೆಂಬ ಉದ್ದೇಶದಿಂದ ಖಡ್ಗವನ್ನೆತ್ತಿಬಂದನು. ತಂದೆಯು ಕಠೋರ ಕರ್ತವ್ಯ ಮಾಡತೊಡಗಿದ್ದನ್ನು ನೋಡಿ, ನನ್ನ ತಾಯಿಯ ಹೃದಯವು ಕರಗಿತು. ಅಪತ್ಯ ಪ್ರೇಮವು ದುರಿತಕ್ರಮವಾದದ್ದೇಸರಿ. ತಾಯಿಯು ನನ್ನ ಪ್ರಾಣರಕ್ಷಣೆಗಾಗಿ ಬಹಳ ವಾಗಿ ಯತ್ನಿಸಿದಳು. ಅದಳ ಪ್ರಯತ್ನಕ್ಕೆ ಫಲವೂ ದೊರೆಯಿತು. ನಾನು ಬದುಕಿಕೊಂಡೆನು. ಜೀವದಿಂದುಳಿದು ಮನೆಯಲ್ಲಿಯೇ ನಿಂತುಕೊಳ್ಳಲಿಕ್ಕೆ ಮಾತ್ರ ನನಗೆ ಅನುವು ದೊರೆಯಲಿಲ್ಲ. ಅವಿಚಾರಿಯೂ ಪಶುಸಮಾನವೂ ಆದ ಪುರುಷ ಮನೋವೃತ್ತಿಯು ನನ್ನನ್ನು ಸುಖದಿಂದ ವಂಚಿತಳನ್ನಾಗಿ ಮಾಡಿತು; ಗೃಹತ್ಯಾಗ ಮಾಡಿಸಿತು. ನಾನು ನಿರಾಧಾರಿಯಾಗಿ ವನ ವನ ತಿರುಗುತ್ತಲೂ, ಕಂದ ಮೂಲಾದಿ ಗಳನ್ನು ಭಕ್ಷಿಸುತ್ತಲೂ ಕಾಲಹರಣ ಮಾಡಬೇಕಾಯಿತು. ಕಾಲಕ್ಕೆ ಸರಿಯಾಗಿ ನಾನು ಪುತ್ರರತ್ನವನ್ನು ಪಡೆದೆನು. ಅವನ ಲಾಲನೆ ಪಾಲನೆ ಮಾಡುತ್ತ, ಇದ್ದವನ್ನ ಅವಸ್ಥೆಯಲ್ಲಿಯೇ ಸುಖವನ್ನು ಕಲ್ಪಿಸಿಕೊಂಡು ಕಾಲಹರಣ ಮಾಡತೊಡಗಿದೆನು ನನ್ನ ಮಗನು ಬೆಳೆದು ದೊಡ್ಡವನಾದನು ಈ ವಿಶಾಲವಾದ ಸೃಷ್ಟಿಯಲ್ಲಿ ತಾಯಿ ಮಕ್ಕಳಿಬ್ಬರಿಗೂ ಪರಸ್ಪರರ ಹೊರತು ನನ್ನವರೆಂಬುವರು ಯಾರೂ ಇಲ್ಲದಾಯಿತು.

"ನನ್ನ ಕುಮಾರನಾದ ಕೃಷ್ಣಲಾಲನು ಶೌರ್ಯ ಧೈರ್ಯಾದಿ ಗುಣಗಳಿಂದ ವಂಗನವಾಬನ ಸೈನ್ಯದಲ್ಲಿ ಸೇರಿಕೊಂಡನು. ಬರಬರುತ್ತ ಅವನು ಒಂದು ಪಥಕದ ಸೇನಾನಾಯಕನಾದನು. ಆಗಿನಿಂದ ನಾವಿಬ್ಬರು ಬಂಗಾಲದಲ್ಲಿರತೊಡಗಿದೆವು. ಮಗನ ಮದುವೆ ಮಾಡಬೇಕೆಂದು ನಾನು ಯತ್ನಿಸತೊಡಗಿದೆನು. ದೂರದೇಶ ದಿಂದ ಬಂದವರಾದ ನಮ್ಮೊಡನೆ ಶರೀರಸಂಬಂಧ ಮಾಡಲಿಕ್ಕೆ ಯಾವ ರಜಪುತನೂ ಒಪ್ಪಿಕೊಳ್ಳಲಿಲ್ಲ ಕುಲೀನ ರಜಪುತ ಕನ್ನಿಕೆಯು ದೊರೆಯದಂತಾದ್ದರಿಂದ ನನಗೆ ಅತ್ಯಂತ ದುಃಖವಾಯಿತು. ನನ್ನ ಹಾಗು ನನ್ನ ಮಗನ ಪ್ರಯತ್ನಕ್ಕೆ ಯಶಸ್ಸು ದೊರೆಯದಾದ ಮೇಲೆ, ಮುರ್ಶಿದಾಬಾದದ ಬಳಿಯಲ್ಲಿದ್ದ ಒಂದು ಹಳ್ಳಿಯೊಳಗಿನ ಒಬ್ಬ ವೇಶ್ಯೆಯ ಕನ್ನಿಕೆಯನ್ನು ಸಿಗೆದುಕೊಳ್ಳಬೇಕಾಯಿತು. ವೇಶ್ಯಾಕನ್ನಿಕೆ ಯೊಡನೆ ಕೃಷ್ಣಲಾಲನ ವಿವಾಹವಾಯಿತು. ಕೃಷ್ಣಲಾಲನಿಗೆ ಒಬ್ಬ ಮಗಳು ಹುಟ್ಟಿ ದಳು. ಮುಂದೆ ಸ್ವಲ್ಪ ದಿನಗಳಲ್ಲಿ ಅವನ ಪತ್ನಿಯು ಮರಣಹೊಂದಿದಳು. ಮಗೂ, ನೀನೇ ಕೃಷ್ಣಲಾಲನ ಮಗಳಾದ ಅರುಣಕುಮಾರಿಯು ವೇಶ್ಯಾಕನ್ನಿಕೆಯ ಪುತ್ರಿಯು:

ನೀನು ವೇಶ್ಯಾಕುಲದಲ್ಲಿಯ ಸ್ತ್ರೀಯಿಂದ ಜನಿಸಿದವಳಾದರೂ, ಕ್ಷತ್ರಿಯ ಕುಲ
ಬಾಲೆಯರಿಗುಚಿತವಾದ ಗುಣಗಳಿಂದ ಮಂಡಿತಳಾಗಿರುವೆಯೆಂಬದು ನನಗೆ
ಗೊತ್ತಿದೆ. ಆದರೆ ಲೌಕಿಕ ದೃಷ್ಟಿಯು ವಿಚಿತ್ರವಾದದ್ದಿರುವದು. ನೀನು ಎಂತಹ
ತೇಜಸ್ವಿನಿಯಾಗಿದ್ದರೂ ರಜಪುತ ಬಾಲೆಯರಿಗೆ ದೊರೆಯುವ ಗೌರವವು ನಿನಗೆ ದೊರೆ
ಯದು. ರಜಪುತ ವೀರನು ನಿನ್ನನ್ನು ಅರ್ಧಾಂಗಿಯೆಂದು ಸ್ವೀಕರಿಸನು. ವೀರ
ಪುತ್ರಿ, ನೀನು ಗುಣಾಢ್ಯಳಾಗಿದ್ದರೂ ಗುಣವರ್ಣನೆ ಮಾಡಿಸಿಕೊಳ್ಳಲಿಕ್ಕೆ ಅನರ್ಹ
ಳಾದದ್ದಕ್ಕಾಗಿ ನನಗೆ ಪರಮಾವಧಿ ದುಃಖವಾಗುವದು. ವಿಜಯಲಾಲನು ನಿನ್ನ
ಮನೆತನದ ವೃತ್ತಾಂತವನ್ನು ಅರಿಯನು. ಅಂತೆಯೇ ನಿಸ್ಸ್ಪೃಹ ವೃತ್ತಿಯಿಂದ
ನಿನ್ನನ್ನು ಹೊಗಳಿದನು. ದೋಷೈಕ ದೃಷ್ಟಿಯುಳ್ಳ ಸಮಾಜವು ನಿನ್ನನ್ನು ದೂಷಿ
ಸುತ್ತಿರುವದು. ಸಮಾಜವು ಗುಣಗ್ರಾಹಿಯಾದರೆ ನೀನು ನಿಜವಾಗಿ ಅಭ್ಯುದಯ
ಹೊಂದುವೆ. ನೀನು ವೇಶ್ಯಾಕುಲಪುತ್ರಿಯೆಂಬದನ್ನು ವಿಜಯಲಾಲನು ತಿಳಿಯುವ
ದಕ್ಕಿಂತ ಮುಂಚಿತವಾಗಿ ನಿನ್ನ ವಿವಾಹಕಾರ್ಯ ಮಾಡುವದು ಯೋಗ್ಯವೆನಿಸತೊಡ
ಗಿದೆ.''

ಜಾಹ್ನವಿಯು ಹೇಳಿದ ವಂಶವೃತ್ತವನ್ನು ಕೇಳಿ, ಅರುಣಕುಮಾರಿಯ ಮನಸ್ಸು
ಅನೇಕ ಬಗೆಯ ವಿಚಾರಗಳಿಂದ ಅಲ್ಲೋಲಕಲ್ಲೋಲವಾಗತೊಡಗಿತು. ಖೇದ,
ಆಶ್ಚರ್ಯ, ತಿರಸ್ಕಾರ, ಔದಾಸೀನ್ಯ ಮೊದಲಾದ ಅನೇಕ ವಿಕಾರಗಳು ಅವಳಲ್ಲಿ ಹುಟ್ಟಿ
ಮನಸ್ಸನ್ನು ವಿಭ್ರಮಗೊಳಿಸಿದವು. ಅವಳು ಬಾಲಿಕೆಯಾದರೂ ಪ್ರೌಢವಿಚಾರ
ದವಳಾಗಿದ್ದಳು. ಅವಿಚಾರಿಗಳೂ ಕುತ್ಸಿತರೂ ಆದ ಜನರೇ ತನ್ನ ತಂದೆಯ ಹಾಗು
ಅಮ್ಮನ ಸೌಖ್ಯವನ್ನು ಹಾಳು ಮಾಡಿ, ಅವರನ್ನು ದೀನಾವಸ್ಥೆಗೆ ತರಲಿಕ್ಕೆ ಕಾರಣ
ರಾದರೆಂದು ಅರುಣಳ ಮನವರಿಕೆಯಾಯಿತು. ಸ್ವಲ್ಪ ಹೊತ್ತಿನ ಮೇಲೆ ಅವಳು
ಜಾಹ್ನವಿಯನ್ನು ಕುರಿತು, "ಅಮ್ಮಾ, ಸಮಾಜದ ದೃಷ್ಟಿಯು ವಿಶಾಲವಾದ
ಹೊರತು ಎಲ್ಲರೂ ಸುಖಸಾಮ್ರಾಜ್ಯದಲ್ಲಿ ಕಾಲಹರಣ ಮಾಡುವದು ಸಾಧ್ಯವಿಲ್ಲ.
ಜನರ ದೃಷ್ಟಿಕೋನವು ಸ್ಥಿತ್ಯಂತರ ಹೊಂದುವ ದಿನವೇ ಸುದಿನವೆಂದು ತಿಳಿಯಬಹುದು.
ಅಂತಹ ಅಮೃತ ದಿನವು ಎಂದು ಲಭಿಸುವದೋ ಏನೋ! ಅಮ್ಮಾ, ನನ್ನ ತಂದೆ
ಯವರಾದ ಕೃಷ್ಣಲಾಲರು ಎಲ್ಲಿರುವರು? ನನ್ನ ತಾಯಿಯು ಮರಣ ಹೊಂದಿದ
ಮೇಲಿನ ಸಂಗತಿಯನ್ನು ಹೇಳು."

"ಅರುಣ!'' ಜಾಹ್ನವಿಯು, "ನಿನ್ನ ತಾಯಿಯು ಮಡಿದ ಬಳಿಕ, ಕೃಷ್ಣ
ಲಾಲನ ಮನಸ್ಸು ಉದಾಸೀನವಾಯಿತು. ಅವನು ನನ್ನನ್ನೂ ಎಳೆ ಮಗುವಾಗಿದ್ದ
ನಿನ್ನನ್ನೂ ಇಲ್ಲಿರಿಸಿ, ನಾಲ್ಕು ತಿಂಗಳಿಗೆ ಆರು ತಿಂಗಳಿಗೆ ಒಂದು ಬಾರಿ ಬಂದು ಹೋಗು
ತ್ತಿದ್ದನು. ನೀನು ವೇಶ್ಯಾಕುಲದ ಸ್ತ್ರೀಯಿಂದ ಜನಿಸಿದವಳೆಂಬದು ಜನರಿಗೆ ತಿಳಿಯ
ಬಾರದೆಂದೇ ಅವನು ನಿನ್ನನ್ನೂ ನನ್ನನ್ನೂ ಇಲ್ಲಿ ಇರಿಸಿದನು. ಒಮ್ಮೆ ನಿನ್ನ
ತಂದೆಯು ಹೇರಳವಾದ ಧನವನ್ನು ತೆಗೆದುಕೊಂಡು ಮುರ್ಶಿದಾಬಾದದಿಂದ ಹೊರ

ಟಾಗ ಹಾದಿಯಲ್ಲಿ ಕಳ್ಳರ ಕೈಯಲ್ಲಿ ಸಿಕ್ಕಸಂತೆ. ಮುಂದೆ ಅವನ ಅವಸ್ಥೆಯೇನಾಯಿ ತೆಂಬದು ತಿಳಿದಿಲ್ಲ. ಅವನು ಜೀವಂತನಾಗಿರಬಹುದೆಂದು ಜನರು ಅನುಮಾನ ಪಡುತ್ತಿರುವರು."

"ಅಮ್ಮಾ, ವಿಜಯುಲಾಲರು ಯಾರು?" ಎಂದು ಅರುಣಕುಮಾರಿಯು ಉತ್ಕಂಠೆಯಿಂದ ಕೇಳಿದಳು.

"ಅರುಣ, ವಿಜಯುಲಾಲನು ಉಚ್ಚಕುಲದ ರಜಪುತ ವಂಶದಲ್ಲಿ ಜನಿಸಿದವನು. ಅವನ ತಂದೆಯು ಮುರ್ಶಿದಾಬಾದದ ನವಾಬನಲ್ಲಿ ಸರದಾರಿಕೆ ಹೊಂದಿದ್ದನು. ಯುದ್ಧದಲ್ಲಿ ಅವನ ಕಾಲು ಮುರಿದದ್ದರಿಂದ ಸೇವಾನಿವೃತ್ತನಾಗಿ ಇಲ್ಲಿಗೆ ಬಂದನು. ಕೃಷ್ಣಲಾಲನಿಗೂ ವಿಜಯುಲಾಲನ ತಂದೆಗೂ ಒಳ್ಳೆಯ ಸ್ನೇಹವಿತ್ತು. ಅಂತೆಯೇ ವಿಜಯುಲಾಲನು ಇಲ್ಲಿಗೆ ಬರಹೋಗುವದನ್ನು ಮಾಡ ತೊಡಗಿದನು. ಅರುಣ, ನಾನು ನಿನ್ನಿಂದ ರಹಸ್ಯವಾಗಿರಿಸಿಕೊಂಡ ಚರಿತ್ರವು ಇದೇ. ವಿಜಯುಲಾಲನು ಶೂರನೂ ಉಚ್ಚ ರಜಪುತಕುಲದಲ್ಲಿ ಜನಿಸಿದವನೂ ಇರುವನು. ಅಂತೆಯೇ ಅವನಿಗೆ ನಿನ್ನನ್ನು ಧಾರೆಯೆರೆದು ಕೊಡಬೇಕೆಂದು ಮನಸ್ಸು ಮಾಡಿರುವೆನು."

ಅರುಣಕುಮಾರಿಯು ಜಾಹ್ನವಿಯು ಹೇಳಿದ ವೃತ್ತಾಂತದಿಂದ ಬೆರಗಾದಳು. ಆಗ ಅವಳು,—"ಅಮ್ಮಾ! ನಿನ್ನ ಕರ್ಮಕಥೆಯು ನಿಜವಾಗಿ ರಹಸ್ಯಪೂರ್ಣವಿರುವದು" ಎಂದು ಉದ್ಗಾರತೆಗೆದಳು.

---

## ಅರುಣಳು ನನ್ನ ಪಂಚಪ್ರಾಣಳು.

ಅರುಣಕುಮಾರಿಯು ತಾರುಣ್ಯದ ಸೀಮೆಯಲ್ಲಿ ಅದೇ ಪದಾರ್ಪಣ ಮಾಡಿದ್ದಳು. ಮೊದಲೇ ಅಂದವಾಗಿದ್ದ ಅವಳ ದೇಹಲತೆಯು ಈಗ ಮತ್ತಿಷ್ಟು ಸೊಬಗುಗೊಂಡು ಮನೋಹರವಾಗಿ ಕಾಣುತ್ತಿತ್ತು. ವಯೋಮಾನಕ್ಕನುರೋಧವಾಗಿ ಅವಳ ಬಾಹ್ಯಾಂಗವು ಸ್ಥಿತ್ಯಂತರ ಹೊಂದಿದ್ದರೂ, ಅಂತರಂಗವು ಮಾತ್ರ ನಿರ್ವಿಕಾರವಾಗಿಯೇ ಇತ್ತು. ಬಾಲಸ್ನೇಹಿಯಾದ ವಿಜಯುಲಾಲನನ್ನು ಮೊದಲಿನಂತೆಯೆ ನಿರ್ವಿಕಾರಮನಸ್ಸಿನಿಂದ ಪ್ರೀತಿಸುತ್ತಿದ್ದಳು. ವಿಜಯುಲಾಲನು ಮಾತ್ರ ಪ್ರಣಯಪೂರ್ಣಹೃದಯದವನಾಗಿದ್ದನು. ಅರುಣಕುಮಾರಿಯನ್ನು ವರಿಸಬೇಕೆಂಬ ಇಚ್ಛೆಯು ಅವನ ಮನಸ್ಸಿನಲ್ಲಿ ಎಂದಿನಿಂದಲೋ ಉದಯಿಸಿ ದಿನದಿನಕ್ಕೆ ಅಭಿವೃದ್ಧಿ ಹೊಂದುತ್ತ ನಡೆದಿತ್ತು. ವಿಜಯುಲಾಲನ ಪ್ರೇಮದ ಪಡಿಕಟ್ಟು ಯಾವವಿಧದ್ದಿರುವದೆಂಬದನ್ನು ಪರೀಕ್ಷಿಸುವಷ್ಟು ಯೋಗ್ಯತೆಯು ಅರುಣಕುಮಾರಿಯಲ್ಲಿ ಇದ್ದಿಲ್ಲವೆಂದರೂ ಸಲ್ಲುವದು. ವಿಜಯುಲಾಲನು ತನ್ನ ಪರಮಮಿತ್ರನೆಂದು ಅವಳು ಗ್ರಹಿಸಿಕೊಂಡಿದ್ದಳು. ಬೇಟೆಯಾಡುವದು ಕುದುರೆಯನ್ನೇರುವದು ಮೊದಲಾದ ಕಲೆಗಳಲ್ಲಿ ಅರುಣಕುಮಾರಿಯು ವಿಜಯುಲಾಲನಷ್ಟೇ ಕುಶಲಳಾಗಿದ್ದಳು. ಶಸ್ತ್ರ

ನೈಪುಣ್ಯದಲ್ಲಿ ಅವಳು ವಿಜಯಲಾಲನಿಗಿಂತ ಹೆಚ್ಚಿನ ಯೋಗ್ಯತೆ ಹೊಂದಿದ್ದಳು. ಅವಳ ಗುರಿಯು ಎಂದೂ ಹುಸಿಹೋಗುತ್ತಿರಲಿಲ್ಲ.

ಕಪೋತಾಕ್ಷೀ ನದೀತೀರದಲ್ಲಿದ್ದ ಅರಣ್ಯದಲ್ಲಿ ಒಂದು ದೊಡ್ಡ ಹುಲಿಯು ಬಂದಿರುವದೆಂಬ ವಾರ್ತೆಯನ್ನು ವಿಜಯಲಾಲನು ಜನರ ಬಾಯಿಂದ ಕೇಳಿದ್ದನು. ಆ ಹುಲಿಯನ್ನು ಹೊಡೆಯಬೇಕೆಂಬ ವಿಚಾರವು ಅವನ ಮನಸ್ಸಿನಲ್ಲಿ ಹುಟ್ಟಿತ್ತು. ಹುಲಿಯು ಬಹಳೇ ದೊಡ್ಡದಿದ್ದುದರಿಂದ, ಒಬ್ಬನೇ ಬೇಟೆಗೆ ಹೊರಡಲಿಕ್ಕೆ ಅವನು ಹಿಂಜರಿಯತೊಡಗಿದ್ದನು. ಅರುಣಕುಮಾರಿಯೊಬ್ಬಳ ಸಹಾಯವು ದೊರೆತರೆ ಕೆಲಸ ವಾಗುವದೆಂದು ಅವನು ನಿರ್ಧರಿಸಿಕೊಂಡನು. ಅನಂತರದಲ್ಲಿ ಅವನು ಅರುಣ ಕುಮಾರಿಯ ಕುಟೀರಕ್ಕೆ ಬಂದು,-"ಅರುಣ, ನೀನು ಇಂದು ಬೇಟೆಗೆ ಬರುವೆಯಾ?"

"ಇದೇನ ಕೇಳುವಿರಿ? ವಿಜಯಲಾಲರೆ. ಬೇಟೆಗೆ ಬರಲಿಕ್ಕೆ ನಾನು ಎಂದಾದರೂ ಹಿಂಜರಿದಿರುವೆನೇನು? ಒಮ್ಮೊಮ್ಮೆ ನೀವೇ ನನ್ನನ್ನು ಬಿಟ್ಟು ಹೋಗುತ್ತೀರಿ. ಬೇಟೆಯೆಂದ ಕೂಡಲೆ ನನ್ನ ಮೈಯಲ್ಲಿ ಆವೇಶವು ಸಂಚಾರವಾಗುತ್ತದೆ."

"ನಿನ್ನ ಮಾತು ನಿಜವು. ಕ್ಷಾತ್ರಬಾಲೆಯಾದ ನೀನು ಅಂತಹ ಧೈರ್ಯಶಾಲಿನಿಯೆ ಇರುವೆ. ಆದರೆ—"

"ಆದರೆ? ನಡುವೆ ಆದರೆ ಎಂಬ ಮಾತೇಕೆ?"

"ಇಂದಿನ ಬೇಟೆಯು ಸಾಮಾನ್ಯವಾದದ್ದಿಲ್ಲ. ಅದು ನಿನ್ನಂತಹಳ ಯೋಗ್ಯತೆಗೆ ಮೀರಿದ್ದಿರುವದು."

",ನನ್ನ ಯೋಗ್ಯತೆಗೆ ಮೀರಿದ್ದಿರುವದೆ? ಅಂತಹ ಬೇಟೆಯಾವದು?"

"ಹುಲಿಯ ಬೇಟೆಯು!"

"ಓಹೋ! ಹೀಗೇನು?" ಅರುಣಕುಮಾರಿಯು ನುಡಿದು, ನಗುತ್ತ, "ನನ್ನನ್ನು ಯಾವ ಬೇಟೆಯಾಡುವವಳೆಂದು ತಿಳಿದಿರುವಿರಿ? ಹುಲಿ ಸಿಂಹ ವನವರಾಹಗಳ ಬೇಟೆಯಾಡುವ ಯೋಗ್ಯತೆಯು ನನ್ನಲ್ಲಿಲ್ಲವೆಂದು ನಿಮ್ಮ ಅಭಿಪ್ರಾಯವಿದ್ದಂತಾಯಿತು. ನನ್ನನ್ನೇನು ನರಿ ಮೊಲಗಳ ಬೇಟೆಯಾಡುವವಳೆಂದು ತಿಳಿದಿರುವಿರಾ?"

"ಛೇ! ಅರುಣ, ನಾನು ಹಾಗೆ ಹೇಳಲಿಲ್ಲ. ಈಗ ಕಪೋತಾಕ್ಷೀ ತೀರದಲ್ಲಿ ಬಂದ ಹುಲಿಯು ಸಾಧಾರಣತರದ್ದಿರುವದಿಲ್ಲ. ಎಷ್ಟೋ ನಾಮಾಂಕಿತ ಧನುರ್ಧಾರಿಗಳನ್ನು ಮಣ್ಣು ಮುಕ್ಕಿಸಿದ ಏಳು ಮೊಳದ ಹುಲಿಯು ಈಗ ಬಂದಿರುವದು."

"ಏನೂ ಅಡ್ಡಿಯಿಲ್ಲ. ಆ ಹುಲಿಯ ಬೇಟೆಗೆ ಹೊರಡಬೇಕೆಂದು ನನ್ನ ಮನಸ್ಸು ಆತುರಗೊಂಡಿದೆ. ನಿಮ್ಮ ಅಭಿಪ್ರಾಯವೇನು?"

"ಅರುಣಕುಮಾರಿ, ನೀನೊಬ್ಬಳು ಸಹಾಯಕಳಾದರೆ ನಿರಾಯಾಸವಾಗಿ ನಾನು ಆ ಹುಲಿಯನ್ನು ಹೊಡೆಯುವೆನು ಅದಕ್ಕಾಗಿಯೇ ನಾನು ಇಲ್ಲಿಗೆ ಬಂದೆನು. ದೊಡ್ಡ ಬೇಟೆ ಯಿರುವದರಿಂದ ಒಬ್ಬರಿಗಿಂತಲೂ ಇಬ್ಬರಿರುವದು ಲೇಸು."

ಅರುಣಕುಮಾರಿಯು ಚಟ್ಟನೆ ಎದ್ದು ತನ್ನ ಬಿಲ್ಲನ್ನೂ ಖಡ್ಗವನ್ನೂ ತೆಗೆದು

ಕೊಂಡಳು. ಶಸ್ತ್ರಪಾಣಿಯಾದ ಆವಳನ್ನು ನೋಡಿ ಜಾಹ್ನವಿಯು—"ಕುಮಾರಿ, ಆ ಬೇಟೆಗಾರನುಬೇಟೆಯಾಡಲಿಕ್ಕೆ ಬಂದಿರುವನೇನು? ಬೇಟೆಗೆ ಹೊರಟೆಯೇನಮ್ಮಾ? ವಿಜಯಲಾಲನು ಎಲ್ಲಿರುವನು?"

"ಹೊರಗೆ ಕುಳಿತಿರುವರು."

ಅರುಣಕುಮಾರಿಯು ಹೀಗೆ ಹೇಳಿದ ಕೂಡಲೆ, ವಿಜಯಲಾಲನು ಒಳಗೆ ಬಂದು ಜಾಹ್ನವಿಯನ್ನು ಕುರಿತು,—"ಅಮ್ಮಾ, ಅರುಣಕುಮಾರಿಯು ಬೇಟೆಗಾಗಿ ಯಾವಾಗಲೂ ಉತ್ಸುಕಳಾಗಿರುವಳು. ಇವಳ ಇಚ್ಛೆಯಂತೆ ನಾನು ನಡೆಯುತ್ತಿರುವೆನಲ್ಲದೆ, ನಾನು ಬೇಟೆಯಾಡುವದಿಲ್ಲ. ಶಸ್ತ್ರಾಸ್ತ್ರ ನಿಪುಣಳಾದ ಇವಳು ಬೇಟೆಯಾಡುವದಕ್ಕೆ ಆತುರಳಾಗಿದ್ದುದರಲ್ಲಿ ತಪ್ಪಿಲ್ಲ."

"ವಿಜಯಲಾಲ, ಅರುಣಳು ನನ್ನ ಪಂಚಪ್ರಾಣಳು. ನನ್ನ ವಂಶದ ಅಂಕುರವು. ಇವಳ ಜೀವಿತವು ಸುರಕ್ಷಿತವಾಗಿರಬೇಕೆಂದು ನನ್ನ ಇಚ್ಛೆಯಿರುವದು. ಹುಲಿ ಸಿಂಹಗಳ ಬೇಟೆಯಾಡುವಾಗ ಇವಳ ಜೀವಕ್ಕೆಲ್ಲಿ ಅಪಾಯವು ತಟ್ಟುವದೋ ಎಂದು ನನ್ನ ಮನಸ್ಸು ತರಹರಗೊಳ್ಳುತ್ತಲಿದೆ. ಚಿಕ್ಕವಳಾದ ನನ್ನ ಅರುಣಳಲ್ಲಿ ದೊಡ್ಡದೊಡ್ಡ ಬೇಟೆಯಾಡುವ ಯೋಗ್ಯತೆಯು ಹೇಗೆ ಬಂದೀತು? ಇವಳ ಜೀವಿತವು ಸುರಕ್ಷಿತವಾಗಿರಬೇಕೆಂದು ನನ್ನಂತೆ ನೀನಾದರೂ ಇಚ್ಛಿಸುತ್ತಿರುವೆಯೆಂಬದನ್ನು ನಾನು ಬಲ್ಲೆನು. ಆದರೂ ಪ್ರಸಂಗಗಳು ಹೇಳಿ ಕೇಳಿ ಬರುವದಿಲ್ಲ. ಅಂತೆಯೇ ನಿನಗೆ ಸೂಚನೆ ಮಾಡಿರುವೆನು.'

"ಅಮ್ಮಾ," ವಿಜಯಲಾಲನು ಗಾಂಭೀರ್ಯದಿಂದ, "ನಿಮ್ಮಂತೆ ನಾನೂ ಅರುಣಕುಮಾರಿಯಲ್ಲಿ ಪ್ರೇಮವುಳ್ಳವನಾಗಿರುವೆನು. ಇವಳು ಚಿಕ್ಕವಳಾದರೂ ಇವಳಲ್ಲಿಯ ಶೌರ್ಯ ಸಾಹಸಗಳು ಚಿಕ್ಕವಿಲ್ಲ. ಶಸ್ತ್ರಾಸ್ತ್ರ ವಿದ್ಯೆಯಲ್ಲಿ ಇವಳು ನನಗಿಂತಲೂ ಹೆಚ್ಚಿನ ಪ್ರಾವೀಣ್ಯವನ್ನು ದೊರಕಿಸಿರುವಳು. ನೀವು ಇವಳ ಜೀವಿತದ ವಿಷಯವಾಗಿ ಯೋಚನೆ ಮಾಡಬೇಡಿರಿ. ನಿಮಗೆ ಹೇಗೋ ಹಾಗೆಯೇ ಅರುಣಳು ನನಗೆ ಪಂಚಪ್ರಾಣಳು."

"ವಿಜಯಲಾಲ, ಉತ್ಸಾಹಿಗಳಾದ ನಿಮ್ಮಂತಹ ತರುಣರಿಗೆ ಮೇಲು ಬುದ್ಧಿಯು ಕಡಿಮೆ. ಹುಲಿಯು ದೊಡ್ಡದಿರುವದೆಂದು ನೀನು ಹೇಳಿದ್ದನ್ನು ಕೇಳಿದೆನು. ದೊಡ್ಡ ಬೇಟೆಯು ಹವ್ಯಾಸಕ್ಕೆ ಬಿದ್ದು ನೀವಿಬ್ಬರೂ ಗಂಡಾಂತರದಲ್ಲಿ ಬೀಳಬಾರದೆಂದು ಈಪರಿಯಾಗಿ ಹೇಳುತ್ತಿರುವೆನು. ಅರುಣಕುಮಾರಿಯು ಜೀವಕ್ಕೆ ಅಪಾಯ ವೊದಗಿದರೆ ನಾನು ಅರೆಕ್ಷಣವಾದರೂ ಬದುಕಿರಲಾರೆನು."

"ಅಮ್ಮಾ, ನೀವು ಇಷ್ಟೇಕೆ ಯೋಚಿಸುವಿರಿ? ಅರುಣಕುಮಾರಿಯನ್ನು ನಿಮಗೊಪ್ಪಿಸಿದರಾಯಿತೋ ಇಲ್ಲವೋ?"

"ಬೇಟೆಯಲ್ಲಿ ನನ್ನ ಜೀವಕ್ಕೆ ಅಪಾಯವೊದಗಿದರೆ?" ಅರುಣಕುಮಾರಿಯು ನಗುತ್ತ ವಿಜಯಲಾಲನನ್ನು ಕೇಳಿದಳು.

"ನಾನು ಅಮ್ಮನಿಗೆ ಮುಖವನ್ನೇ ತೋರಿಸುವದಿಲ್ಲ."

"ಅಮ್ಮಾ," ಅರುಣಕುಮಾರಿಯು ಜಾಹ್ನವಿಯನ್ನು ಕುರಿತು, "ಎಂದೂ ಹೀಗೆ ಆಲೋಚನೆಗೊಳಗಾಗದ ನೀನು ಇಂದು ಇಷ್ಟೇಕೆ ಸಂದೇಹಗೊಳ್ಳುವೆ? ಕೈಯಲ್ಲಿ ಶಸ್ತ್ರಾಸ್ತ್ರಗಳಿರುವಾಗ ನನಗೆ ಭಯವೇತರದು? ನೀನು ನಿಶ್ಚಿಂತಳಾಗಿರು."

ವಿಜಯಲಾಲನೂ ಅರುಣಕುಮಾರಿಯೂ ಜಾಹ್ನವಿಯನ್ನು ಒಡಂಬಡಿಸಿ ಶಸ್ತ್ರಾಸ್ತ್ರಸಿದ್ಧರಾಗಿ ಕಪೋತಾಕ್ಷೀತೀರದಲ್ಲಿದ್ದ ವನವನ್ನು ಸೇರಿದರು. ಅವರು ಗಿಡಗಳ ಗುಂಪುಗಳನ್ನೂ ಗುಪ್ತಗಂಹರಗಳನ್ನೂ ಹುಡುಕುತ್ತ ನಡೆದರು. ಎಷ್ಟು ವೇಳೆಯ ವರೆಗೆ ಹುಡುಕಿದರೂ ಹುಲಿಯ ಸಪ್ಪಳ ಕೇಳಲಿಲ್ಲ. ಬಹಳ ವೇಳೆಯ ವರೆಗೆ ಹುಡುಕಿ ಬೇಸತ್ತವರಾದ ಅವರು ಒಂದು ಗಿಡದ ಕೆಳಗೆ ವಿಶ್ರಾಂತಿಗಾಗಿ ಕುಳಿತರು. ಹುಲಿಯು ಕಣ್ಣಿಗೆ ಬೀಳದ್ದರಿಂದ ಅವರ ಮನಸ್ಸು ಉದಾಸೀನವಾಗಿತ್ತು. ಅಮ್ಮನ ಇಚ್ಛೆಯ ವಿರುದ್ಧವಾಗಿ ಹೊರಟು ಬಂದದ್ದರಿಂದ ಬೇಟೆಯು ದೊರೆಯಲಿಲ್ಲೆಂದು ಅವರು ಮಾತನಾಡುತ್ತ ಕುಳಿತಿದ್ದರು. ಅರುಣಕುಮಾರಿಯು ತನ್ನ ಕೈಯಲಿದ್ದ ಧನುಸ್ಸಿಗೆ ಶರವನ್ನು ಹೂಡಿ ಎದುರಿಗಿದ್ದ ಕಂಟಿಗೆ ಸ್ವಾಭಾವಿಕವಾಗಿ ಹೊಡೆದಳು ಕೂಡಲೆ ಭಯಂಕರವಾದ ಗರ್ಜನೆಯಾಯಿತು. ಅರುಣಕುಮಾರಿಯೂ ವಿಜಯಲಾಲನೂ ಚಟ್ಟನೆ ಎದ್ದು ನಿಂತು ತಮ್ಮ ಶಸ್ತ್ರಾಸ್ತ್ರಗಳನ್ನು ಸಾವರಿಸಿಕೊಂಡರು. ಅಷ್ಟರಲ್ಲಿ ಭಯಂಕರವಾದ ಹುಲಿಯು ಆ ಕಂಟಿಯೊಳಗಿಂದ ಹೊರಬಿದ್ದು ಅವರು ನಿಂತ ಸ್ಥಳದ ಕಡೆಗೆ ಓಡಿ ಬರತೊಡಗಿತು. ತೊಳಲುತರುಸುವ ಬಳ್ಳಿಯು ಕಾಲ್ತೊಡಕಿದಂತಾಯಿತೆಂದು ಇಬ್ಬರೂ ಸಂಭ್ರಮಗೊಂಡು, ಆ ಹುಲಿಯ ಮೇಲೆ ಶರ ಸಂಧಾನ ಮಾಡಹತ್ತಿದರು. ಸೊಕ್ಕಿದ ಹುಲಿಯು ಅವರ ಬಾಣದ ಪೆಟ್ಟುಗಳಿಂದ ಮತ್ತಿಷ್ಟು ತ್ವೇಷಗೊಂಡು, ಕಣ್ಣುಮುಚ್ಚಿ ತೆರೆಯುವಷ್ಟರಲ್ಲಿ ತೀರ ಸಮೀಪದಲ್ಲಿ ಬಂದಿತು. ವಿಜಯಲಾಲನು ತನ್ನ ಖಡ್ಗವನ್ನು ಒರೆಯಿಂದ ಹಿರಿದನು. ಅರುಣಕುಮಾರಿಯು ಒಂದೇಸಮನೆ ಶರವೃಷ್ಟಿ ಸುರಿಸತೊಡಗಿದ್ದಳು. ವ್ಯಾಘ್ರವು ಗರ್ಜನೆ ಮಾಡುತ್ತ ವಿಜಯಲಾಲನ ಮೇಲೆ ಹಾರಿತು. ಅವನು ಖಡ್ಗವನ್ನು ಅದರ ಬಾಯಿಗೆ ಚುಚ್ಚಹೋದನು. ದುರ್ದೈವದಿಂದ ಅವನ ಗುರಿ ತಪ್ಪಿತು. ಸ್ವಲ್ಪ ವಿಲಂಬವಾಗಿದ್ದರೆ ವಿಜಯಲಾಲನು ವ್ಯಾಘ್ರದ ಭಕ್ಷ್ಯಸ್ಥಾನಕ್ಕೆ ಆಹುತಿಯಾಗುತಿದ್ದನು. ಅಷ್ಟರಲ್ಲಿ ಅರಣುಕುಮಾರಿಯು ತನ್ನ ಕೈಯಲ್ಲಿದ್ದ ಬರ್ಚಿಯನ್ನು ಹುಲಿಯ ಬಾಯಿಯಲ್ಲಿ ಬಲವಾಗಿ ಚುಚ್ಚಿದಳು ಈ ಸಂಧಿಯನ್ನು ಸಾಧಿಸಿ ವಿಜಯಲಾಲನು ಅದರ ಕುತ್ತಿಗೆಗೆ ಖಡ್ಗಪ್ರಹಾರ ಮಾಡಿದನು. ಅರುಣಕುಮಾರಿಯು ಇದೇ ಸಂಧಿಯಲ್ಲಿ ತನ್ನ ಬರ್ಚಿಯನ್ನು ಕಿತ್ತುಕೊಂಡು, ಮತ್ತೊಮ್ಮೆ ಅದರ ಕುತ್ತಿಗಿಗೆ ಹೊಡೆದಳು. ಅವರಿಬ್ಬರ ಹೊಡತದಿಂದ ಹುಲಿಯು ಗತಾಸುವಾಗಿ ಇಳೆಗುರುಳಿತು

ಹುಲಿಯೊಡನೆ ಕಾದುವಾಗ ಅರುಣಕುಮಾರಿಯೂ ವಿಜಯಲಾಲನೂ ಬಹಳವಾಗಿ ದಣಿದಿದ್ದರು. ಕಪೋತಾಕ್ಷೀ ನದಿಗೆ ಹೋಗಿ ವಿಶ್ರಾಂತಿ ತೆಗೆದುಕೊಂಡು ಗುಡಿ

ಸಲಿಗೆ ಹೋಗಬೇಕೆಂದು ಅವರು ಯೋಚಿಸಿದರು. ಅವರಿಬ್ಬರೂ ನದಿಗೆ ಬಂದು, ಮುಖಮಾರ್ಜನಾದಿಗಳನ್ನು ತೀರಿಸಿಕೊಂಡು ವಾಲುಕಾಮಯ ಪ್ರದೇಶದಲ್ಲಿ ಕುಳಿತರು. ವರ್ಷಾಕಾಲವಿದ್ದುದರಿಂದ ನದಿಯು ತುಂಬಿ ಹರಿಯುತ್ತಿತ್ತು. ಅವರು ಕೆಲವು ವೇಳೆಯ ವರೆಗೆ ನದಿಯ ಶೋಭೆ ನೋಡುತ್ತ ಕುಳಿತುಕೊಂಡರು. ಆಗ ನದಿಯಲ್ಲಿ ಒಂದು ನೌಕೆಯು ಅವರು ಕುಳಿತ ದಂಡೆಯ ಕಡೆಗೆ ವೇಗವಾಗಿ ಬರುತ್ತಿರುವದು ಕಂಡಿತು. ಸ್ವಲ್ಪ ಹೊತ್ತಿನಲ್ಲಿಯೇ ಅದು ದಂಡೆಯನ್ನು ತಲುಪಿತು. ಕೂಡಲೆ ನೌಕೆಯೊಳಗಿನ ಹತ್ತು ಜನ ಶಸ್ತ್ರಧಾರಿಗಳು ಅರುಣಕುಮಾರಿ ವಿಜಯಲಾಲರಿದ್ದ ನಿಟ್ಟಿಗೆ ಹೊರಟರು.

"ಅರುಣಕುಮಾರಿ, ಇವರು ಸುಲಿಗೆಗಾರರೆಂಬಂತೆ ಕಾಣುವರು. ಶಸ್ತ್ರಗಳನ್ನು ತೆಗೆದುಕೊ."

"ಓಹೋ! ಶಸ್ತ್ರಗಳು ದೂರದಲ್ಲಿರುವವು."

ಅರುಣಕುಮಾರಿ ವಿಜಯಲಾಲರು ತಮ್ಮ ಶಸ್ತ್ರಾಸ್ತ್ರಗಳನ್ನು ದೂರದಲ್ಲಿಟ್ಟು, ಮಾತನಾಡುತ್ತ ಕುಳಿತಿದ್ದರು. ಅವರು ನಿಃಶಸ್ತ್ರರಾಗಿದ್ದದ್ದು ಸುಲಿಗೆಗಾರರಿಗೆ ಗೊತ್ತಾಯಿತು. ವಿಜಯಲಾಲನು ಶಸ್ತ್ರಾಸ್ತ್ರಗಳನ್ನು ತೆಗೆದುಕೊಂಡು ಬರಲಿಕ್ಕೆ ಅಲ್ಲಿಂದ ಎದ್ದನು. ಆಗ ಅರುಣಕುಮಾರಿಯು, "ವಿಜಯಲಾಲರೆ, ಬೇಗನೆ ಶಸ್ತ್ರಾಸ್ತ್ರಗಳನ್ನು ತೆಗೆದುಕೊಂಡು ಬನ್ನಿರಿ.

"ಅರುಣಕುಮಾರಿ ಬೆದರಬೇಡ. ಈಗ ತರುವೆನು. ಇಲ್ಲಿ ಕಾಣುತ್ತಿರುವ ಕಲ್ಲಿನ ಮೇಲೆ ಶಸ್ತ್ರಾಸ್ತ್ರಗಳಿರುವವು."

ವಿಜಯಲಾಲನ ಮಾತುಗಳು ಸುಲಿಗೆಗಾರರಿಗೆ ಕೇಳಿದವು. ಅವರು ಧಾವಿಸುತ್ತ ಅರುಣಕುಮಾರಿಯ ಬಳಿಗೆ ಬಂದು, "ಅರುಣಕುಮಾರಿಯು ನೀನೇ ಏನು?"

"ಹೌದು."

"ಈ ನದಿಯ ತೀರದಲ್ಲಿರುವ ಗುಡಿಸಲಲ್ಲಿರುವ ಅರುಣಕುಮಾರಿಯು ನೀನೇ?"

"ಹೌದು." ವಿಸ್ಮಯದಿಂದ ಅರುಣಕುಮಾರಿಯು ನುಡಿದಳು.

"ಹಾಗಾದರೆ ನೌಕೆಗೆ ನಡೆ."

ಅರುಣಕುಮಾರಿಯು ಮತ್ತಿಷ್ಟು ಅಂಜಿದಳು. ಅವಳು ಧೈರ್ಯವಂತಳಾಗಿದ್ದರೂ ನಿಃಶಸ್ತ್ರಳಾಗಿದ್ದಳು. ಒಬ್ಬಳೇ ಒಬ್ಬಳಾದ ಬಾಲಿಕೆಯು ಹತ್ತು ಜನ ಸುಲಿಗೆಗಾರ ಪ್ರತೀಕಾರ ಮಾಡುವ ಬಗೆ ಹೇಗೆ? ಆಗ ಅವಳು ತಾರಸ್ವರದಿಂದ:—"ಅಸಾಹಾಯ್ಯಸ್ಥಿತಿಯಲ್ಲಿದ್ದ ಈ ಅಬಲೆಯ ಮೇಲೆ ಬಲಾತ್ಕಾರ ನಡೆಯಿಸುವಿರಾ? ನನ್ನಲ್ಲಿ ಧನವಿಲ್ಲ; ಅಲಂಕಾರಗಳಿಲ್ಲ. ಸುಮ್ಮನೆ ಇಲ್ಲಿಂದ ತೆರಳಿರಿ."

"ನಮಗೆ ಧನವೂ ಬೇಕಾಗಿಲ್ಲ; ಅಲಂಕಾರಗಳೂ ಬೇಕಾಗಿಲ್ಲ." ಒಬ್ಬ ಸುಲಿಗೆಗಾರನು ನುಡಿದನು.

"ಮತ್ತೇನು ಬೇಕು?"

"ನೀನೇ ಬೇಕು."

"ವಿಜಯಲಾಲರೆ!" ಅರುಣಕುಮಾರಿಯು ಏರಿಕೆಯ ಸ್ವರದಿಂದ, "ಸುಲಿಗೆಗಾರರು ನನ್ನನ್ನು ಸೆಳೆದೊಯ್ಯುವರು; ಬೇಗನೆ ಬನ್ನಿರಿ!"

"ಅರುಣ! ಬೆದರದಿರು! ಇಗೋ ಬಂದೆನು!" ವಿಜಯಲಾಲನು ಹೀಗೆ ನುಡಿದವನೆ ಒಂದು ಬಾಣವನ್ನು ಸುಲಿಗೆಗಾರರಿಗೆ ಹೊಡೆದನು.

ಸುಲಿಗೆಗಾರರು ಕ್ಷಣಸಹ ವಿಲಂಬ ಮಾಡದೆ, ಅರುಣಕುಮಾರಿಯನ್ನು ಹೊತ್ತುಕೊಂಡು ವೇಗದಿಂದ ನೌಕೆಯ ಕಡೆಗೆ ಸಾಗಿದರು. ವಿಜಯಲಾಲನು ದ್ರುತಪದದಿಂದ ದಂಡೆಗೆ ಬರುವಷ್ಟರಲ್ಲಿ, ನೌಕೆಯು ದಂಡೆಯನ್ನು ಬಿಟ್ಟು ಮುಂದೆ ಹೋಗಿತ್ತು. ಆಗ ವಿಜಯಲಾಲನು ಆವೇಶದಿಂದಲೂ ಸಂತಾಪದಿಂದಲೂ ಮೈಮೇಲೆ ಪರಿವೆಯಿಲ್ಲದವನಾಗಿ ನೌಕೆಯೊಳಗಿನ ಸುಲಿಗೆಗಾರರಿಗೆ ಗುರಿಯಿಟ್ಟು ಬಾಣಗಳನ್ನೆಸೆಯತೊಡಗಿದನು. ಶರಾಘಾತದಿಂದ ಮೂರು ನಾಲ್ಕು ಜನ ಸುಲಿಗೆಗಾರರಿಗೆ ಬಲವಾದ ಗಾಯಗಳಾದವು. ಮುಂದೆ ಸ್ವಲ್ಪ ವೇಳೆಯಲ್ಲಿ ನೌಕೆಯು ದಂಡೆಯಿಂದ ದೂರದಲ್ಲಿ ತೆರಳಿತು. ನೌಕೆಗೂ ತನಗೂ ಅಂತರವು ಹೆಚ್ಚಾಗತೊಡಗಿದ್ದನ್ನು ನೋಡಿ ವಿಜಯಲಾಲನು ಗಾಬರಿಯಾದನು. ತನ್ನ ಪಂಚಪ್ರಾಣಳಂತಿದ್ದ ಅರುಣಾಳು ಸ್ಥಿರವಾಗಿ ತನ್ನನ್ನು ತೊಲಗಿ ಹೋಗುವಳೆಂದು ಬಹಳ ಕ್ಲೇಶಗೊಂಡನು. ಅವನು ನದಿಯಲ್ಲಿ ಈಸಿ ಹೋಗಿ ನೌಕೆಯನ್ನು ತಲಂಪಬೇಕೆಂಬ ಸಾಹಸದಲ್ಲಿ ತೊಡಗಿದನು.

ಅರುಣಳಿಗೆ ವಿಜಯಲಾಲನ ಸಾಹಸವು ತಿಳಿಯಿತು. ಅವಳು ದುಸ್ಸಾಹಸ ಮಾಡತೊಡಗಿದ್ದ ವಿಜಯಲಾಲನನ್ನು ಸಮಾಧಾನಪರ ಮಾತುಗಳಿಂದ ಕರ್ತವ್ಯನಿಷ್ಠನನ್ನಾಗ ಮಾಡಬೇಕೆಂದು, "ವಿಜಯಲಾಲರೆ, ಕಪೋತಾಕ್ಷೀ ನದಿಯು ತುಂಬಿ ಹರಿಯುತ್ತಿರುವದು. ನೀವು ನದಿಯಲ್ಲಿ ಬಿದ್ದರೆ ಬದುಕಲಾರಿರಿ. ಒಂದುವೇಳೆ ಬದುಕಿದರೂ, ನೌಕೆಯನ್ನು ನೀವು ತಲುಪಲಿಕ್ಕಿಲ್ಲ. ಒಂದು ಸಲ ನೌಕೆಯನ್ನು ತಲುಪಿದರೆ ನೀವು ಮಾಡುವದೇನು? ಸುಲಿಗೆಗಾರರ ಸಂಖ್ಯೆಯು ಬಹಳವಾಗಿರುವದರಿಂದ ನಿಮ್ಮ ಸಾಹಸಕ್ಕೆ ಯಶವು ದೊರೆಯಲಾರದು. ನಾನ ನನ್ನ ಶೀಲಮಾನಗಳನ್ನು ಹೇಗಾದರೂ ರಕ್ಷಿಸಿಕೊಳ್ಳಲಿಕ್ಕೆ ಸಮರ್ಥಳಿರುವೆನು. ನಿರರ್ಥಕವಾಗಿ ನೀವು ಜೀವವನ್ನು ಕಳೆದುಕೊಳ್ಳಬೇಡಿರಿ."

"ವಿಜಯಲಾಲ, ಈ ಅರುಣಕುಮಾರಿಯು ನಿನಗೇನಾಗಬೇಕು?" ಸುಲಿಗೆಗಾರನೊಬ್ಬನು ಕೂಗಿ ಕೇಳಿದನು.

"ಅರುಣನು ನನ್ನ ಪಂಚಪ್ರಾಣಳು!"

"ಇವಳು ನಿನಗೆ ದೊರೆಯಲಾರಳು. ನಾವು ಇವಳ ಶೀಲಮಾನಗಳನ್ನು ಸೂರೆಗೊಳ್ಳಲಿಕ್ಕೆ ಒಯ್ಯುತ್ತಿರುವದಿಲ್ಲ. ಒಬ್ಬ ಯೋಗಯೋಗೇಶ್ವರನ ಸಾನಿಧ್ಯದಲ್ಲಿರಿಸಿ, ಇವಳ ಜನ್ಮವನ್ನು ಸಾರ್ಥಕಗೊಳಿಸುವೆವು. ನದಿಯಪಾಲಾಗದೆ ಹಿಂದೆ

ತೆರಳು." ಎಂದು ಸುಲಿಗೆಗಾರನೊಬ್ಬನು ವಿಜಯುಲಾಲನಿಗೆ ಹೇಳಿದನು.

"ವಿಜಯಲಾಲರೆ, ನನ್ನ ವಿಯೋಗದಿಂದ ಅಮ್ಮನು ನಿಜವಾಗಿ ಮರಣ ಹೊಂದುವಳು. ಅಂತ್ಯಾವಸ್ಥೆಯಲ್ಲಿ ಅವಳ ಶುಶ್ರೂಷೆ ಮಾಡುವದಕ್ಕೆ ಯಾರೂ ಇಲ್ಲ. ನೀವು ದಯಮಾಡಿ ತಿರುಗಿ ಹೋಗಿರಿ. ದೇವರ ಅನುಗ್ರಹವಿದ್ದರೆ ಮತ್ತೆ ಕಾಣಬಹುದು."

ನೌಕೆಯು ದೂರಹೋಗಿತ್ತು. ಅರುಣಕುಮಾರಿಯ ಮಾತುಗಳು ವಿಜಯ ಲಾಲನಿಗೆ ಸ್ಪಷ್ಟವಾಗಿ ಕೇಳಲಿಲ್ಲ. ಸಿಟ್ಟಿನಿಂದ ಹುಚ್ಚನಂತಾಗಿದ್ದ ಅವನು ಕಪೋ ತಾಕ್ಷಿಯಲ್ಲಿ ದುಮುಕಿ ನೌಕೆಯ ಕಡೆಗೆ ಸಾಗಿದನು. ಅಷ್ಟರಲ್ಲಿ ನೌಕೆಯು ಪರತೀರ ವನ್ನು ತಲುಪಿತ್ತು. ಸುಲಿಗೆಗಾರರು ಅರುಣಕುಮಾರಿಯನ್ನು ತೆಗೆದುಕೊಂಡು, ವನವನ್ನು ಸೇರಿ ಕಾಣದಂತಾದರು!

---

# ಭವಿಷ್ಯ ವಾಣಿ



ಸುಲಿಗೆಗಾರರು ಅರುಣಕುಮಾರಿಯನ್ನು ಡೋಲಿಯಲ್ಲಿ ಹಾಕಿಕೊಂಡು ರಭಸದಿಂದ ಅರಣ್ಯದಲ್ಲಿ ಸಾಗಿದ್ದರು. ಆಗ ಅರುಣಕುಮಾರಿಯ ಮನಸ್ಸು ಅನೇಕ ಬಗೆಯ ವಿಚಾರಗಳಿಂದ ಉದ್ವಿಗ್ನತೆಯನ್ನು ಹೊಂದಿತ್ತು. ನಿರಾಧಾರಿಯೂ ನಿರ್ಧ ನಳೂ ಆದ ತನ್ನನ್ನು ಸುಲಿಗೆಗಾರರು ತೆಗೆದುಕೊಂಡು ಹೊರಟಿರುವ ಉದ್ದೇಶ ವೇನಿರಬಹುದು? ಶೀಲಕ್ಕೂ ಮಾನಕ್ಕೂ ಕಲಂಕವನ್ನು ಹಚ್ಚುವದಿಲ್ಲವೆಂದು ಅವ ರಾಡಿದ ಮಾತುಗಳು ಸತ್ಯವಿರಬಹುದೇನು? ಹಾಗಿದ್ದರೆ ಇವರು ನನ್ನನ್ನು ಸೆರೆ ಹಿಡಿದೊಯ್ಯುವ ಕಾರಣವೇನು? ಇವರು ಯಾವ ಉದ್ದೇಶದಿಂದ ಕಪೋತಾಕ್ಷಿಗೆ ಬಂದಿರಬಹುದು? ದುಷ್ಟರಾದ ಇವರು ನನ್ನ ಪಾವಿತ್ರ್ಯವನ್ನು ನಾಶಗೊಳಿಸಲೆತ್ನಿ ಸಿದರೆ ಹೇಗೆ ಮಾಡಬೇಕು? ಒಬ್ಬ ಯೋಗಯೋಗೇಶ್ವರನ ಸಾನ್ನಿಧ್ಯದಲ್ಲಿ ಇರಿಸುವ ದಕ್ಕಾಗಿ ಒಯ್ಯುವೆನೆಂದು ಇವರು ಹೇಳಿದ ಮಾತುಗಳು ನಿಜವಿರಬಹುದೇನು? ನಿಜ ವಾದ ಯೋಗಿಯಾದವನು ತರುಣಸ್ತ್ರೀಯರನ್ನು ತನ್ನ ಸನ್ನಿಧಾನದಲ್ಲಿರಿಸಿಕೊಳ್ಳ ಲಿಕ್ಕೆ ಹೇಗೆ ಒಪ್ಪುವನು? ಮೊದಲಾದ ವಿಚಾರಗಳು ಅವಳ ಮನಸ್ಸಿನಲ್ಲಿ ಹುಟ್ಟಿದ್ದವು. ಎಷ್ಟು ಬಗೆಯಿಂದ ಯೋಚಿಸಿದರೂ ಅವಳ ಮನಸ್ಸಿನೊಳಗಿನ ಸಂದೇಹವೂ ಭಯವೂ ನಿರಸನ ಹೊಂದಲಿಲ್ಲ. ಕೆಚ್ಚೆದೆಯುವಳಾಗಿದ್ದರೂ ಆ ಕ್ಷಾತ್ರಬಾಲೆಯ ಎದೆಯು 'ಧಕ್-ಧಕ್' ಹಾರತೊಡಗಿತ್ತು. ನೇತ್ರಗಳು ಸಜಲವಾಗಿದ್ದವು. ಮುಪ್ಪಿನವಳಾದ ಜಾಹ್ನವಿಯ ನೆನಪಾದರಂತು ಅವಳ ಹೃದಯಕ್ಕೆ ಬರೆಕೊಟ್ಟಂತಾಗುತ್ತಿತ್ತು.

ಸ್ವಲ್ಪ ದೂರ ಹೋದ ಮೇಲೆ ಒಂದು ಹಳ್ಳವು ಹತ್ತಿತು. ಉಪಹಾರವನ್ನು ತೀರಿಸಿಕೊಂಡು ಮುಂದೆ ಹೋಗಬೇಕೆಂದು ಸುಲಿಗೆಗಾರರು ನಿಶ್ಚಯಿಸಿಕೊಂಡರು.

ಬೋವಿಗಳು ಡೋಲಿಯನ್ನು ಕೆಳಗಿಳಿಸಿದರು. ಆಗ ಸುಲಿಗೆಗಾರರ ಮುಖ್ಯನು ಅದರ ಬಳಿಗೆ ಬಂದು, ಉಪಹಾರವನ್ನು ತೆಗೆದುಕೊಳ್ಳುವದಕ್ಕೆ ಅರುಣಕುಮಾರಿಗೆ ಸೂಚಿಸಿದನು. ಇಡೀದಿವಸ ಅನ್ನವಿಲ್ಲದ್ದರಿಂದ ಅರುಣಕುಮಾರಿಯು ಬಹಳೇ ಹಸಿದಿದ್ದಳು. ಆದರೂ ಭಯಗ್ರಸ್ತಳಾದ ಅವಳು ಉಪಹಾರ ತೆಗೆದುಕೊಳ್ಳುವ ಮನಸ್ಸು ಮಾಡಲಿಲ್ಲ. ಆಗ ಸುಲಿಗೆಗಾರರ ಮುಖ್ಯನು ಕರುಣೆಯಿಂದ, "ಅರುಣಕುಮಾರಿ, ನೀನು ಅಂಜಬೇಡ. ನಾವುನಿನ್ನ ಕೂದಲಿಗೆ ಸಹ ದಕ್ಕೆ ಹಚ್ಚುವದಿಲ್ಲ. ಇಡೀ ದಿವಸ ಅನ್ನ ನೀರುಗಳಿಲ್ಲದ್ದರಿಂದ ನೀನು ಬಹಳೇ ಬಳಲಿರುವೆ. ಹಣ್ಣು ಹಂಪಲಗಳನ್ನು ತಿಂದು ಸ್ವಲ್ಪ ನೀರುಕುಡಿದೆಯೆಂದರೆ ಎಷ್ಟೋ ಸಮಾಧಾನವಾಗುವದು."

"ನನ್ನನ್ನು ಎಲ್ಲಿಗೆ ಏತಕ್ಕೆ ತೆಗೆದುಕೊಂಡು ಹೋಗುತ್ತಿರುವಿರೆಂಬದನ್ನು ಹೇಳಿದಹೊರತು ಬಾಯಿಯಲ್ಲಿ ನೀರು ಹಾಕುವದಿಲ್ಲ." ಅರುಣಕುಮಾರಿಯು ಸ್ಪಷ್ಟವಾಗಿ ಹೇಳಿದಳು.

"ಅರುಣಕುಮಾರಿ, ನಾವು ನಿನ್ನನ್ನು ಗುಪ್ತಪುರಿಗೆ ಕರೆದೊಯ್ಯುವೆವು. ಸ್ವಾಮಿ ಅಜಿತಾನಂದರು ನಿನ್ನನ್ನು ಕರೆತರುವದಕ್ಕಾಗಿ ನಮಗೆ ಆಜ್ಞೆ ಮಾಡಿರುವರು. ನಿನ್ನಿಂದ ಸೇವೆ ಮಾಡಿಸಿಕೊಳ್ಳಬೇಕೆಂದು ಅವರ ಇಚ್ಛೆಯುಂಟು. ಸ್ವಾಮಿ ಮಹಾರಾಜರು ಮಹಾ ಮಹಿಮರು; ದಿವ್ಯ ವಿಭೂತಿಗಳು. ಅವರ ಸಾನ್ನಿಧ್ಯದಲ್ಲಿ ನಿನಗೆ ಯಾವ ಬಗೆಯ ಸಂಕಟವೂ ಒದಗಲಾರದು."

"ಗುಪ್ತಪುರಿಯೆಂಬದು ಒಂದು ಗ್ರಾಮವೇನು?"

"ಗ್ರಾಮವಲ್ಲ; ಕಳ್ಳರ ಬೀಡು."

"ಅಲ್ಲಿ ಸ್ವಾಮಿಮಹಾರಾಜರು ವಾಸಮಾಡಿದ ಕಾರಣವೇನು?"

"ಗುಪ್ತಪುರಿಯನ್ನು ಅವರು ತಮ್ಮ ಬೀಡನ್ನಾಗಿ ಮಾಡಿಕೊಂಡಿರುವರು. ಸುಲಿಗೆಗಾರರಾದ ನಾವು ಅವರ ಪರಮ ಶಿಷ್ಯರು."

"ಸುಲಿಗೆಗಾರರ ಗುರುಗಳಾದ ಅವರು ಕೊಲೆಗಡಕರಾಗಿರಬಹುದಲ್ಲವೆ?"

"ಶಾಂತಂಪಾಪಂ! ಅರುಣಕುಮಾರಿ, ಹಾಗೆನ್ನಬೇಡ. ಅವರು ನಿಜವಾಗಿಯೂ ಸತ್ಪುರುಷರಿರುವರು. ಅವರನ್ನು ನಿಂದಿಸಿದರೆ ಪಾಪ ಬಂದೀತು."

"ಕೆಲವು ದಿವಸಗಳ ಮೇಲೆ ನನ್ನ ಬಿಡುಗಡೆಯಾಗಬಹುದೆ?"

"ಅದನ್ನು ನಾನು ಹೇಳಲಾರೆನು."

"ಅಂದರೆ ನೀವು ನನ್ನನ್ನು ಕೊಂದುಹಾಕುವಿರೇನು?"

"ಛೇ! ಇದೇನು ಮಾತಾಡುವೆ? ನಾವು ನಿನಗೆ ತಿಲಾಂಶವಾದರೂ ದುಃಖ ಕೊಡುವದಿಲ್ಲ. ನೀನು ಅಲ್ಲಿಗೆ ಹೋದ ಮೇಲೆ ತಿರುಗಿ ಮನೆಯನ್ನೇ ನೆನಿಸುವದಿಲ್ಲ. ಮಹಾತ್ಮರ ಸಾನ್ನಿಧ್ಯವೇ ಅಂತಹದಿರುವದು."

"ಮಹಾತ್ಮರ ಸಾನ್ನಿಧ್ಯದಲ್ಲಿ ವಾಸವಾಗಿದ್ದ ನೀವು ಸುಲಿಗೆಯುಂತಹ ನೀಚವೃತ್ತಿಯನ್ನವಲಂಬಿಸುವದೇಕೆ? ಸತ್ಪುರುಷರ ಸಮಾಗಮದಿಂದ ಸದ್ಗುಣಗಳು ಪ್ರಾದುರ್ಭ

ವಿಸುವವು. ನೀವು ಈ ನಿಯಮಕ್ಕೆ ಅಪವಾದವಾಗಿರುವಿರಿ. ನಿಮ್ಮ ಸ್ವಾಮಿ ಮಹಾರಾಜರು ಸುಲಿಗೆಗಾರರಾದ ನಿಮಗೆ ನಿಮ್ಮ ವ್ಯವಸಾಯದಲ್ಲಿ ಮಾರ್ಗದರ್ಶಕರಾಗಿರಬಹುದೆಂದು ಊಹಿಸುವೆನು.''

''ಅರುಣಕುಮಾರಿ!'' ಸುಲಿಗೆಗಾರರ ಮುಖ್ಯನು ಗಾಂಭೀರ್ಯದಿಂದ, ''ನಮ್ಮ ವ್ಯವಸಾಯವು ಸ್ವಾಮಿ ಮಹಾರಾಜರ ನೇತೃತ್ವದಲ್ಲಿ! ವ್ಯವಸಾಯ ದೃಷ್ಟಿಯಿಂದ ನಮಗೂ ಅವರಿಗೂ ಸಂಬಂಧವೇ ಇಲ್ಲ. ಅವರ ಸಹವಾಸದ ಲಾಭವಾದಾನಿಗಿಂದ ನಮ್ಮ ವ್ಯವಸಾಯಕ್ಕೆ ಸೌಮ್ಯಸ್ವರೂಪವು ಅಕಲ್ಪಿತವಾಗಿ ಪ್ರಾಪ್ತವಾಗಿದೆ. ಮೊದಲು ನಮ್ಮಿಂದ ಎಂತಹ ಆಸುರೀ ಕೃತಿಗಳು ಘಟಿಸಿವವೆಂಬದನ್ನು ಹೇಳುವದು ಸಹ ಪಾಪವೆನಿಸುವದು. ನೀನು ಆ ಮಹಾಮಹಿಮರಿಗೆ ಹೆಸರಿಟ್ಟು ಪಾತಕಕ್ಕೀಡಾಗ ಬೇಡ. ಅವರ ದರ್ಶನವಾದ ಮೇಲೆ ನನ್ನ ಮಾತಿನ ಸತ್ಯಸ್ವರೂಪವು ಕಾಣುವದು. ಗುಪ್ತಪುರಿಗೆ ಹೋದ ಮೇಲೆ ನೀನು ನಿನ್ನ ಪರ್ಣ ಕುಟೀರವನ್ನೂ ಅಮ್ಮನನ್ನೂ ಬಾಲಮಿತ್ರನಾದ ವಿಜಯಲಾಲನನ್ನೂ ಪೂರಾ ಮರೆತು ಬಿಡುವೆ.''

''ಪರ್ಣಕುಟೀರವನ್ನು ಮರೆಯಬಹುದು. ನಿರಾಧಾರಿಯಾಗಿ ತೊಳಲುತ್ತಿರುವ ಅಮ್ಮನನ್ನೂ, ನನ್ನ ಪ್ರಾಣವನ್ನೂ, ಮಾನವನ್ನೂ, ಪಾವಿತ್ರ್ಯವನ್ನೂ, ಉಳಿಸುವದಕ್ಕಾಗಿ ತಮ್ಮ ಪ್ರಾಣವನ್ನು ಗಂಡಾಂತರದಲ್ಲಿ ಕೆಡಹಿದ ವಿಜಯಲಾಲರನ್ನೂ ಮರೆಯುವದು ಈ ಜನ್ಮದಲ್ಲಿ ಸಾಧ್ಯವಿಲ್ಲ.''

''ಅಸಾಧ್ಯವಾದ ಕಾರ್ಯಗಳು ಪ್ರಾಪ್ತ ಪರಿಸ್ಥಿತಿಯಿಂದ ಸುಲಭವಾಗಿ ಸಾಧ್ಯವಾಗುವವು. ಈಗ ನೀನು ಏನು ಮಾಡುವಂತಿರುವೆ?''

ಸುಲಿಗೆಗಾರರ ಮುಖ್ಯನು ಹೀಗೆ ನುಡಿದ ಕೂಡಲೆ, ಅರುಣಕುಮಾರಿಯು ಸಂತಪ್ತಳಾದಳು. ಆಗ ಅವಳು ಕಠೋರಧ್ವನಿಂದ, ''ಅಸಾಹಾಯ್ಯ ಸ್ಥಿತಿಯಲ್ಲಿದ್ದ ಅಬಲೆಯನ್ನು ಸೆಳೆದೊಯ್ಯುವ ನಿಮ್ಮ ಪೌರುಷಕ್ಕೆ ಬೆಂಕೀಹಚ್ಚಲಿ!''

''ನೀನು ಅಸಾಹಾಯ್ಯಳು; ನಾನು ಪರಾಧೀನನು. ನಮ್ಮ ಒಡೆಯನೊಬ್ಬನು ಗುಪ್ತಪುರಿಯಲ್ಲಿರುವನು. ಸ್ವಾಮೀ ಅಜಿತಾನಂದರ ಆಜ್ಞೆಯ ಮೇರೆಗೆ ಅವನು ನಿನ್ನನ್ನು ತರುವದಕ್ಕಾಗಿ ಹೇಳಿದ್ದರಿಂದ ಇಷ್ಟು ಸಾಹಸ ಮಾಡಿದೆನು. ವ್ಯರ್ಥವಾದ ಸಂತಾಪ ಪರಿತಾಪಗಳಿಂದ ಕೊರಗಬೇಡ.''

ಅರುಣಕುಮಾರಿಯು ನಿರರ್ಥಕವಾಗಿ ಮಾತು ಬೆಳೆಯಿಸಲಾರದೆ ಸುಮ್ಮನಾದಳು. ಸುಲಿಗೆಗಾರರ ಮುಖ್ಯನು ಅರುಣಕುಮಾರಿಯನ್ನು ತೆಗೆದುಕೊಂಡು ತನ್ನ ಅನುಚರರೊಡನೆ ಮಾರ್ಗಕ್ರಮಣ ಮಾಡತೊಡಗಿದನು. ಸಂಧ್ಯಾಸಮಯವಾಗುತ್ತಲೆ ಎಲ್ಲರೂ ಗುಪ್ತಪುರಿಯನ್ನು ಸೇರಿದರು.

ಗುಪ್ತಪುರಿಗೆ ಹೋದಕೂಡಲೆ ಸುಲಿಗೆಗಾರರ ಮುಖ್ಯನು ತಂಡದ ನಾಯಕನಾದ ವನರಾಜನ ಬಳಿಗೆ ಹೋಗಿ, ಅರುಣಕುಮಾರಿಯನ್ನು ಅವನ ಸ್ವಾಧೀನಪಡಿಸಿ ಘಟಿಸಿದ ಎಲ್ಲ ವೃತ್ತಾಂತವನ್ನು ತಿಳಿಸಿದನು. ಅನಂತರದಲ್ಲಿ ವನರಾಜನು

ಸ್ವಾಮಿಮಹಾರಾಜರ ಬಳಿಗೆ ಹೋಗಿ ಅರುಣಕುಮಾರಿಯನ್ನು ತಂದ ಸಂಗತಿಯನ್ನು ಹೇಳಿದನು. ಈ ಸುದ್ದಿಯನ್ನು ಕೇಳಿ ವೀರಪ್ರಾಣಿಕನಿಗೆ ಪರಮಾನಂದವಾಯಿತು. ಅವನು ತನ್ನ ಮಗಳ ಭೇಟಿಯು ಸಲುವಾಗಿ ಆತುರನಾಗಿದ್ದನು. ಅಜಿತಾನಂದರು ಅವನ ಮನೋಗತವನ್ನು ತಿಳಿದು, ಸುಲಿಗೆಗಾರರ ನಾಯಕನನ್ನು ಕುರಿತು, "ವನ ರಾಜ, ಈಗ ಅರುಣಕುಮಾರಿಯು ಎಲ್ಲಿರುವಳು?"

"ಸ್ವಾಮಿ ಮಹಾರಾಜರೆ, ಅವಳು ಈಗ ನನ್ನ ಅಂತಃಪುರದಲ್ಲಿರುವಳು."

"ಅವಳನ್ನು ಈಗಲೆ ಇಲ್ಲಿಗೆ ಕರೆದುಕೊಂಡು ಬಾ."

ವನರಾಜನು ಅಜಿತಾನಂದರ ಆಜ್ಞೆಯನ್ನು ಶಿರಸಾವಹಿಸಿ ಅಲ್ಲಿಂದ ತನ್ನ ಅಂತಃಪುರಕ್ಕೆ ಹೋದನು. ಆಗ ಅರುಣಕುಮಾರಿಯು ವನರಾಜನ ಮೂರು ಜನ ಸ್ತ್ರೀಯರಿಗೆ ತನ್ನ ಕರ್ಮಕಥೆಯನ್ನು ಹೇಳುತ್ತ ಕುಳಿತಿದ್ದಳು. ಅಷ್ಟರಲ್ಲಿ ಅಲ್ಲಿಗೆ ವನರಾಜನು ಬಂದದ್ದರಿಂದ ಅವಳು ಸುಮ್ಮನಾದಳು. ವನರಾಜನು ದುರ್ವರ್ತನಿಯೂ ಕ್ರೂರನೂ ಇರುವನೆಂಬದನ್ನು ಅರುಣಕುಮಾರಿಯು ಅವನ ಸ್ತ್ರೀಯರಿಂದ ಕೇಳಿದ್ದಳು. ಆ ಸ್ತ್ರೀಯರ ಮೇಲೆ ಬಂದ ಗಂಡಾಂತರವು ತನ್ನ ಮೇಲಾದರೂ ಬರುವದೆಂದು ಅವಳ ಗ್ರಹಿಕೆಯಾಯಿತು. ಆಗ ಅವಳು ತನ್ನ ಶೀಲಮಾನಗಳ ರಕ್ಷಣೆಯು ಹೇಗಾದೀತೆಂದು ಚಿಂತಿಸತೊಡಗಿದಳು. ಅಜಿತಾನಂದ ಸ್ವಾಮಿಗಳ ಮೊರೆ ಹೊಕ್ಕು ಸಂಕಟದಿಂದ ಪಾರಾಗಬೇಕೆಂದೂ, ಅದು ಸಾಧ್ಯವಾಗದಿದ್ದರೆ ಆತ್ಮಹತ್ಯ ಮಾಡಿಕೊಳ್ಳಬೇಕೆಂದೂ ಅವಳು ನಿರ್ಧರಿಸಿಕೊಂಡಳು.

"ಅರುಣಕುಮಾರಿ," ಉದ್ವಿಗ್ನತೆಯನ್ನು ಹೊಂದಿದ ಅರುಣಳನ್ನು ಸಂತೈಸುವದಕ್ಕಾಗಿ ವನರಾಜನು "ನಿನಗೆ ಇಲ್ಲಿ ಯಾವ ವಿಧದ ಭಯವೂ ಇಲ್ಲ. ಸ್ವಾಮಿ ಮಹಾರಾಜರ ಹಾಗು ಜಗನ್ಮಾತೆಯಾದ ಜಗದಂಬೆಯ ಸೇವೆ ಮಾಡುತ್ತ ಆನಂದದಿಂದ ಕಾಲಕಳೆ. ಅಜಿತಾನಂದರು ನಿನ್ನಲ್ಲಿ ಕೃಪೆಯುಳ್ಳವರಾಗಿರುವರು ನಡೆ, ನಿನಗೆ ಅವರ ದರ್ಶನ ಮಾಡಿಸುವೆನು."

ಅರುಣಕುಮಾರಿಗೆ ಇದ್ದದರಲ್ಲಿಯೇ ಆನಂದವಾಯಿತು. ಅವಳು ವನರಾಜನ ಹಿಂದೆ ಸ್ವಾಮಿಮಹಾರಾಜರ ಬಳಿಗೆ ಬಂದಳು.

ಅರುಣಕುಮಾರಿಯು ಭುವನೇಶ್ವರಿಯ ದೇವಾಲಯವನ್ನು ಪ್ರವೇಶಿಸಿದಳು ಅತ್ಯಂತ ಭವ್ಯವಾದ ದೇವಿಯ ಮೂರ್ತಿಯನ್ನು ನೋಡಿ ಅವಳ ಹೃದಯದಲ್ಲಿ ಭಕ್ತಿಯು ಉತ್ಪನ್ನವಾಯಿತು. ದೇವಿಯ ಸಾನ್ನಿಧ್ಯದಲ್ಲಿ ದುರ್ಗಾಸಪ್ತಶತಿಯನ್ನು ಅನ್ನುತ್ತ ಕುಳಿತ ತೇಜೋನಿಧಿಗಳಾದ ಸ್ವಾಮೀ ಅಜಿತಾನಂದರನ್ನು ನೋಡಿದೊಡನೆಯೆ, ಅರುಣಕುಮಾರಿಯ ಶಿರವು ಸ್ವಾಭಾವಿಕವಾಗಿ ಬಾಗಿತು. ಅವಳು ಸ್ವಾಮಿ ಮಹಾರಾಜರ ಚರಣ ರಜವನ್ನು ಮಸ್ತಕದಲ್ಲಿರಿಸಿಕೊಂಡು "ಭಗವಾನ್! ತ್ರಾಹಿಮಾಮ್! ತ್ರಾಹಿಮಾಮ್!!" ಎಂದು ಭಕ್ತಿ ಪುರಸ್ಸರವಾಗಿ ನುಡಿದಳು.

"ಕಲ್ಯಾಣ! ಕಲ್ಯಾಣ!!" ಸ್ವಾಮಿಮಹಾರಾಜರು ಅರುಣಕುಮಾರಿಗೆ ಆಶೀ

ರ್ವದಿಸಿ, ಅವಳ ತಲೆಯ ಮೇಲೆ ವರದಹಸ್ತವನ್ನಿಟ್ಟು:—“ಅರುಣಕುಮಾರಿ, ಭಗವತೀ ಭುವನೇಶ್ವರಿಗೆ ಅಭಿವಂದಿಸು.”

ಅರುಣಕುಮಾರಿಯು ಮಹಾಕಾಳಿಗೆ ನಮಸ್ಕಾರಮಾಡಿದಳು. ಅಜಿತಾನಂದರು ದೇವಿಯ ಮೇಲಿನ ಒಂದು ಪುಷ್ಪವನ್ನು ಅವಳ ಕೈಯಲ್ಲಿ ಕೊಟ್ಟರು. ಅನಂತರದಲ್ಲಿ ಅವರು ಅಲ್ಲಿಯೇ ಕುಳಿತಿದ್ದ ಮಾಣಿಕನಿಗೆ ನಮಸ್ಕಾರ ಮಾಡುವದಕ್ಕಾಗಿ ಅರುಣಕುಮಾರಿಗೆ ತಿಳಿಸಿದರು. ಮಾಣಿಕನಿಗೆ ನಮಸ್ಕಾರಮಾಡಿದ ಮೇಲೆ ಅವಳನ್ನು ಸ್ವಾಮಿಯವರು ತಮ್ಮ ಬಳಿಯಲ್ಲಿ ಕುಳ್ಳಿರಿಸಿಕೊಂಡು:—“ಅರುಣಕುಮಾರಿ, ಇಂದಿನ ಆಕಸ್ಮಿಕ ಘಟನೆಯಿಂದ ನೀನು ಅತಿಯಾಗಿ ಭಯಗೊಂಡಿರಬಹುದು. ನೀನು ಕೋಮಲ ಹೃದಯದ ಬಾಲಿಕೆಯಾಗಿದ್ದುದರಿಂದ ಅಂಜುವದು ಸ್ವಾಭಾವಿಕವು. ನಿನಗೆ ಅಹಿತ ಮಾಡಬೇಕೆಂಬ ಉದ್ದೇಶದಿಂದ ನಾನು ನಿನ್ನನ್ನು ಇಲ್ಲಿಗೆ ಕರೆಯಿಸಿಲ್ಲ. ನಿನ್ನ ಅಭ್ಯುದಯವಾಗಬೇಕೆಂದೂ, ನಿನಗೆ ಸೌಖ್ಯವು ದೊರೆಯಬೇಕೆಂದೂ ನನ್ನ ಇಚ್ಛೆಯುಂಟು. ಅಪರಿಚಿತಳಾದ ನಿನ್ನ ಹಿತಕ್ಕಾಗಿ ನಾನು ಹೆಣಗುತ್ತಿರುವ ಕಾರಣವು ನಿನಗೆ ಮುಂದೆ ತಿಳಿಯುವದು. ನೀನು ನಿನ್ನ ಮನೆಯಲ್ಲಿಯೇ ಇರುವೆಯೆಂದು ತಿಳಿದುಕೊ. ನಿನ್ನ ತಂದೆ-ತಾಯಿಗಳ ಬಳಿಯಲ್ಲಿ ಹೇಗೆ ಬರುವೆಯೋ ಅದರಂತೆ ಇಲ್ಲಿ ವಾಸವಾಗಿರು. ಇಲ್ಲಿ ನೀನು ತಿಲಾಂಶವಾದರೂ ಅಂಜುವ ಕಾರಣವಿಲ್ಲ.”

ಅಜಿತಾನಂದರ ಮಾತನ್ನು ಕೇಳಿ ಅರುಣಕುಮಾರಿಯ ಭಯಗ್ರಸ್ತಹೃದಯವು ನಿರ್ಭಯಗೊಂಡಿತು. ಜಾಹ್ನವಿಯ ಹಾಗು ವಿಜಯಲಾಲನ ವಿಷಯವಾಗಿ ಅವಳ ಮನಸ್ಸು ಕ್ಲೇಶಗೊಂಡಿತ್ತು. ಆಗ ಅವಳು:—“ನನ್ನ ಅಮ್ಮನು ಮುಪ್ಪಿನವಳಿರುವಳು. ಅವಳೊಬ್ಬಳನ್ನೇ ಅಡವೀ ಪಾಲು ಮಾಡಿ ನಾನು ಹೇಗೆ ಕಾಲ ಕಳೆಯಲಿ? ಬಾಲಸ್ನೇಹಿಗಳೂ ಜೀವಕ್ಕೆ ಜೀವ ಕೊಡುವವರೂ ಆದ ವಿಜಯಲಾಲರು ನನ್ನ ರಕ್ಷಣೆಮಾಡಬೇಕೆಂಬ ಉದ್ದೇಶದಿಂದ ಕಪೋತಾಕ್ಷಿಯಲ್ಲಿ ಬಿದ್ದರು. ಅವರ ಗತಿಯು ಏನಾಯಿತೋ ಏನೋ!”

“ಕುಮಾರಿ, ನಿನ್ನ ಅಮ್ಮನು ಒಂದೆರಡು ದಿನಗಳಲ್ಲಿ ತನ್ನ ಜೀವನ ಯಾತ್ರೆ ಮುಗಿಸುವಳು. ಅನಾಥರನ್ನು ಕಾಯುವದಕ್ಕೆ ಪರಮಾತ್ಮನು ಸಮರ್ಥನಿರುವನು. ಅವಳ ವಿಷಯವಾಗಿ ನೀನು ಚಿಂತಿಸಬೇಡ. ವಿಜಯಲಾಲನು ಕಪೋತಾಕ್ಷೀ ನದಿಯನ್ನು ದಾಟಿ ನಿನ್ನನ್ನು ಹುಡುಕುವದಕ್ಕಾಗಿ ಹೊರಟಿರುವನು. ಸದ್ಯಕ್ಕೆ ಅವನು ನಿನ್ನನ್ನು ಕಾಣಲಾರನು. ಕಾಲಾಂತರದ ಮೇಲಾದರೂ ಪರಸ್ಪರರು ದರ್ಶನಲಾಭ ಹೊಂದುವಿರಿ.”

ತನ್ನ ಅಮ್ಮನು ಒಂದೆರಡು ದಿನಗಳಲ್ಲಿ ಇಹಲೋಕ ಯಾತ್ರೆಯನ್ನು ಮುಗಿಸುವಳೆಂದು ತ್ರಿಕಾಲಜ್ಞಾನಿಗಳಾದ ಅಜಿತಾನಂದರು ಹೇಳಿದ ಮಾತಿನಿಂದ ಅರುಣಕುಮಾರಿಗೆ ವ್ಯಥೆಯಾಯಿತು. ಚಿಕ್ಕಂದಿನಿಂದ ಸಾಕಿ ಸಲಹಿದ ಹೆತ್ತಮ್ಮನಿಗಿಂತಲೂ

ಮಿಗಿಲಾದ ತನ್ನ ಮಾತಾಮಹಿಗೆ ಅಂತ್ಯಕಾಲದಲ್ಲಿ ತನ್ನಿಂದ ಪ್ರಯೋಜನವಾಗಲಿಲ್ಲ ವೆಂದು ಅವಳು ಮರಮರನೆ ಮರುಗಿದಳು. ಅನಂತರದಲ್ಲಿ ದೀರ್ಘವಾದ ನಿಟ್ಟುಸಿರು ಬಿಟ್ಟು, ಮುಖವನ್ನು ಕೆಳಗೆ ಮಾಡಿಕೊಂಡು ಸ್ತಬ್ಧಳಾಗಿ ಕುಳಿತಳು. ಅಜಿತಾ ನಂದರು ಅವಳ ಮುಖವನ್ನು ನೋಡುತ್ತ ಕುಳಿತಿದ್ದರು.

ಸ್ವಾಮಿಮಹಾರಾಜರ ಮಾತುಗಳನ್ನು ಕೇಳಿ ವೀರಮಾಣಿಕನಿಗೆ ಮಹದಾ ನಂದವಾಯಿತು. ಆಗ ಅವನು ಸಂಭ್ರಮದಿಂದ:—"ಭಗವನ್, ಅರುಣಕುಮಾ ರಿಯ ದೈವದಲ್ಲಿ ಯಾವ ವಿಧದ ಭಾಗ್ಯವಿರುವದು?"

"ಸುಲಿಗೆಗಾರರ ಕೈಯಲ್ಲಿ ಸಿಲುಕಿ ವನವಾಸಿಯಾಗಬೇಕೆಂದು ನನ್ನ ದೈವದಲ್ಲಿ ಬರೆದಿರುವದಲ್ಲವೆ ಸ್ವಾಮಿಮಹಾರಾಜರೇ?" ಅರುಣಕುಮಾರಿಯು ನಗುತ್ತ ಅಜಿತಾ ನಂದರನ್ನು ಕೇಳಿದಳು.

"ಛೆ! ಬಾಲಿಕೆ, ಇದೇನು ಮಾತಾಡುವೆ? ನೀನು ನಿಜವಾಗಿಯೂ ವೈಭವ ಸಂಪನ್ನಳಾಗುವೆ ನಿನ್ನ ಹಸ್ತದಲ್ಲಿ ರಾಜಚಿಹ್ನದ ರೇಷೆಗಳುಂಟು. ನೀನು ಮಹಾರಾಜ್ಞಿಯಾಗುವೆ. ನಿನ್ನಿಂದ ಸ್ವದೇಶಹಿತದ ಕಾರ್ಯಗಳು ಮಾಡಲ್ಪಡುವವು. ಸದಭಿಮಾನಿಯೂ, ಸದ್ಗುಣಿಯೂ, ವೀರಾಂಗನೆಯೂ' ಆದರ್ಶಕ್ಷಾತ್ರಲಲನೆಯೂ ಆದ ನೀನು ರಾಷ್ಟ್ರದ ಗೌರವವನ್ನೂ ಸ್ವಾತಂತ್ರ್ಯವನ್ನೂ ಕಾಯುವದಕ್ಕಾಗಿ ಬಹು ಪರಿಯಾಗಿ ಹೆಣಗುವೆ. ಯಶಾಪಯಶಗಳ ಸುದ್ದಿಯನ್ನು ಈಗ ನಾನು ಹೇಳಲಿಚ್ಛಿ ಸುವದಿಲ್ಲ. ಒಟ್ಟಿನ ಮೇಲೆ ನಿನ್ನ ಹೆಸರು ಇತಿಹಾಸದಲ್ಲಿ ಚಿರಂತನವಾಗಿ ಉಳಿ ಯುವದೆಂದು ನಿಶ್ಚಯವಾಗಿ ಹೇಳುವೆನು. ಈ ಅಜಿತಾನಂದನ ಮಾತಿನಲ್ಲಿ ಮಿಥ್ಯಾಂಶವಿರುವದೆಂದು ತಿಳಿದುಕೊಳ್ಳ ಬೇಡ."

ಅಜಿತಾನಂದರ ಭವಿಷ್ಯವಾಣಿಯನ್ನು ಕೇಳಿ ಕೃಷ್ಣಲಾಲನಿಗೆ ಹಿಡಿಸಲಾರ ದಷ್ಟು ಸಂತೋಷವಾಯಿತು ಅವನು ಪ್ರೇಮಭರದಿಂದ ತನ್ನ ಕುಮಾರಿಯನ್ನಪ್ಪಿ ಕೊಂಡು ಮುದ್ದಾಡಬೇಕೆಂದು ಮೇಲಕ್ಕೆದ್ದನು. ಅವನ ಒಲವು ಅಜಿತಾನಂದರಿಗೆ ತಿಳಿದದ್ದರಿಂದ ಅವರು ದರ್ಪೋಕ್ತಿಯಿಂದ—"ವೀರಮಾಣಿಕ, ನೀನು ಬಹಳೀ ಆತುರಬುದ್ಧಿಯವನು. ಅರುಣಕುಮಾರಿಯ ರಹಸ್ಯವು ಸದ್ಯಕ್ಕೆ ಗುಪ್ತವಾಗಿರ ಬೇಕಾಗಿದೆ. ವನರಾಜನು ಮಹಾ ಕ್ರೂರನಿರುವನು. ಅವನಿಗೆ ವಸ್ತುಸ್ಥಿತಿಯನ್ನು ತಿಳಿಯಗೊಡಬಾರದು. ಇನ್ನು ಸ್ವಲ್ಪ ದಿನಗಳಲ್ಲಿ ಯೋಗ್ಯಕಾಲವು ಬರಬಹುದು. ವನರಾಜನ ಮರಣಾನಂತರದಲ್ಲಿ ಬೇಕಾದ ಹಾಗೆ ವರ್ತಿಸಲಿಕ್ಕೆ ನೀನು ಸ್ವತಂತ್ರನಾ ಗುವೆ. ಅಲ್ಲಿಯವರೆಗೆ ಆತ್ಮಸಂಯಮನ ಮಾಡಲಿಕ್ಕೆ ಬೇಕು."

ವೀರಮಾಣಿಕನು ಮನೋನಿಗ್ರಹ ಮಾಡಿಕೊಂಡು ಸ್ವಸ್ಥವಾಗಿ ಕುಳಿತನು. ಅರುಣಕುಮಾರಿಯು ಭವಿಷ್ಯಸೂಚನೆಯ ವಿಚಾರದಲ್ಲಿ ಮಗ್ನಳಾಗಿದ್ದುದರಿಂದ, ಅಜಿತಾನಂದರ ಮಾತಿನ ಮರ್ಮವು ಗೊತ್ತಾಗಲಿಲ್ಲ. ಅವಳು ಸ್ವಾನಂದ ಸಾಮ್ರಾ ಜ್ಯದಲ್ಲಿ ತಲ್ಲೀನಳಾಗಿದ್ದಳು. ಕೆಲವು ವೇಳೆಯ ಮೇಲೆ ಅವಳು ಅಜಿತಾನಂದರನ್ನು

ಕುರಿತು—"ಮಹಾತ್ಮರೆ, ತ್ರಿಕಾಲಜ್ಞಾನಿಗಳಾದ ನಿಮ್ಮ ಭವಿಷ್ಯವಾಣಿಯನ್ನು ಕೇಳಿ ನನಗೆ ಸಂಭ್ರಮವಾಗಿದೆ. ಸುಲಿಗೆಗಾರರ ಕೈಯೊಳಗೆ ಸಿಲುಕಿದ ನನ್ನ ಮೇಲೆ ಭಯಂಕರವಾದ ಗಂಡಾಂತರವೊದಗುವದೆಂದು ಸ್ವಲ್ಪ ವೇಳೆಯ ಹಿಂದೆ ತಿಳಿದಿದ್ದೆನು. ತಮ್ಮ ಸಾನ್ನಿಧ್ಯವನ್ನು ಸೇರಿದೊಡನೆಯೇ ಅದಕ್ಕೆ ವಿಪರೀತವಾದ ಪರಿಸ್ಥಿತಿಯು ದೃಗ್ಗೋಚರವಾಯಿತು. ನನ್ನ ಅಮ್ಮನ ಸುರಕ್ಷಿತತೆಯ ಬಗ್ಗೆ ವ್ಯವಸ್ಥೆಯಾದರೆ ನಾನು ನಿಶ್ಚಿಂತಳಾಗುವೆನು."

"ಅರುಣಕುಮಾರಿ, ನಿನ್ನ ಅಮ್ಮನು ನಾಳೆ ಸಂಧ್ಯಾಕಾಲದೊಳಗಾಗಿ ಇಹ ಲೋಕವನ್ನು ತ್ಯಜಿಸುವಳು. ಅವಳ ವಿಷಯವಾಗಿ ನೀನು ನಿರರ್ಥಕವಾಗಿ ಚಿಂತೆ ಮಾಡಬೇಡ. ನೀನು ಸುರಕ್ಷಿತವಾದ ಸ್ಥಳವನ್ನು ಮುಟ್ಟಿದ ಬಗ್ಗೆ ನಿನ್ನ ಅಮ್ಮನಿಗೆ ಸುದ್ದೀ ಕಳುಹುವೆನು" ಎಂದು ಅಜಿತಾನಂದರು ನುಡಿದು, ವನರಾಜನನ್ನು ಕರೆಯಿಸಿ—"ವನರಾಜ, ಅರುಣಕುಮಾರಿಯು ತನ್ನ ತಂದೆಯ ಬಳಿಯಲ್ಲಿ ಸೌಖ್ಯವಾಗಿರುವಳೆಂದು, ಕಪೋತಾಕ್ಷೀತೀರದಲ್ಲಿಯ ಗುಡಿಸಲಲ್ಲಿದ್ದ ಮುದುಕೆಗೆ ಸುದ್ದೀ ಕಳುಹಿಸು."

"ತಂದೆಯ ಬಳಿಯಲ್ಲಿ?" ವನರಾಜನು ವಿಸ್ಮಿತನಾಗಿ ಕೇಳಿದನು.

"ಹೌದು. ಅರುಣಳ ಹಿತಚಿಂತನೆಗಾಗಿ ನಾನೂ ನೀನೂ ಈ ವೀರಮಾಣಿಕನೂ ಯತ್ನಿಸುತ್ತಿರುವಾಗ ಇವಳು ತಂದೆಯ ಬಳಿಯಲ್ಲಿದ್ದಂತೆಯಲ್ಲದೆ ಮತ್ತೇನು? ಈ ಮಾಣಿಕನಂತು ಅರುಣಕುಮಾರಿಯನ್ನು ಮಗಳಂತೆ ಭಾವಿಸಿರುವನು" ಎಂದು ಅಜಿತಾನಂದರು ನುಡಿದರ . ಅನಂತರದಲ್ಲಿ ವನರಾಜನು ಇಬ್ಬರು ಅನುಚರರನ್ನು ಕಪೋತಾಕ್ಷೀ ತೀರದಲ್ಲಿದ್ದ ಜಾಹ್ನವಿಯ ಬಳಿಗೆ ಕಳುಹಿಸಿದನು.

ಮಾರನೆಯದಿನ ಜಾಹ್ನವಿಗೆ ಅರುಣಕುಮಾರಿಯು ಸುರಕ್ಷಿತವಾಗಿದ್ದ ಸಂಗತಿಯು ತಿಳಿಯಿತು. ಅಜಿತಾನಂದರ ಭವಿಷ್ಯವಾಣಿಯಂತೆ ಅಂದೇ ಅವಳ ಪ್ರಾಣೋತ್ಕ್ರಮಣವಾಯಿತು!

---

## ಕರ್ಮದಫಲ.

ಅರುಣಕುಮಾರಿಯು ಯಾವಾಗಲೂ ಅಜಿತಾನಂದ ಸ್ವಾಮಿಗಳ ಸಹವಾಸದಲ್ಲಿದ್ದು, ಅವರ ಸೇವೆ ಮಾಡುತ್ತಿದ್ದಳು. ಜಗದಂಬೆಯ ಪೂಜೆಗಾಗಿ ಸಾಮಗ್ರಿಗಳನ್ನೊದಗಿಸಿಕೊಡುವ ಕಾರ್ಯವೊಂದು ಅವಳದಾಗಿತ್ತು. ಅವಳು ದಿನಾಲು ಪುರಾಣ ಪುಣ್ಯಕಥೆ ಇತಿಹಾಸ ಗ್ರಂಥಗಳನ್ನೋದಿ ಧರ್ಮಗಳನ್ನು ತಿಳಿದುಕೊಳ್ಳುತ್ತಿದ್ದಳು. ಅಜಿತಾನಂದರು ಅವಳಿಗೆ ನಿತ್ಯದಲ್ಲಿ ಧರ್ಮೋಪದೇಶ ಮಾಡುತ್ತಿದ್ದರು. ಅವಳು ಮಹಾರಾಜ್ಞಿಯಾಗುವ ಯೋಗವಿದ್ದುದರಿಂದ ಸ್ವಾಮಿಗಳು ಶ್ರೇಷ್ಠತಮವಾದ ರಾಷ್ಟ್ರಧರ್ಮವನ್ನು ಸಹ ಅವಳಿಗೆ ಬೋಧಿಸುತ್ತಿದ್ದರು. ಯುದ್ಧವಿದ್ಯೆಯಲ್ಲಿ ಅರುಣ

ಕುಮಾರಿಯು ನಿಷ್ಣಾತಳಿರುವದನ್ನು ಅವರು ಮನವರಿಕೆ ಮಾಡಿಕೊಂಡಿದ್ದರು. ಆದ್ದರಿಂದ ಆ ಕಲೆಯ ಬೆಳವಣಿಗೆಯಾಗಬೇಕೆಂದು ಸ್ವಾಮಿಗಳು ಅವಳನ್ನು ಕೃಷ್ಣ ಲಾಲನ ಕಡೆಗೆ ದಿನಾಲು ತಾಸೆರಡುತಾಸು ಕಳುಹಿಸುತ್ತಿದ್ದರು. ಯುದ್ಧಕಲಾನಿಪುಣ ಳಾದ ಮಗಳನ್ನು ಕಂಡು ಕೃಷ್ಣಲಾಲನು ಹಿರಿ ಹಿರಿ ಹಿಗ್ಗುತ್ತಿದ್ದನು. ಅವನ ಕೈ ಕೆಳಗಿದ್ದ ಎಂಟು ನೂರು ಸಮರಪಟುಸೈನಿಕರಲ್ಲಿ ಅರುಣಕುಮಾರಿಯನ್ನು ಸರಿ ಗಟ್ಟುವವರು ಯಾರೂ ಇದ್ದಿಲ್ಲ.

ಅರುಣಕುಮಾರಿಗೆ ಕೃಷ್ಣಲಾಲನ ಪರಿಚಯು ಮಾಡಿಕೊಡಬೇಕೆಂದು ಅಜಿತಾ ನಂದರ ಮನಸ್ಸಿನಲ್ಲಿತ್ತು. ಒಂದು ದಿನ ಸಂಧ್ಯಾಕಾಲದ ವೇಳೆಯಲ್ಲಿ ದೇವಿಯ ಮಂಗ ಳಾರತಿಯು ಮುಗಿದ ಬಳಿಕ, ಅವರು ದೇವಾಲಯದ ಹೊರಗಿನ ಕಟ್ಟೆಯ ಮೇಲೆ ಕುಳಿತಿದ್ದರು. ಅವರ ಎದುರಿಗೆ ಕೃಷ್ಣಲಾಲನೂ ಅರುಣಕುಮಾರಿಯೂ ಕುಳಿತು ಕೊಂಡಿದ್ದರು. ಆಗ ಅಜಿತಾನಂದರು ಅರುಣಕುಮಾರಿಯನ್ನು ಕುರಿತು—“ಅರುಣ, ನೀನು ಈ ವೀರಮಾಣಿಕನನ್ನು ಗುರುತಿಸುವೆಯೇನು?”

“ಓಹೋ! ಇವರು ಸುಲಿಗೆಗಾರರ ಉಪನಾಯಕರೆಂಬದನ್ನು ನಾನು ಬಲ್ಲೆನು.”

“ಇಷ್ಟರ ಹೊರತು ಇವನ ವಿಷಯವಾಗಿ ಹೆಚ್ಚಿನ ಪರಿಚಯವಿಲ್ಲವಷ್ಟೆ?”

“ಇಲ್ಲ.”

“ಈ ಮಾಣಿಕನು ನಿನ್ನ ತಂದೆಯಾದ ಕೃಷ್ಣಲಾಲನು. ನೀನು ಚಿಕ್ಕವಳಿದ್ದಾ ಗಲೆ, ಇವನು ವನರಾಜನ ಸೆರೆಯಲ್ಲಿ ಸಿಲುಕಿ ಇಲ್ಲಿಗೆ ಬಂದನು. ಇವನು ನಿನ್ನನ್ನು ಗುರುತಿಸಿರುವನು. ಇನ್ನು ಬೇಗನೆ ನಿಮ್ಮಿಬ್ಬರ ಅಭ್ಯುದಯ ಯೋಗವು ಒದಗ ಬಹುದಾಗಿದೆ. ಇಷ್ಟು ದಿನಗಳ ವರೆಗೆ ನಿನಗೆ ತಂದೆಯ ಪರಿಚಯವನ್ನು ಬುದ್ಧಿ ಪೂರ್ವಕವಾಗಿ ಮಾಡಿ ಕೊಟ್ಟಿದ್ದಿಲ್ಲ ಇನ್ನು ಮೇಲೆ ನಿಮ್ಮಿಬ್ಬರ ಮುಕ್ತತೆಯಾಗಿ ಸೌಖ್ಯಹೊಂದುವಿರಿ. ವನರಾಜನ ಸಂಪತ್ತೂ ಸೇನೆಯೂ ಕೃಷ್ಣಲಾಲನ ವಶವಾಗು ವದು. ಅನಂತರದಲ್ಲಿ ನೀನು ಒಬ್ಬ ರಾಜನ ಅರ್ಧಾಂಗಿಯಾಗುವೆ. ಅರುಣ, ರಾಜ್ಞೀ ಪದವನ್ನು ಹೊಂದಿದ ಮೇಲೆ ನಿನ್ನ ಆಯುಷ್ಯವು ಸುಖಮಯವಾಗುವದೋ ದುಃಖ ಮಯವಾಗುವದೋ ಎಂಬದನ್ನು ಈಗಲೆ ನಾನು ಹೇಳಲಾರೆನು ದೇಶಹಿತಕ್ಕಾ ಗಿಯೂ ಸ್ವಜನರ ಉದ್ಧಾರಕ್ಕಾಗಿಯೂ ನೀನು ಶಕ್ತಿಮೀರಿ ಹೆಣಗುವೆ. ವನರಾಜನ ಸಂಪತ್ತೂ, ಸೈನ್ಯವೂ ಸ್ವದೇಶಕಾರ್ಯಕ್ಕಾಗಿ ಉಪಯೋಗ ಬೀಳುವವು. ನಿನಗೆ ನಿನ್ನ ತಂದೆಯಿಂದ ಬಹಳೇ ನೆರವು ದೊರೆಯುವದು. ಅರುಣ, ವನರಾಜನ ಪಾಪದ ಕೊಡವು ತುಂಬುತ್ತ ಬಂದಿರುವದು. ಅವನ ಅಂತವು ಬೇಗನೆ ಆಗುವದೆಂಬದರಲ್ಲಿ ಸಂದೇಹವಿಲ್ಲ. ಪಾಪಾಚರಣೆಯಿಂದ ಸಂಪಾದಿಸಿದ ಸ್ವತ್ತನ್ನು ಧರ್ಮಕಾರ್ಯಕ್ಕೆ ವ್ಯಯಮಾಡಿಸಬೇಕೆಂದೇ ನಾನು ಆಗ್ರಹದಿಂದ ನಿನ್ನ ತಂದೆಯನ್ನು ನನ್ನ ಬಳಿ ಯಲ್ಲಿರಿಸಿಕೊಂಡೆನು. ವನರಾಜನ ಮರಣಾನಂತರದಲ್ಲಿ ಕೃಷ್ಣಲಾಲನೇ ಅವನ ಸಂಪತ್ತಿಗೆ ಒಡೆಯನಾಗುವನು. ಅವನ ಕೈಕೆಳಗಿನ ಎಂಟು ನೂರು ಜನ ಅನುಚರ

ರಾದರೂ ಕೈವಶರಾಗುವರು. ನೀನು ರಾಣಿಯಾದ ಮೇಲೆ ನಿನ್ನ ತಂದೆಯ ಸಹಾಯ ದಿಂದ ದೇಶಕಾರ್ಯ ಮಾಡಲಿಕ್ಕೆ ವನರಾಜನ ಅಮೋಘವಾದ ಸಂಪತ್ತೂ ಸೈನ್ಯವೂ ಚನ್ನಾಗಿ ಉಪಯೋಗವಾಗುವವು. ಅರುಣಕುಮಾರಿ, ನಿನ್ನ ತಂದೆಯಾದ ಈ ಕೃಷ್ಣಲಾಲನಿಗೆ ಅಭಿವಂದಿಸು."

ಅಜಿತಾನಂದರ ಆನಂದವಿಸ್ಮಯಜನಕವಾದ ಮಾತುಗಳನ್ನು ಕೇಳಿ, ಅರುಣ ಕುಮಾರಿಯು ದಂಗುಬಡೆದಳು. ತರುವಾಯ ಅವಳು ತಂದೆಗೆ ನಮಸ್ಕರಿಸಿದಳು. ಕೃಷ್ಣಲಾಲನು ಅವಳನ್ನು ಹಿಡಿದೆತ್ತಿ ಬಿಗಿದಪ್ಪಿ:—"ಮಗೂ, ಇಷ್ಟು ದಿನಗಳವರೆಗೆ ನಾನು ನನ್ನ ರಹಸ್ಯವನ್ನು ಬಚ್ಚಿಟ್ಟಿದ್ದೆನು. ಸ್ವಾಮಿಮಹಾರಾಜರ ಆಜ್ಞೆಯೇ ಹಾಗಿತ್ತು. ನಮ್ಮ ಈ ಸಂಬಂಧವು ವನರಾಜನಿಂದ ಗುಪ್ತವಾಗಿ ಉಳಿಯಬೇಕೆಂಬ ಉದ್ದೇಶದಿಂದ ನನ್ನ ಪರಿಚಯವನ್ನು ನಿನಗೆ ಮಾಡಿಕೊಟ್ಟಿದ್ದಿಲ್ಲ. ಈಗ ಪರಿಸ್ಥಿತಿಯು ನಮಗೆ ಅನುಕೂಲವಾಗುತ್ತ ನಡೆದಿದೆ. ಸೈನಿಕರೂ ಸಂಪತ್ತೂ ನಮ್ಮ ಕೈವಶವಾದಂತಾಗಿವೆ. ವನರಾಜನ ಅಂತ್ಯಕಾಲವು ಸಮೀಪಿಸಿರುವದೆಂದು ಸ್ವಾಮಿ ಮಹಾರಾಜರ ಭವಿಷ್ಯಸೂಚನೆಯಾದ್ದರಿಂದಲೇ ಕೈಕಾದಿರುವೆನು. ಹಾಗಿಲ್ಲದಿದ್ದರೆ ಇಷ್ಟು ಹೊತ್ತಿಗೆ ವನರಾಜನನ್ನು ಯಮರಾಜನ ವಶಮಾಡಿಬಿಡುತ್ತಿದ್ದೆನು"

ಕೃಷ್ಣಲಾಲ!" ಅಜಿತಾನಂದರು ನಿಸ್ಪೃಹತೆಯಿಂದ:—"ದುಷ್ಟರು ತಮ್ಮ ದುಷ್ಟ ಕಾರ್ಯಗಳ ಫಲವನ್ನು ತಾವಾಗಿ ಹೊಂದುವರು. ಅವರ ಸಾವು ಅವರ ಕೈ-ಯೊಳಗೇ ಇರುತ್ತದೆ. ತಾವು ಮಾಡಿದ ಕರ್ಮಗಳ ಫಲದಿಂದಲೇ ಅವರು ಒಳಿತು ಹೀನತೆಗಳನ್ನು ಹೊಂದುವರು. ವನರಾಜನ ನೀಚ ಕೃತಿಗಳಿಗೇನು ಕಡಿಮೆ? ಅವನ ನೀಚ ಕೃತಿಗಳೇ ಅವನಿಗೆ ಕಾಲಸ್ವರೂಪಿಯಾಗಿರುತ್ತಿರುವಾಗ, ಬೇರೆಯವರು ಅವನ ನಾಶ ಮಾಡಹೋಗಿ ನಿರರ್ಥಕವಾಗಿ ಪಾತಕ ಅಪಕೀರ್ತಿಗಳನ್ನು ಹೊಂದುವ ಕಾರಣವೇನು? ಕೊಲೆಯ ಪಾತಕವು ಬರಬಾರದೆಂಬ ಉದ್ದೇಶದಿಂದಲೆ ನಾನು ಆತ್ಮ ಸಂಯಮನ ಮಾಡಿಕೊಂಡೆನು. ಹಾಗಿಲ್ಲದಿದ್ದರೆ ಮಂತ್ರ ಸಾಮರ್ಥ್ಯದಿಂದ ವನ ರಾಜನ ನಾಶಮಾಡಿಬಿಡುತ್ತಿದ್ದೆನು ಜಡಸ್ವಾರ್ಥಿಗಳೂ, ಉನ್ಮತ್ತರೂ, ಪರಹಿಂಸ ಕರೂ, ಆತ್ಮಸುಖೈಕಪರಾಯಣರೂ ಒಂದಿಲ್ಲೊಂದು ಕಾರಣದಿಂದ ನಾಶಹೊಂದು ವದು ನಿಶ್ಚಿತವು. ವನರಾಜನು ನನ್ನ ಆಜ್ಞೆಯನ್ನು ದುರ್ಲಕ್ಷಿಸಿ, ಮೂವರ ಕುಲ ಪಾವಿತ್ರ್ಯವನ್ನು ನಾಶಮಾಡಿರುವನು. ಆ ಸ್ತ್ರೀಯರ ಪರಿತಾಪವೇ ಅವನ ನಾಶಕ್ಕೆ ಕಾರಣವಾಗುವದು."

ಅಜಿತಾನಂದರ ಮಾತುಗಳು ಕೃಷ್ಣಲಾಲನಿಗೆ ಸಂಭ್ರಮವನ್ನುಂಟು ಮಾಡಿ ದವು. ತನ್ನ ಪುತ್ರಿಯಾದ ಅರುಣಳು ರಾಣಿಯಾಗುವಳೆಂದು ಅವರು ಹೇಳಿದ ಭವಿಷ್ಯದಲ್ಲಿ ಮಾತ್ರ ಕೃಷ್ಣಲಾಲನಿಗೆ ಅಷ್ಟೊಂದು ವಿಶ್ವಾಸವಿರಲಿಲ್ಲ. ರೂಪ-ಗುಣ ಗಳಿಂದ ಅರುಣಳು ಸಾಮ್ರಾಜ್ಞೀಪದವನ್ನು ಸಹಹೊಂದಲಿಕ್ಕೆ ತಕ್ಕವಳಾಗಿದ್ದರೂ,ತನ್ನ ಮನೆತನದ ಚಾರಿತ್ರ್ಯವು ಕಲಂಕಿತವಾಗಿದ್ದುದರಿಂದ ಅವಳಿಗೆ ರಾಜ್ಞೀಪದಹೊಂದುವ

ಸುಯೋಗವು ಲಭಿಸಲಾರದೆಂದು ಕೃಷ್ಣಲಾಲನ ದೃಢವಾದ ವಿಶ್ವಾಸವಿತ್ತು. ಅವನು ಈ ವಿಷಯದಲ್ಲಿ ಅಜಿತಾನಂದರನ್ನು ಗಟ್ಟಿಮುಟ್ಟಾಗಿ ಕೇಳಿ, ಮನಸ್ಸಿಗೆ ಸಮಾಧಾನ ವನ್ನುಂಟು ಮಾಡಿಕೊಳ್ಳಬೇಕೆಂಬ ಉದ್ದೇಶದಿಂದ—"ಸ್ವಾಮಿ ಮಹಾರಾಜರೆ, ಅರುಣಕುಮಾರಿಯು ದೈವವಲ್ಲಿ ರಾಜ್ಞೀಪದಹೊಂದುವ ಯೋಗವಿರುವದೆಂದು ಹೇಳಿ ದಿರಿ. ನಿಮ್ಮ ಭವಿಷ್ಯವು ಅಯಥಾರ್ಥವಾದದ್ದಿರಲಿಕ್ಕಿಲ್ಲವಷ್ಟೆ? ಒಂದು ಕಾರಣ ದಿಂದ ನನ್ನ ಮನಸ್ಸಿನಲ್ಲಿ ಇಂದು ಸಂದೇಹವು ಉತ್ಪನ್ನವಾಗಿದೆ."

"ಕೃಷ್ಣಲಾಲ, ನನ್ನ ಮುಖದಿಂದ ಅಸತ್ಯವಾಣಿಯು ಕಾಲತ್ರಯದಲ್ಲಿಯೂ ಹೊರಡಲಾರದು. ಅಜಿತಾನಂದರು ಅಸತ್ಯವಾದಿಗಳೆಂಬ ಅನುಮಾನವು ನಿನ್ನಲ್ಲಿ ಹುಟ್ಟಿದ್ದನ್ನು ನೋಡಿ ವಿಸ್ಮಯುವಾಗುವದು."

"ಹಾಗಿದ್ದರೆ ನನ್ನ ಅರುಣಳು ಒಬ್ಬ ಹೀನ ಜಾತಿಯ ಅರಸನ ಅರಸಿ ಯಾಗುವಳೆ?"

"ಹೀಗೇಕೆ ಕಲ್ಪಿಸುವೆ?" ಅಜಿತಾನಂದರು ಸೋಜಿಗಗೊಂಡು ಪ್ರಶ್ನೆ ಮಾಡಿದರು.

"ಮಹಾತ್ಮರೆ, ನನ್ನ ಮನೆತನವು ಲೌಕಿಕ ದೃಷ್ಟಿಯಿಂದ ಹೇಗೆ ಹೀನತೆ ಹೊಂದಿದ್ದಾಗಿರುವದೆಂಬದನ್ನು ತಮಗೆ ತಿಳಿಸಿರುವೆನು. ಇಂತಹ ಹೀನಕುಲದವ ನಾದ ನನ್ನ ಪುತ್ರಿಯನ್ನು ರಜಪುತರಾಜನು ಹೇಗೆ ಪರಿಗ್ರಹಿಸುವನು?"

"ಕೃಷ್ಣಲಾಲ, ಈ ವಿಷಯದಲ್ಲಿ ನೀನು ಸಂದೇಹಗೊಳ್ಳುವದು ಸ್ವಾಭಾವಿ ಕವು. ನಿಜವಾಗಿ ವಿಚಾರಿಸಿದರೆ, ನೀನು ಅಚ್ಚ ರಜಪೂತನಿರುವೆ. ನೀನು ವೇಶ್ಯಾ ಕನ್ನಿಕೆಯನ್ನು ವರಿಸಿದ್ದಕ್ಕಾಗಿಯೂ, ಅರುಣಳು ವೇಶ್ಯಾಕನ್ನಿಕೆಯಿಂದ ಜನಿಸಿದ್ದ ಕ್ಕಾಗಿಯೂ ಜನರು ದೋಷೈಕ ದೃಷ್ಟಿಯಿಂದ ನೋಡುತ್ತಿರುವದು ನಿಜವು; ಆದರೆ ನೈತಿಕದೃಷ್ಟಿಯಿಂದ ನಿನ್ನ ಮನೆತನವು ಅಪವಿತ್ರವೆಂದು ತಿಳಿಯಲಿಕ್ಕೆ ಮಾರ್ಗವಿಲ್ಲ. ನಿನ್ನ ಪತ್ನಿಯು ವೇಶ್ಯಾಕನ್ನಿಕೆಯಾಗಿದ್ದರೂ ಮಹಾ ಸಾಧ್ವಿಯಾಗಿದ್ದಳು. ನೀನು ಅಚ್ಚ ರಜಪುತ ಕುಲದವನಿರುವದರಿಂದ, ಅರುಣಳಾದರೂ ರಜಪೂತ ಬಾಲೆಯೆಂದು ನಿರ್ವಿವಾದವಾಗಿ ಹೇಳಬಹುದು. ಜನಸಾಮಾನ್ಯರ ದೃಷ್ಟಿಯಿಂದ ಅರುಣಕುಮಾ ರಿಯು ಕುಲಕಲಂಕಿನಿಯಾಗಿ ಕಂಡರೂ, ವಿವೇಕಶಾಲಿಯಾದ ದೊಡ್ಡ ಮನೆತನದ ಪವಿತ್ರಕುಲದ ರಜಪೂತರಾಜನು ನಿನ್ನ ಕುಮಾರಿಯನ್ನು ಸತ್ಕುಲಜಾತಳೆಂದು ನಿರ್ಧರಿಸಿ ವಿವಾಹವಾಗುವನು. ನನ್ನ ಮಾತುಗಳಲ್ಲಿ ಸ್ವಲ್ಪಾದರೂ ಮಿಥ್ಯಾಂಶವಿಲ್ಲ.

"ಸ್ವಾಮಿನ್! ಯೋಗ-ಯೋಗೇಶ್ವರರೂ ತ್ರಿಕಾಲಜ್ಞಾನಿಗಳೂ ಆದ ನಿಮ್ಮ ಮಾತುಗಳಲ್ಲಿ ನನಗೆ ಸಂದೇಹವಿಲ್ಲ. ಜನಾಂಗವು ಅಂಧಶ್ರದ್ಧೆಯುದಿದ್ದ ಮೂಲಕ ರಜಪುತ ಕುಲಕನ್ನಿಕೆಯನ್ನು ವರಿಸಬೇಕೆಂದು ನಾನು ಮಾಡಿದ ಸಾಹಸವು ವ್ಯರ್ಥ ವಾಗಿ, ಕಡೆಗೆ ಅನಿರ್ವಾಹಕ್ಕಾಗಿ ವೇಶ್ಯಾಕನ್ನಿಕೆಯನ್ನು ವರಿಸಿದೆನು. ರಜಪುತ ಕುಲಜಾತನಾದ ನನ್ನ ಮೇಲೆಯೇ ಇಂತಹ ಪ್ರಸಂಗ ವೊದಗಿದಾಗ, ವೇಶ್ಯಾಕುಲ ಜಾತೆಯೆಂದು ಪ್ರಸಿದ್ಧಳಾದ ಅರುಣಕುಮಾರಿಗೆ ರಜಪುತ ಕುಲದ ವರನು ಲಭಿಸು

ವದು ಅಸಂಭವವೆಂದು ನಾನು ತಿಳಿದಿದ್ದೆನು. ಈಶ್ವರೇಚ್ಛೆಯಿಂದ ಅಘಟಿತ ಕಾರ್ಯ ಗಳು ಸುಲಭಸಾಧ್ಯವಾಗುತ್ತಿರುವಾಗ ಇಂತಹ ಅಲ್ಪ ಕಾರ್ಯಗಳ ಪಾಡೇನು? ಮಹಾತ್ಮರಾದ ನಿಮ್ಮ ಅನುಗ್ರಹವೂ ಭಗವತ್ಕೃಪೆಯೂ ಒಟ್ಟಾಗಿ ನನ್ನ ಕುಮಾ ರಿಯ ಭಾಗ್ಯೋದಯಕ್ಕೆ ಅನುಕೂಲವಾಗಲಿ."

ಒಬ್ಬ ರಜಪುತರಾಜನು ತನ್ನನ್ನು ಸತ್ಕುಲಜಾತಳೆಂದು ಸಿದ್ಧಪಡಿಸಿ ವಿವಾಹ ವಾಗುವನೆಂದು ಅಜಿತಾನಂದರು ಹೇಳಿದ್ದರಿಂದ ಅರುಣಕುಮಾರಿಗೆ ಹಿಡಿಸಲಾರದಷ್ಟು ಆನಂದವಾಗಿತ್ತು. ತಾನು ರಾಜ್ಞಿಯಾಗುವ ಯೋಗವಿದ್ದುದರಿಂದಲೇ ಪ್ರಣಯಾ ಕಾಂಕ್ಷಿಯೂ ಬಾಲ್ಯಸ್ನೇಹಿಯೂ ಆದ ವಿಜಯಲಾಲನನ್ನು ವರಿಸುವ ಬುದ್ಧಿಯು ತನ್ನಲ್ಲಿ ಹುಟ್ಟಲಿಲ್ಲವೆಂದು ಅವಳು ತಿಳಿದಳು ಅಜಿತಾನಂದರ ಭವಿಷ್ಯವು ಸತ್ಯ ವಾಗುವದೆಂದು ತಂದೆಯಲ್ಲಿ ವಿಶ್ವಾಸಹುಟ್ಟುವದಕ್ಕೆ ವಿಜಯಲಾಲನ ಪ್ರಣಯ ಚಿತ್ರವು ಅನುಕೂಲವಾಗುವದೆಂದು ಬಗೆದು:—"ಅಪ್ಪಾ, ನನ್ನ ಬಾಲ್ಯಸ್ನೇಹಿತ ರಾದ ವಿಜಯಲಾಲರನ್ನು ನೀವು ಮರೆತಿಲ್ಲವಷ್ಟೆ? ಅವರು ನನ್ನಲ್ಲಿ ಮೊದಲು ನಿರ್ವ್ಯಾಜಪ್ರೇಮದಿಂದ ನಡೆದುಕೊಳ್ಳುತ್ತಿದ್ದರು. ನನ್ನ ಸಲುವಾಗಿ ಉರಿಯಲ್ಲಿ ದುಮುಕಲಿಕ್ಕೆ ಸಹ ಅವರು ಹಿಂದೆಮುಂದೆ ನೋಡುತ್ತಿರಲಿಲ್ಲ. ಸುಲಿಗೆಗಾರರು ನನ್ನನ್ನು ನೌಕೆಯೊಳಗಿಂ... ರುವಾಗ ತುಂಬಿ ಹರಿಯುವ ಕಪೋತಾಕ್ಷಿಯಲ್ಲಿ ಬಿದ್ದರು. ಈಗ ಅವರು ಎಲ್ಲಿರುವರೆಂಬದು ದೇವರಿಗೆ ಗೊತ್ತು. ಅವರು ನನ್ನ ವಿಷಯದಲ್ಲಿ ಅತ್ಯಂತ ಪ್ರೇಮವುಳ್ಳವರಾಗಿದ್ದರು. ಬರಬರುತ್ತ ಅವರ ನಿರ್ವಿಕಾರ ಪ್ರೇಮವು ರೂಪಾಂತರ ಹೊಂದತೊಡಗಿರುವದು. ನನ್ನನ್ನು ವಿಜಯಲಾಲರಿಗೆ ಕೊಡಬೇಕೆಂದು ನನ್ನ ಅಮ್ಮನು ಯೋಚಿಸಿದ್ದಳು. ಅವಳು ತನ್ನ ಮನೋಗತ ವನ್ನು ಅವರ ಮುಂದೆ ಹೇಳಿದ್ದಳು. ಆದ್ದರಿಂದಲೇ ಅವರ ಹೃದಯದಲ್ಲಿ ಪ್ರಣಯವು ನೆಲೆಗೊಂಡಿತು. ಹೀಗಿದ್ದರೂ ಅವರು ನೀತಿಯ ಮೇರೆಮನ್ನೆಂದೂ ದಾಟಲಿಲ್ಲ. ಅವರು ಅಚ್ಚ ರಜಪುತ ಕುಲದವರೂ, ಚಿಕ್ಕವಯಸ್ಸಿನವರೂ, ಶೂರರೂ, ಸದ್ಗುಣಿ ಗಳೂ ಆಗಿದ್ದರೂ, ನನ್ನ ನಿರ್ವಿಕಾರ ಪ್ರೇಮವು ರೂಪಾಂತರ ಹೊಂದಿಲ್ಲ. ಸ್ವಾಮಿ ಮಹಾರಾಜರ ಭವಿಷ್ಯದ ಮೇರೆಗೆ ನಾನು ಒಬ್ಬ ರಾಜನ ರಾಣಿಯಾಗುವ ಯೋಗ ವಿದ್ದುದರಿಂದಲೇ, ವಿಜಯಲಾಲರನ್ನು ವರಿಸುವ ಬುದ್ಧಿಯು ನನ್ನಲ್ಲಿ ಹುಟ್ಟಲಿಲ್ಲ ವೆಂದು ಭಾವಿಸುವೆನು."

"ಅರುಣಕುಮಾರಿ, ನಿನ್ನ ಅಭಿಪ್ರಾಯವು ನಿಜವಾದದ್ದಿರುವದು. ಕುಲಾಂಗನೆ ಯರ ಹೃದಯವು ಸಹಜವಾಗಿ ವಿಕಾರವಶವಾಗುವದಿಲ್ಲ; ಒಮ್ಮೆ ಅದು ಪ್ರೇಮ ಮಯವಾಯಿತೆಂದರೆ ಯಾವ ಕಾರಣದಿಂದಲೂ ಸ್ಥಿತ್ಯಂತರ ಹೊಂದುತ್ತಿರುವದಿಲ್ಲ. ನಿನ್ನ ಪ್ರಣಯವನ್ನು ಅಪೇಕ್ಷಿಸುತ್ತಿದ್ದ ವಿಜಯಲಾಲನು ನಿರುತ್ಸಾಹಿಯಾಗಿ ಗಿರಿ ವನಗಳಲ್ಲಿ ಸಂಚರಿಸುತ್ತಿರುವನು. ಅವನ ಸದ್ಯದ ಮನೋವೃತ್ತಿಯು ವಿಲಕ್ಷಣ ವಾದದ್ದಾಗಿರುವದು. ಸನ್ಯಾಸವನ್ನು ಸ್ವೀಕರಿಸಬೇಕೆಂದು ಅವನ ಇಚ್ಛೆಯುಂಟು

ಈಗ ಅವನು ಸಾಧುವೇಷದಿಂದ ಸಂಚರಿಸತೊಡಗಿರುವನು. ಭಗವನ್ನಾಮಸಂಕೀರ್ತನೆಯ ಹೊರತು ಮಿಕ್ಕ ವಿಷಯಗಳಲ್ಲಿ ಅವನ ಮನಸ್ಸು ಹೋಗುತ್ತಿರುವದಿಲ್ಲ. ಅರುಣ, ನಿನ್ನ ಬಾಲಸ್ನೇಹಿಯಾದ ವಿಜಯಲಾಲನ ಭೇಟಿಯು ನಿನಗೆ ಆಗುವದು. ನಿನ್ನ ಉಪದೇಶದಿಂದ ಅವನ ಮನೋವೃತ್ತಿಯಲ್ಲಿ ಸ್ಥಿತ್ಯಂತರವುಂಟಾಗುವದು. ರಾಜ್ಞೀಪದವನ್ನು ಹೊಂದಿದ ಮೇಲೆ ನಿನಗೆ ಆವನಿಂದ ನೆರವು ದೊರೆಯುವದು." ಎಂದು ಅಜಿತಾನಂದರು ಭವಿಷ್ಯಸೂಚನೆ ಮಾಡಿದರು.

ಅಜಿತಾನಂದರ ಪರಮಾಶ್ಚರ್ಯಕಾರಕ ಭೂತಭವಿಷ್ಯಜ್ಞಾನವನ್ನು ನೋಡಿ ಅರುಣಕುಮಾರಿಗೆ ಬಹಳೇ ಸೋಜಿಗವಾಯಿತು. ಕೃಷ್ಣಲಾಲನಿಗೆ ಅವರ ಘನವಾದ ಯೋಗ್ಯತೆಯ ಪರಿಚಯವಿದ್ದುದರಿಂದ ಅವರು ಅಷ್ಟೊಂದು ವಿಸ್ಮಿತನಾಗಲಿಲ್ಲ. ಮೂವರೂ ಕೆಲವು ವೇಳೆಯ ವರೆಗೆ ಮಾತಾಡುತ್ತ ಕುಳಿತುಕೊಂಡಿದ್ದರು. ಅಷ್ಟರಲ್ಲಿ ಸೇವಕನೊಬ್ಬನು ಅಲ್ಲಿಗೆ ಬಂದು ಅಜಿತಾನಂದರನ್ನು ಕುರಿತು ಭಯಕಂಪಿತಸ್ವರದಿಂದ: "ಸ್ವಾಮಿಮಹಾರಾಜರೆ, ಸರದಾರ ವನರಾಜರು ಅಂತಿಮ ಅವಸ್ಥೆಯನ್ನು ಹೊಂದಿರುವರು. ಇನ್ನು ಬಹಳ ವೇಳೆ ಅವರು ಬದುಕುವ ಲಕ್ಷಣವಿಲ್ಲ. ನಿಮ್ಮನ್ನೂ ವೀರಮಾಣಿಕರನ್ನೂ ಕರೆದುಕೊಂಡು ಬರಬೇಕೆಂದು ಅವರು ತಿಳಿಸಿದ್ದರಿಂದ ಬಂದೆನು. ಬೇಗನೆ ದಯಮಾಡಿಸಬೇಕು" ಎಂದು ಹೇಳಿ ಸೇವಕನು ಹೊರಟು ಹೋದನು.

ಸೇವಕನು ಹೊರಟು ಹೋದ ಮೇಲೆ ಅಜಿತಾನಂದರು ಕೃಷ್ಣಲಾಲರನ್ನು ಕುರಿತು:—"ವನರಾಜನ ಪಾಪದ ಕೊಡವು ಇಂದೇ ತುಂಬಿದಂತಾಯಿತು. ಪರಮಾವಧಿಯಾದ ಹಿಂಸೆಯ ಪರಿಣಾಮವಿದು ದುಷ್ಕರ್ಮಕ್ಕೆ ದುಷ್ಟ ಫಲವು ಲಭಿಸತಕ್ಕದ್ದೇ ಸರಿ.

ವನರಾಜನ ಅವಸ್ಥೆಯನ್ನು ಕೇಳಿ ಕೃಷ್ಣಲಾಲನು ಸೋಜಿಗಗೊಂಡನು. ಆಗ ಅವನು ಅಜಿತಾನಂದರನ್ನು ಕುರಿತು—"ಮಹಾರಾಜರೆ, ಪ್ರಹರದ ಹಿಂದೆ ವನರಾಜನು ಚೆನ್ನಾಗಿದ್ದನು; ಆದರೆ ಈಗ ಮರಣೋನ್ಮುಖಸ್ಥಿತಿಯಲ್ಲಿರುವನೆಂದು ತಿಳಿಯಿತು. ಅವನ ಅವಸ್ಥೆಯು ಅಕಸ್ಮಾತ್ತಾಗಿ ಹೀಗೆ ಆದಕಾರಣವೇನು?"

"ಕೃಷ್ಣಲಾಲ, ಅವನು ಮೂವರು ಕುಲಯುವತಿಯರನ್ನು ಬಲಾತ್ಕಾರದಿಂದ ತಂದಿರುವನಷ್ಟೇ? ಅವರೇ ವನರಾಜನಿಗೆ ಮೃತ್ಯುಸ್ವರೂಪಿಗಳಾದರು. ಆ ಸ್ತ್ರೀಯರು ನೀಚನಾದ ವನರಾಜನಿಗೆ ವಿಷಪ್ರಾಶನ ಮಾಡಿಸಿರುವರು. ಇನ್ನು ಅವನು ಬದುಕುವ ಆಶೆಯೇ ಇಲ್ಲ, ಇಂದೇ ಅವನ ಆಯುಷ್ಯದ ಕೊನೆಯ ದಿನವು"

"ಮಹಾತ್ಮರೆ!" ಕೃಷ್ಣಲಾಲನು ಸೋಜಿಗಗೊಂಡು-"ತಾವು ಇದೀಗ ಹೇಳಿದ ಭವಿಷ್ಯವು ಪ್ರತ್ಯಯಕ್ಕೆ ಬಂದಿತು. ಕರ್ಮದ ಫಲವನ್ನು ಅನುಭವಿಸಿಯೇ ತೀರಬೇಕಲ್ಲವೆ?"

ಅಜಿತಾನಂದರು ಕೃಷ್ಣಲಾಲನನ್ನೂ ಅರುಣಕುಮಾರಿಯನ್ನೂ ಸಂಗಡ ಕರೆದುಕೊಂಡು ವನರಾಜನ ಬಳಿಗೆ ಹೊರಟರು.

---

# ವನರಾಜನ ಅಂತ್ಯ.

ವನರಾಜನು ಹಾಸುಗೆಯ ಮೇಲೆ ಬಿದ್ದು ಹೊರಳಾಡತೊಡಗಿದ್ದನು. ತನಗೆ ವಿಷಪ್ರಯೋಗವಾಗಿರುವದೆಂದು ಅವನಿಗೆ ಗೊತ್ತಾಗಿತ್ತು. ಬಲಾತ್ಕಾರದಿಂದ ತಂದ ಸ್ತ್ರೀಯರೇ ವಿಷಹಾಕಿರುವರೆಂಬದು ಅವನ ಮನವರಿಕೆಯಾಯಿತು. ಪ್ರಚಂಡ ಶಕ್ತಿಶಾಲಿಯಾದ ತನ್ನ ನಾಶಕ್ಕೆ ಮೂವರು ಅಬಲೆಯರು ಕಾರಣರಾದದ್ದು ನೋಡಿ, ಕರ್ಮದ ಫಲವನ್ನು ಅನುಭವಿಸಿಯೇ ತೀರಬೇಕೆಂಬ ದೃಷ್ಟಾಂತವು ಅವನ ದೃಷ್ಟಿ ಪಥದಲ್ಲಿ ಬಂದಿತು. ಆಗ ಅವನು ತನ್ನ ಆಯುಷ್ಯದ ಸಿಂಹಾವಲೋಕನ ಮಾಡಿ ದನು. ತನ್ನಿಂದ ಎಷ್ಟು ಜನರು ನಾಶನಾದರೆಂಬದನ್ನೂ ಎಷ್ಟು ಸ್ತ್ರೀಯರ ಪಾವಿ ತ್ರ್ಯವು ನಾಶಹೊಂದಿತೆಂಬದನ್ನೂ ನೆನೆದ ಕೂಡಲೆ ಅವನ ಹೃದಯಕ್ಕೆ ಬರೆಕೊ- ಟ್ಟಂತಾಯಿತು. ವಿಷಬಾಧೆಯಿಂದಲೂ ಕೃತಕರ್ಮ ಪಶ್ಚಾತ್ತಾಪತಿಖಿಯಿಂದಲೂ ಅವನು ಬೆಂದು ಬೆಂಡಾದನು. ತನ್ನ ಮಹತ್ತರವಾದ ಪಾಪರಾಶಿಯು ಹೇಗೆ ನಷ್ಟ ವಾದೀತೆಂದು ಅವನು ಬಹುವಿಧವಾಗಿ ವಿಚಾರಿಸಿದನು. ದುರಾಚಾರದಿಂದ ಸಂಗ್ರ ಹಿಸಿದ ಅಮೋಘವಾದ ದ್ರವ್ಯವನ್ನು ಸತ್ಕಾರ್ಯಕ್ಕೆ ವೆಚ್ಚಮಾಡ ಹಚ್ಚಿದರೆ, ಪಾಪ ಭಾರವು ತಕ್ಕಮಟ್ಟಿಗಾದರೂ ಕಡಿಮೆಯಾಗಬಹುದೆಂದು ಅವನ ಗ್ರಹಿಕೆಯಾಯಿತು. ಅಷ್ಟರಲ್ಲಿ ಅಜಿತಾನಂದರೂ ಕೃಷ್ಣಲಾಲನೂ ಅಲ್ಲಿಗೆ ಬಂದರು. ಕೂಡಲೆ ವನರಾಜನು ಒಳ್ಳೆಯ ಕಷ್ಟದಿಂದೆದ್ದು ಅಜಿತಾನಂದರಿಗೆ ಅಭಿವಂದಿಸಿ—"ಸ್ವಾಮಿಮಹಾರಾಜರೆ, ನನ್ನ ಆಯುಷ್ಯವು ಇನ್ನು ಸ್ವಲ್ಪ ವೇಳೆಯಲ್ಲಿ ಮುಗಿಯುವದು. ನನ್ನ ಕರ್ಮಕ್ಕೆ ಸರಿಯಾಗಿ ಮರಣವು ಸಂಭವಿಸತೊಡಗಿರುವದು ನಾನು ನನ್ನ ಮರಣಕ್ಕಾಗಿ ವ್ಯಥೆಪಡುವದಿಲ್ಲ; ಇಂದಿನವರೆಗೆ ನನ್ನಿಂದ ಘಟಿಸಿದ ಅನನ್ವಿತ ಕೃತಿಗಳನ್ನು ನೆನಿಸಿ ದೊಡನೆಯೆ ಮನಸ್ಸು ತಲ್ಲಣಗೊಳ್ಳುತ್ತದೆ. ತಮ್ಮಂತಹ ತಪೋನಿಧಿಗಳ ಸಹವಾಸ ದಲ್ಲಿದ್ದರೂ ನನ್ನಲ್ಲಿ ಸದ್ಬುದ್ಧಿಯು ಹುಟ್ಟಲಿಲ್ಲ; ತಮ್ಮ ಉಪದೇಶದ ಪರಿಣಾಮವು ನನ್ನ ದುಷ್ಟ ಮನಸ್ಸಿನ ಮೇಲೆ ತಿಲಾಂಶವಾದರೂ ಆಗಲಿಲ್ಲ. ಮಹಾತ್ಮರೆ, ನಾನು ಮಾಡಿದ ಪಾಪವು ಹೇಗೆ ತೊಳೆದು ಹೋಗುವದೆಂಬದನ್ನು ಹೇಳಿರಿ."

ವನರಾಜನ ನೇತ್ರಗಳು ಅಶ್ರುಗಳಿಂದ ತುಂಬಿದ್ದವು. ಕಂಠವು ಸದ್ಗದಿತ ವಾಗಿತ್ತು. ಪಶ್ಚಾತ್ತಾಪದಿಂದ ಅವನ ಕಠಿಣ ಹೃದಯವು ಬೆಂದು ಹೋಗಿತ್ತು. ಅನುತಾಪಯುಕ್ತವಾದ ಅವನ ಮಾತುಗಳನ್ನು ಕೇಳಿ ಅಜಿತಾನಂದರು "ವನರಾಜ, ನೀನು ಅನೇಕ ಮಹಾ ಪಾತಕಗಳನ್ನು ಮಾಡಿರುವೆ. ಆ ಪಾತಕದ ಫಲವನ್ನೇ ನೀನು ಈಗ ಅನುಭವಿಸತೊಡಗಿರುವೆ. ನೀನು ಎಷ್ಟೇ ಪಾಪಗಳನ್ನು ಮಾಡಿದ್ದರೂ ನೀನು ಪಶ್ಚಾತ್ತಾಪಯುಕ್ತ ಹೃದಯಿಯಾಗಿರುವದರಿಂದ ಆ ಪಾಪದ ಭಾರವು ತಕ್ಕಮಟ್ಟಿ ಗಾದರೂ ಕಡಿಮೆಯಾಗುವದೆಂಬದರಲ್ಲಿ ಸಂದೇಹವಿಲ್ಲ. ನಿನ್ನ ಪಾಪರಾಶಿಯು

ನಾಶಹೊಂದಲಿಕ್ಕೆ ಒಂದು ಉಪಾಯವುಂಟು. ಆ ಉಪಾಯದಿಂದ ನೀನು ನಿಜ ವಾಗಿ ಸದ್ಗತಿಹೊಂದುವೆ."

"ಮಹಾತ್ಮರೆ, ಆ ಉಪಾಯವಾವುದು?" ವನರಾಜನು ಉತ್ಕಂಠೆಯಿಂದ ಕೇಳಿದನು.

"ಅನೇಕ ಜನರನ್ನು ಹಿಂಸಿಸಿ ನೀನು ಅಮೋಘವಾದ ಧನಸಂಚಯ ಮಾಡಿ ರುವೆ. ಆ ಧನವು ದೀನ ದುರ್ಬಲರ ಹಿತಕ್ಕಾಗಿಯೂ ದೇಶಕಾರ್ಯಕ್ಕಾಗಿಯೂ ವ್ಯಯವಾದರೆ ನಿನಗೆ ಸದ್ಗತಿಯಾಗುವದು. ಈ ವಿಷಯದಲ್ಲಿ ನಿನ್ನ ಅಭಿಪ್ರಾಯ ವೇನು?"

"ಸ್ವಾಮಿಮಹಾರಾಜರೆ!" ವನರಾಜನು ಆನಂದೋದ್ರೇಕದಿಂದ—"ನಿಮ್ಮ ಅಭಿಪ್ರಾಯಕ್ಕೆ ನಾನು ಹೊರತಿಲ್ಲ ನಾನು ಸಂಗ್ರಹಿಸಿದ ಧನವು ಲೋಕೋಪಕಾರ ಕ್ಕಾಗಿ ವ್ಯಯವಾದರೆ ನನಗೆ ಪರಮಾನಂದವಾಗುವದು. ಜನರನ್ನು ಹಿಂಸಿಸಿ ಪರ್ವತ ಪ್ರಾಯವಾಗಿ ಧನಸಂಗ್ರಹ ಮಾಡುವದರಲ್ಲಿಯೇ ಜೀವನದ ಇತ್ಯರ್ಥವಿರುವದಿಲ್ಲೆಂದು ಮೊದಲೇ ಮನವರಿಕೆಯಾಗಿದ್ದರೆ, ಕೊಲೆ-ಸುಲಿಗೆಗಳಂತಹ ಚಾಂಡಾಲ ಕೃತ್ಯಗಳಿಗೆ ಕೈಹಾಕುತ್ತಿದ್ದಿಲ್ಲ. ಮಹಾತ್ಮರೆ, ದ್ರವ್ಯಸಂಗ್ರಹ ಮಾಡುವದೇ ಆಗಿನ ನನ್ನ ಮುಖ್ಯ ಧ್ಯೇಯವಾಗಿತ್ತು; ಹೇರಳವಾದ ಧನದ ಪ್ರಯೋಜನವೇನೆಂಬದರ ಆಲೋಚನೆಯು ನನ್ನಲ್ಲಿ ಯಾಕೆ ಹುಟ್ಟಬಾರದಾಗಿತ್ತು?"

"ವನರಾಜ, ಎಲ್ಲರಲ್ಲಿ ಅಂತಹ ಸದಸದ್ವಿವೇಕಬುದ್ಧಿಯು ಸದೈವ ಜಾಗ್ರತ ವಾಗಿದ್ದರೆ, ಲೋಕದಲ್ಲಿ ಅನೀತಿ ಅತ್ಯಾಚಾರಗಳು ಘಟಿಸುತ್ತಿರಲಿಲ್ಲ. ಧನದಿಂದ ಮನುಷ್ಯನ ಉದರಪೋಷಣೆಯಾಗುವದು; ಅನೇಕ ಬಗೆಯ ವಿಲಾಸಗಳನ್ನು ಉಪ ಭೋಗಿಸಲಿಕ್ಕೆ ಧನವು ಅನುಕೂಲವಾಗುವದು. ಇಷ್ಟೇ ಆಕುಂಚಿತ ಧ್ಯೇಯವನ್ನು ಮನಸ್ಸಿನಲ್ಲಿಟ್ಟುಕೊಂಡು ಮನುಷ್ಯನು ಧನಸಂಗ್ರಹ ಮಾಡುವದಕ್ಕೆ ಪ್ರಾರಂಭಿ ಸುವನು. ಧನಸಂಚಯವಾಗುತ್ತ ಹೋದಹಾಗೆ ಹೆಚ್ಚು ಧನಸಂಗ್ರಹ ಮಾಡುವ ಇಚ್ಛೆಯೂ ಪ್ರಬಲವಾಗುತ್ತ ಹೋಗುವದು. ಪರ್ವತಪ್ರಾಯವಾದ ಧನರಾಶಿಯು ಸ್ವಾಧೀನದಲ್ಲಿದ್ದರೂ ಅವನ ಮನಸ್ಸು ದಣಿದಿರುವದಿಲ್ಲ. ತನ್ನಲ್ಲಿದ್ದ ಧನವು ಮತ್ತಿಷ್ಟು ಬೆಳವಣಿಗೆ ಹೊಂದಬೇಕೆಂದು ಅವನು ದಣಿಯುತ್ತಿರುತ್ತಾನೆ. ವನ ರಾಜ, ಧನದ ವ್ಯಾಮೋಹವು ಅಂತಹ ಕೆಟ್ಟದಾಗಿರುವದು. ಮನುಷ್ಯನು ನಿರ್ಧನ ನಾಗಿರುವದರಿಂದಲೇ ಹೆಚ್ಚಿನ ಸುಖಿಯಾಗುವನು. ನಿರ್ಧನತ್ವದಿಂದ ನಿರ್ಲೋಭ ತ್ವವು ಉತ್ಪನ್ನವಾಗುವದು. ಮನುಷ್ಯನು ನಿರ್ಲೋಭಿಯಾದರೆ ಅವನ ಮನಸ್ಸು ಪ್ರಸನ್ನವಿರುವದು. ಪ್ರಸನ್ನಮನಸ್ಕನಾದವನ ಆತ್ಮಶಕ್ತಿಯು ಪ್ರಬಲವಾಗಿ ಕೊನೆಗೆ ಅವನು ಯೋಗಯೋಗೇಶ್ವರನಾಗುವನು. ಧನವು ದೊಡ್ಡ ಹಗೆಯಾಗಿರುವದು. ಅದು ಮಿತ್ರರೂಪದಿಂದಿದ್ದು ಮನುಷ್ಯನನ್ನು ಅಧೋಗತಿಗೆ ಮುಟ್ಟಿಸಲಿಕ್ಕೆ ಸಾಧನ ವಾಗುವಂತಹದಿರುವದು. ವನರಾಜ, ಮರಣ ಸಮಯದಲ್ಲಾದರೂ ನಿನ್ನ

ಮನಸ್ಸು ನಿರ್ಮಲವೂ ವಿವೇಕಯುಕ್ತವೂ ಆದದ್ದನ್ನು ನೋಡಿ ಪರಮಾನಂದ ವಾಗಿದೆ.''

"ಪ್ರಭೋ! ಸತ್ಸಮಾಗಮ ಪ್ರಭಾವವು ಇಂದು ಫಲದಾಯಿಯಾಯಿತು. ನನ್ನಲ್ಲಿರುವ ಧನದ ವ್ಯವಸ್ಥೆಯನ್ನು ನಿಮ್ಮ ಮನಸ್ಸಿಗೆ ಬಂದಹಾಗೆ ಮಾಡಬಹುದು. ಅದರ ಮೇಲೆ ನನ್ನ ಸ್ವಾಮಿತ್ವವಿಲ್ಲ. ನನ್ನ ಎಲ್ಲ ಸ್ವತ್ತಿಗೆ ನೀವೇ ಒಡೆಯರು.''

"ವನರಾಜ, ನಿನ್ನಲ್ಲಿಯ ಧನಕ್ಕೆ ಒಡೆಯನಾಗಲು ನಾನು ಇಚ್ಛಿಸುವದಿಲ್ಲ. ಸರ್ವಸಂಗಪರಿತ್ಯಾಗಿಯಾದ ನನಗೆ ಅದರ ನೆರಳು ಸಹಬೇಡ. ಈ ಧನವನ್ನು ನಾನು ಸ್ವಾಧೀನಕ್ಕೆ ತೆಗೆದುಕೊಂಡರೆ, ನನ್ನ ಇಷ್ಟು ದಿನದ ತಪಸ್ಸಿನ ಫಲವು ನಾಶ ಹೊಂದಬಹುದು. ಲಂಗೋಟಿಯ ಪ್ರಪಂಚ ಬೆಳೆದಂತೆ ನನ್ನ ಅವಸ್ಥೆಯಾದೀತು."

"ಸ್ವಾಮಿಗಳೆ, ನೀವು ಹೀಗೆ ನುಡಿದರೆ, ಮುಂದೆ ಗತಿಯೇನು? ನನ್ನಲ್ಲಿಯ ಧನವು ಸತ್ಕಾರ್ಯಕ್ಕೆ ವ್ಯಯವಾಗಬೇಕಾದರೆ ನಿಮ್ಮಂತಹ ನಿರ್ಲೋಭಿಗಳ ಆವಶ್ಯಕತೆಯುಂಟು. ಸಾಮಾನ್ಯ ಜನರ ವಶದಲ್ಲಿ ಧನವನ್ನು ಕೊಟ್ಟರೆ, ಅವರು ಅದನ್ನು ತಮ್ಮ ಸುಖವಿಲಾಸಗಳಿಗೆ ವೆಚ್ಚಮಾಡಿ ಬಿಡುವರು. ಹಾಗಾಗರೆ ನನ್ನ ಉದ್ದೇಶವು ಸಫಲವಾದಂತಾಗುವದಿಲ್ಲ. ಉದ್ದೇಶವು ಸಫಲವಾಗದಿದ್ದರೆ ಪಾಪವು ಕ್ಷಾಲನೆ ಹೊಂದುವದಿಲ್ಲ; ಪಾಪಕ್ಷಾಲನೆಯಾಗದೆ ಸದ್ಗತಿಯು ಲಭಿಸುವದಿಲ್ಲ. ಸ್ವಾಮಿನ್, ಈ ವಿಷಯದಲ್ಲಿ ನೀವೇ ಯೋಗ್ಯವಾದ ಉಪಾಯವನ್ನು ಹೇಳಿರಿ. ನಾನು ಸಂಗ್ರಹಿಸಿದ ದ್ರವ್ಯವು ಸತ್ಕಾರ್ಯಕ್ಕೆ ವ್ಯಯವಾಗುವದೆಂಬ ವಿಶ್ವಾಸವು ಹುಟ್ಟಿದರೆ, ನಾನು ಆನಂದದಿಂದ ಪ್ರಾಣಬಿಡುವೆನು''

"ನಿನ್ನ ಕೈಕೆಳಗಿನ ಸರದಾರನಾದ ಈ ವೀರಮಾಣಿಕನ ಸ್ವಭಾವದ ಬಗ್ಗೆ ನಿನ್ನ ಅಭಿಪ್ರಾಯವೇನಿರುವದು?''

"ವೀರಮಾಣಿಕನು ಮಹಾ ಘನವಂತನಿರುವನು. ಇವನು ಸದ್ಗುಣನಿಧಿಯಾಗಿರುವದರಿಂದ ಸರ್ವಾಧಿಕಾರಿಯನ್ನಾಗಿ ಮಾಡಿದೆನು. ಮಹಾರಾಜರೆ, ಇವನ ಕಡೆಗೆ ನನ್ನ ಧನವನ್ನೊಪ್ಪಿಸಬೇಕೆನ್ನುವಿರಾ?''

"ನಿನ್ನ ವಿಶ್ವಾಸವಿದ್ದರೆ ಒಪ್ಪಿಸಬಹುದು''

"ಏನೂ ಅಡ್ಡಿಯಿಲ್ಲ. ನನ್ನ ಕೈಕೆಳಗೆ ಎಂಟುನೂರು ಜನ ಸೈನಿಕರಿರುವರು. ಅವರನ್ನಾದರೂ ವೀರಮಾಣಿಕನ ಸ್ವಾಧೀನಕ್ಕೆ ಕೊಟ್ಟಿರುವೆನು. ವೀರಮಾಣಿಕ, ನನ್ನ ಎಲ್ಲ ಸ್ವತ್ತಿಗೆ ನೀನೇ ಒಡೆಯನು.''

"ವನರಾಜರೇ, ನಿಮ್ಮ ಅಭಿಪ್ರಾಯದಂತೆ ನಿಮ್ಮ ಎಲ್ಲ ಸ್ವತ್ತನ್ನು ಸ್ವಾಧೀನಕ್ಕೆ ತೆಗೆದುಕೊಳ್ಳುವೆನು. ಸ್ವಾಮಿಮಹಾರಾಜರು ಹಾಗು ಕಾಲಿಮಾತೆ ಇವರನ್ನು ಸ್ಮರಿಸಿ ಪ್ರತಿಜ್ಞೆ ಮಾಡುವದೇನಂದರೆ, ನಿಮ್ಮ ಸ್ವತ್ತನ್ನು ದೀನ-ದುರ್ಬಲರ ಹಿತಕ್ಕಾಗಿಯೂ ಸ್ವದೇಶ ಕಾರ್ಯಕ್ಕಾಗಿಯೂ ವೆಚ್ಚಮಾಡುವೆನು.''

"ಮಹದಾನಂದ! ಮಹದಾನಂದ!" ವನರಾಜನು ಆನಂದೋದ್ಗಾರ ತೆಗೆದು

ಸ್ವಾಮಿಮಹಾರಾಜರನ್ನು ಕುರಿತು:—"ಪ್ರಭುಗಳೇ, ವೀರಮಾಣಿಕನ ಮಾತುಗಳಿಂದ ನನ್ನ ಮನಸ್ಸು ಸಮಾಧಾನಗೊಂಡಿರುವದು. ನೀವು ಇವನಿಗೆ ಮಾರ್ಗದರ್ಶಕರಾಗಿರಬೇಕೆಂದು ಪ್ರಾರ್ಥಿಸುವೆನು. ನಾನು ವೀರಮಾಣಿಕನಿಂದ ಸೆಳೆದುಕೊಂಡ ಧನವನ್ನು ಬೇರೆಯಾಗಿರಿಸಿರುವೆನು. ಇವನು ಆ ಧನವನ್ನು ತನ್ನ ಉಪಜೀವಿಕೆಗೆ ವೆಚ್ಚಮಾಡಲಿ."

"ವನರಾಜ, ನೀನು ಚಿಂತಿಸಬೇಡ. ನಿನ್ನ ಅಭಿಪ್ರಾಯದಂತೆ ಎಲ್ಲ ವಿಧದ ವ್ಯವಸ್ಥೆ ಮಾಡುವೆನು. ವೀರಮಾಣಿಕನು ಘನವಂತನಿರುವನು. ಇವನು ಮೊದಲು ವಂಗೇಶ್ವರನಲ್ಲಿ ಸೇನಾಪತಿಯಾಗಿದ್ದನು. ಇವನ ನಿಜವಾದ ಹೆಸರು ಕೃಷ್ಣಲಾಲನೆಂದಿರುವದು. ಅರುಣಕುಮಾರಿಯು ಇವನ ವಾತ್ಸಲ್ಯದ ಕುವರಿಯು."

ಅಜಿತಾನಂದರು ಹೀಗೆ ಹೇಳಿದ ಕೂಡಲೆ ವನರಾಜನು ವಿಸ್ಮಯದಿಂದ:— "ಸ್ವಾಮಿಮಹಾರಾಜರೆ, ಈ ವೀರಮಾಣಿಕನು ವಂಗೇಶ್ವರನ ಸೇನಾಪತಿಯಾದ ಕೃಷ್ಣಲಾಲನೆ? ಅರುಣಕುಮಾರಿಯು ಇವನ ಪುತ್ರಿಯೇ? ಪ್ರಭುಗಳೇ, ನೀವು ನಿಜವಾದ ಸಂಗತಿಯನ್ನು ಇಷ್ಟು ದಿನಗಳವರೆಗೆ ಬಚ್ಚಿಟ್ಟ ಉದ್ದೇಶವೇನು?"

"ಕೃಷ್ಣಲಾಲನ ಪರಿಚಯವನ್ನು ಮೊದಲೇ ಮಾಡಿಕೊಟ್ಟಿದ್ದರೆ, ನೀನು ಅವನ ಕೈಯಲ್ಲಿ ಸೈನ್ಯವನ್ನು ಕೊಡುತ್ತಿದ್ದಿಲ್ಲ. ಅವನನ್ನು ಸೆರೆಯಿಂದ ಬಿಡುಗಡೆ ಮಾಡುತ್ತಿದ್ದಿಲ್ಲ. ಆಗಿನ ನಿನ್ನ ಮನಃಸ್ಥಿತಿಯೇ ಹಾಗಿತ್ತು. ಅಂತೆಯೇ ಕೃಷ್ಣಲಾಲನ ವೃತ್ತಾಂತವನ್ನು ಗುಪ್ತವಾಗಿರಿಸಬೇಕಾಯಿತು."

'ಮಹಾತ್ಮರೆ, ಅರುಣಕುಮಾರಿಯು ಒಳ್ಳೆಯ ಗುಣವತಿಯಾಗಿರುವಳು. ರೂಪದಲ್ಲಂತು ಸ್ವರ್ಗಾಂಗನೆಯರನ್ನು ಮೀರಿರುವಳು. ಶ್ರೇಷ್ಠನಾದ ವರನೊಡನೆ ಇವಳ ವಿವಾಹ ಮಾಡಿರಿ." ಎಂದು ವನರಾಜನು ನುಡಿಯುತ್ತಿರಲು, ವಿಷಪ್ರಭಾವದಿಂದ ಅವನ ಹೃದಯದಲ್ಲಿ ಉರಿಯು ಹೆಚ್ಚಾಯಿತು. ಅವನು ಹಾಸುಗೆಯ ಮೇಲೆ ಹೊರಳಾಡತೊಡಗಿದನು. ಆಗ ಅವನು ಅಜಿತಾನಂದರನ್ನು ಕುರಿತು—"ನನ್ನ ಹೊಟ್ಟೆಯಲ್ಲಿ ಸಂಕಟವು ಹೆಚ್ಚಾಗತೊಡಗಿತು. ಸ್ವಾಮಿಮಹಾರಾಜರೆ, ಬರುತ್ತೇನೆ; ಆಶೀರ್ವಾದ ಕೊಡಿರಿ."

ಅಜಿತಾನಂದರು ವನರಾಜನ ತಲೆಯ ಮೇಲೆ ಹಸ್ತವನ್ನಿರಿಸಿದರು. ಆಗ ವನರಾಜನು—"ಅರುಣಕುಮಾರಿ, ಬರುತ್ತೇನೆ! ಕೃಷ್ಣಲಾಲ, ಬರುತ್ತೇನೆ! ಸ್ವಾಮಿಮಹಾರಾಜರೆ, ಬರುತ್ತೇನೆ! ಅಜಿತಾನಂದ! ಅಜಿತಾನಂದ! ಜಗದಂಬ! ಜಗದಂಬ!!"

ವನರಾಜನ ಪ್ರಾಣಜ್ಯೋತಿಯು ನೊಂದಿತು! ಮುಂದೆ ಸ್ವಲ್ಪ ವೇಳೆಯಲ್ಲಿಯೇ ಅವನ ಕಲೇವರಕ್ಕೆ ಅಗ್ನಿಸಂಸ್ಕಾರವಾಗಿ ಹೋಯಿತು!



# ನಿ ರಾ ಶೆ.



ಕೃಷ್ಣಲಾಲನು ವನರಾಜನ ಅತುಲವಾದ ಸಂಪತ್ತಿಗೆ ಒಡೆಯನಾದನು. ಎಂಟುನೂರು ಜನ ಸುಶಿಕ್ಷಿತ ಸೈನಿಕರು ಅವನ ಆಜ್ಞೆಯಂತೆ ನಡೆಯಲಿಕ್ಕೆ ಸಿದ್ಧರಾದರು. ವನರಾಜನ ಅಂತಿಮ ಇಚ್ಛೆಯ ಮೇರೆಗೆ ಅವನ ಧನವನ್ನು ಪರೋಪಕಾರಾರ್ಥವಾಗಿ ವ್ಯಯಮಾಡಬೇಕೆಂದು ಕೃಷ್ಣಲಾಲನು ನಿಶ್ಚಯಿಸಿಕೊಂಡಿದ್ದನು. ನಿರಪರಾಧಿಗಳ ರಕ್ತವನ್ನು ಕಾಲುವೆಯಾಗಿ ಹರಿಸಿ ಸಂಪಾದಿಸಿದ ಧನದಲ್ಲಿ ಒಂದು ಕಪರ್ದಿಯನ್ನಾದರೂ ಸ್ವಸುಖಕ್ಕಾಗಿ ತೆಗೆದುಕೊಳ್ಳಬಾರದೆಂದು ಅವನ ಸಂಕಲ್ಪವಿತ್ತು. ಗುಪ್ತಪುರಿಯಂತಹ ವನಪ್ರದೇಶದಲ್ಲಿ ಕುಳಿತು ಬಿಟ್ಟರೆ ತನ್ನ ಆಯುಷ್ಯವು ಸಾರ್ಥಕವಾಗಲಾರದೆಂದೂ, ಅರುಣಕುಮಾರಿಯ ಜೀವನವು ಸುಖಮಯವಾಗಲಾರದೆಂದೂ ತಿಳಿದು, ಅವನು ಅಲ್ಲಿಯ ಎಲ್ಲ ಕೆಲಸಗಳ ಭಾರವನ್ನು ಅಜಿತಾನಂದರ ಕಡೆಗೊಪ್ಪಿಸಿ ತೀರ್ಥಯಾತ್ರೆಗಾಗಿ ತೆರಳಿದನು.

ಕೃಷ್ಣಲಾಲನು ಅರುಣಕುಮಾರಿಯನ್ನು ಸಂಗಡ ಕರೆದುಕೊಂಡು ಜಗನ್ನಾಥ ಕ್ಷೇತ್ರದಲ್ಲಿ ಕೆಲವು ದಿನಗಳವರೆಗೆ ವಾಸವಾಗಿದ್ದನು. ಅನಂತರದಲ್ಲಿ ಗಯಾ, ಕಾಶಿ, ವೃಂದಾವನ, ಪುಷ್ಕರ ಮೊದಲಾದ ತೀರ್ಥ-ಯಾತ್ರೆಗಳನ್ನು ಮಾಡುತ್ತ ಪ್ರಯಾಗ ಕ್ಷೇತ್ರಕ್ಕೆ ಬಂದನು. ಪ್ರಯಾಗವು ವಾಸಸ್ಥಾನಕ್ಕೆ ಯೋಗ್ಯವೆಂದು ಅವನ ಮನವರಿಕೆಯಾದ್ದರಿಂದ ಅಲ್ಲಿ ಒಂದು ಮನೆಯನ್ನು ಕೊಂಡು ಅರುಣಕುಮಾರಿಯೊಡನೆ ಇರತೊಡಗಿದನು.

ಕೃಷ್ಣಲಾಲನು ಪ್ರಯಾಗಕ್ಷೇತ್ರದಲ್ಲ ವಾಸಮಾಡಹತ್ತಿದಂದಿನಿಂದ ಅವನ ಕೀರ್ತಿಯು ನಾಲ್ಕೂಕಡೆಗೆ ಪಸರಿಸಿತು. ಅಲ್ಲಿ ಅವನು ಎಷ್ಟೋ ಅನ್ನಛತ್ರಗಳನ್ನು ನಡೆಯಿಸತೊಡಗಿದನು ದೀನಜನರಿಗೆ ಅನ್ನವೂ, ಅನ್ನಸಾಮುಗ್ರಿಗಳೂ, ವಸ್ತ್ರಗಳೂ, ಧನವೂ ದೊರೆಯತೊಡಗಿದವು. ವನರಾಜನ ಇಚ್ಛೆಯ ಹಾಗು ಅಜಿತಾನಂದರ ಆಜ್ಞೆಯಮೇರೆಗೆ ದ್ರವ್ಯದ ವಿನಿಯೋಗವು ಸತ್ಕಾರ್ಯಕ್ಕಾಗಿ ಆಗತೊಡಗಿದ ಮೇಲೆ ಕೃಷ್ಣಲಾಲನಿಗೆ ಮನಶ್ಶಾಂತಿಯು ಲಭಿಸಿತು. ಈಗ ಅವನಿಗೆ ಅರುಣಕುಮಾರಿಯ ವಿವಾಹದ ಹೊರತು, ಮಿಕ್ಕ ಯಾವ ವಿಷಯದ ಚಿಂತೆಯೂ ಇದ್ದಿಲ್ಲ. ಅವನು ತನ್ನ ಮಗಳಿಗೆ ಯೋಗ್ಯನಾದ ವರನು ಎಂದು ದೊರೆತಾನೆಂದು ಚಿಂತಿಸತೊಡಗಿದ್ದನು. ನಡುನಡುವೆ ಅಜಿತಾನಂದರ ಬಳಿಗೆ ಹೋಗಿ ಮಗಳ ವಿವಾಹವೆಂದಾಗುವದೆಂಬದರ ಬಗ್ಗೆ ವಿಚಾರಿಸುತ್ತಿದ್ದನು.

ಅರುಣಕುಮಾರಿಯು ಈಗ ಹದಿನೆಂಟು ವರ್ಷದವಳಾಗಿದ್ದಳು. ಅವಳು ಅನುಪಮಲಾವಣ್ಯಮಯಿಯಿದ್ದರೂ, ಯಾರೂ ಅವಳನ್ನು ಸ್ವೀಕರಿಸಲಿಕ್ಕೆ ಒಪ್ಪುತ್ತಿರಲಿಲ್ಲ. ಕುಲ, ಗೋತ್ರ, ಜಾತಿ, ವಂಶ ವೃತ್ತಿಗಳನ್ನು ವಿಚಾರಿಸಿದೊಡನೆಯೆ,

ಕನ್ಯಾಪೇಕ್ಷಿಗಳಾದವರು ಭಗ್ನಮನೋರಥರಾಗುತ್ತಿದ್ದರು. ಸಾಮಾನ್ಯ ಮನೆತನದ ರಜಪುತ ವರನು ಸಹ ತನ್ನ ಮಗಳಿಗೆ ದೊರೆಯದಿರುವಾಗ ರಾಜಮನೆತನದವನು ಅವಳನ್ನು ಹೇಗೆ ವರಿಸಬೇಕೆಂದು ಕೃಷ್ಣಲಾಲನು ಸಂದೇಹಕ್ಕೊಳಗಾಗಿದ್ದನು. ಅಜಿತಾನಂದರ ಭವಿಷ್ಯವು ತೀರ ಸುಳ್ಳಿರುವದೆಂದು ಅವನು ಗಟ್ಟಿಯಾಗಿ ತಿಳಿದನು. ಕುಲತ್ಯಾಗಿನಿಯಿಂದ ಜನಿಸಿದ ಸಂತಾನವನ್ನು ಸತ್ಕುಲಪ್ರಜಾತರು ಎಂದೂ ಸ್ವೀಕರಿಸಲಾರರೆಂದು ತಿಳಿದೊಡನೆಯೆ, ಅವನ ಹೃದಯಕ್ಕೆ ಬರೆಕೊಟ್ಟಂತಾಗುತ್ತಿತ್ತು. ಕುಲವೃತ್ತಾಂತವನ್ನು ಬಚ್ಚಿಟ್ಟಿದ್ದರೆ ಕುಲವಂತ ರಜಪುತನಿಗೆ ಅರುಣಕುಮಾರಿಯನ್ನು ಲಗ್ನಮಾಡಿಕೊಡಲಿಕ್ಕೆ ಕೃಷ್ಣಲಾಲನಿಗೆ ಸಾಧ್ಯವಾಗುತ್ತಿತ್ತು; ಆದರೆ ಹಾಗೆ ಕಪಟಾಚರಣೆ ಮಾಡಿದರೆ ಪೂರ್ವಾರ್ಜಿತ ಪಾತಕದಲ್ಲಿ ಹೊಸಪಾತಕ ಬೆರೆಯಿಸಿದಂತಾಗುವದೆಂದು ತಿಳಿದು, ಅವನು ತನ್ನ ನಿಜವೃತ್ತವನ್ನು ಕನ್ಯಾಪೇಕ್ಷಿಗಳಿಗೆ ತಿಳಿಸುತ್ತಿದ್ದನು. ಮುಂದೆ ಕುಲವೃತ್ತವು ಬೈಲಿಗೆ ಬಿದ್ದರೆ ಸಂಸಾರವು ವಿರಸವಾಗಿ ಹೋಗುವದೆಂಬ ಭಯದಿಂದ ಅರುಣಳಾದರೂ ಕಪಟಾಚರಣೆಯಿಂದ ಕುಲವಂತ ರಜಪುತನನ್ನು ವರಿಸಲು ಮನಸ್ಸು ಮಾಡಿದ್ದಿಲ್ಲ. ತಾನು ವೇಶ್ಯಾಕುಲದ ಸ್ತ್ರೀಯಿಂದ ಜನಿಸಿದ್ದರೂ, ರಜಪುತ ಕನ್ನಿಕೆಯರಿಗೆ ಸಮವಾದ ಯೋಗ್ಯತೆಯುಳ್ಳವಳಿರುವಳೆಂಬದನ್ನು ಅವಳು ಜನರಿಗೆ ತಿಳಿಸಿ ಹೇಳುತ್ತಿದ್ದಳು; ಆದರೆ ಧರ್ಮದ ಅಂಧಶ್ರದ್ಧೆಯುಳ್ಳ ಜನಾಂಗವು ಅವಳನ್ನು ಸತ್ಕುಲ ಪ್ರಜಾತಳೆಂದು ಗಣಿಸಲಿಕ್ಕೆ ಸಿದ್ಧವಾಗಲಿಲ್ಲ. ಆಗ ಅವಳು ತನ್ನ ಜೀವದಲ್ಲಿ ವಿವಾಹವಾಗುವ ಯೋಗವಿರಲಿಕ್ಕಿಲ್ಲೆಂದು ವ್ಯಸನಪಡತೊಡಗಿದಳು. ವನಪುಷ್ಪವು ವನದಲ್ಲಿಯೇ ಅರಳಿ ಅಲ್ಲಿಯೇ ಹೇಗೆ ನಾಶವಾಗುವದೋ, ಅದರಂತೆ ತನ್ನ ಅವಸ್ಥೆಯಾದರೂ ಆಗುವದೆಂದು ಅವಳಿಗೆ ಚನ್ನಾಗಿ ತಿಳಿಯಿತು. ಅಜಿತಾನಂದರ ಭವಿಷ್ಯವಾಣಿಯು ನಿರರ್ಥಕವಾದದ್ದೆಂದು ಕೃಷ್ಣಲಾಲನು ತಿಳಿದುಕೊಂಡಂತೆ ಅವಳೂ ತಿಳಿದಳು.

ಇತ್ತೀಚೆಗೆ ಅರುಣಕುಮಾರಿಯ ದಿನಚರ್ಯೆಯಲ್ಲಿ ಅಭ್ಯಂತರವುಂಟಾಗಿತ್ತು. ಅವಳು ಈಗ ಬೇಟೆಗೆ ಹೋಗುತ್ತಿರಲಿಲ್ಲ. ಶಸ್ತ್ರಾಸ್ತ್ರಗಳ ಗೊಡವೆಯನ್ನು ಬಿಟ್ಟು ಬಿಟ್ಟಿದ್ದಳು. ಅವಳು ಯಾವಾಗಲೂ ಏಕಾಂತದಲ್ಲಿದ್ದು ಸಾವಿತ್ರಿ, ಸೀತಾ, ದಮಯಂತಿ, ಅನಸೂಯಾ, ಶಕುಂತಲೆ ಮೊದಲಾದ ಸಾಧ್ವೀಸ್ತ್ರೀಯರ ಪಾವನತರ ಚರಿತ್ರಗಳನ್ನೋದುತ್ತಿದ್ದಳು. ಭಾರತ, ರಾಮಾಯಣ, ಭಾಗವತಾದಿ ಗ್ರಂಥಗಳನ್ನೋದಿ ಮನಸ್ಸನ್ನು ನಿಶ್ಚಲಗೊಳಿಸಲಿಕ್ಕೆ ಅವಳು ಬಹುವಿಧವಾಗಿ ಯತ್ನಿಸುತ್ತಿದ್ದಳು. ತನ್ನ ವಿವಾಹವಾಗುವ ಯೋಗವಿಲ್ಲೆಂದ ಗ್ರಹಿಕೆಯಾಗಿ ಹೋದದ್ದರಿಂದ, ಅವಳು ಪಾರಮಾರ್ಥ ಮಾರ್ಗವನ್ನವಲಂಬಿಸತೊಡಗಿದ್ದಳು. ಅನಾಥರ ಹಾಗು ದೀನಜನರ ಸೇವೆ ಮಾಡುತ್ತ ಆಯುಷ್ಯ ಕಳೆಯಬೇಕೆಂದು ಅವಳ ನಿರ್ಧಾರವಾಗಿತ್ತು. ತಂದೆಯಿಂದ ನಡೆಯಿಸಲ್ಪಟ್ಟ ಸದಾವರ್ತಗಳ ವ್ಯವಸ್ಥೆಯನ್ನು ಅವಳು ಅತ್ಯುತ್ತಮರೀತಿಯಿಂದ ಮಾಡುತ್ತಿದ್ದಳು.

ಅರುಣಕುಮಾರಿಯು ವಿವಾಹದ ವಿಷಯವಾಗಿ ನಿರಾಶೆಹೊಂದಿದ್ದಳೇನೋ ನಿಜವು; ಆದರೆ ಕೃಷ್ಣಲಾಲನು ಅವಳ ವಿವಾಹವನ್ನು ಮಾಡಬೇಕೆಂಬ ವಿಚಾರವನ್ನು ಬಿಟ್ಟಿರಲಿಲ್ಲ. ಅವನು ಪ್ರಯಾಗದಲ್ಲೆಲ್ಲ ವಿಖ್ಯಾತನಾಗಿದ್ದುದರಿಂದ, ಅನೇಕ ಜನ ರಜಪುತರಿಗೆ ಪರಿಚಿತನಾಗಿದ್ದನು ರಾಜಮನೆತನದ ವರನು ದೊರೆಯದಿದ್ದರೂ ಸಾಮಾನ್ಯ ಮನೆತನದವನಾದರೂ ದೊರೆಯುಬಹುದೆಂದು ಅವನು ವಿಶ್ವಾಸಹೊಂದಿದ್ದನು; ಆದರೆ ಅವನ ಕಲ್ಪನೆಯು ನಿರರ್ಥಕವಾಯಿತು. ಅನುಪಮ ಲಾವಣ್ಯಮಯಿಯಾದ ಅರುಣಕುಮಾರಿಯನ್ನು ವರಿಸುವದಕ್ಕೆ ಬಹುಜನ ರಜಪುತ ತರುಣರು ಆತುರಗೊಂಡಿದ್ದರೂ, ಧರ್ಮದ ಕಟ್ಟಳೆಗೆ ಕಟ್ಟು ಬಿದ್ದವರಾದ ಅವರು ಮನೋನಿಗ್ರಹ ಮಾಡಿಕೊಂಡು ತಟಸ್ಥವೃತ್ತಿಯನ್ನು ಹೊಂದಿದರು. ತನ್ನ ಮನೆತನವು ಪವಿತ್ರವಿರುವದೆಂಬದರ ಬಗ್ಗೆ ಕೃಷ್ಣಲಾಲನು ಬಹು ವಿಧವಾಗಿ ಸಿದ್ಧಮಾಡಿ ತೋರಿಸುತ್ತಿದ್ದನು; ಆದರೆ ವೇಶ್ಯಾಕುಲದ ಯುವತಿಯಿಂದ ಜನಿಸಿದ ಅರುಣಳು ಎಂದಿಗೂ ಪವಿತ್ರತಮವಾದ ರಜಪುತ ಕುಮಾರಿಯೆನಿಸಿಕೊಳ್ಳಲಾರಳೆಂದು ಸನಾತನ ಧರ್ಮ ಪಂಡಿತರ ಅಭಿಪ್ರಾಯವಾದ್ದರಿಂದ ಅವನು ದುಃಖನೈರಾಶ್ಯಗಳಿಂದ ತಳಮಳಿಸತೊಡಗಿದ್ದನು. ಬರಬರುತ್ತ ಅವನು ತೀರ ಉದಾಸೀನನಾದನು. ಯಾವ ವಿಷಯಗಳ ಕಡೆಗೂ ಅವನ ಮನಸ್ಸು ಹರಿಯದಾಯಿತು. ಅರುಣಕುಮಾರಿಯ ಅನುಪಮ ಲಾವಣ್ಯ, ಏರಿಕೆಯ ತಾರುಣ್ಯ, ಮೊದಲಾದವುಗಳು ವ್ಯರ್ಥವಾಗುವವೆಂಬದನ್ನು ನೆನೆಸಿದ ಕೂಡಲೆ, ಅವನ ಹೃದಯಕ್ಕೆ ಬಲವಾದ ಗಾಯವಾಗುತ್ತಿತ್ತು. ಅವನ ಕರುಣಾಜನಕ ಮನಃಸ್ಥಿತಿಯು ಪಡಿಕಟ್ಟು ನೋಡಿದರೆ ಯಾರಿಗಾದರೂ ಕ್ಲೇಶವಾಗುತ್ತಿತ್ತು.

ಯುಕ್ತಿಪ್ರಯುಕ್ತಿಗಳಿಂದ ಅರುಣಕುಮಾರಿಗೆ ಕುಲೀನ ರಜಪುತ ತರುಣನನ್ನು ಗಂಟು ಹಾಕಬೇಕೆಂದು ಕೃಷ್ಣಲಾಲನ ಸಂಕಲ್ಪವಿತ್ತು. ಅವನು ನಾನಾ ಪ್ರಕಾರವಾಗಿ ವಿಚಾರಮಾಡುತ್ತಿರುವಾಗ ಒಂದು ವಿಧದ ಆಲೋಚನೆಯು ಹೊಳೆಯಿತು. ಕೂಡಲೆ ಅವನು ಅರುಣಕುಮಾರಿಯ ಕೋಣೆಗೆ ಬಂದನು. ಆಗ ಅರುಣಳು ಶಾಕುಂತಲ ನಾಟಕವನ್ನೋದುತ್ತ ಕುಳಿತಿದ್ದಳು. ಶಕುಂತಲೆ ದುಷ್ಯಂತರ ಪ್ರೇಮಮೇಲನ ಪ್ರಸಂಗವನ್ನು ಓದಲಾರಂಭಿಸಿದ್ದರಿಂದ ಅವಳು ಆ ವಿಷಯದಲ್ಲ ತಲ್ಲೀನತೆ ಹೊಂದಿದ್ದಳು. ಆದ್ದರಿಂದ ಅವಳಿಗೆ ತಂದೆಯು ಆಗಮನದ ಸುದ್ದಿಯು ಗೊತ್ತಾಗಿದ್ದಿಲ್ಲ. ಕೃಷ್ಣಲಾಲನು ಕೆಲವು ವೇಳೆಯ ವರೆಗೆ ಮಗಳ ಸಮ್ಮುಖದಲ್ಲಿ ಮೌನವಾಗಿಯೇ ನಿಂತಿದ್ದನು. ಎಷ್ಟು ಹೊತ್ತಾದರೂ ಅರುಣಳು ತನ್ನ ಕಡೆಗೆ ನೋಡದ್ದರಿಂದ ಅವಳ ಏಕಾಗ್ರತೆಯನ್ನು ಭಂಗಗೊಳಿಸಬೇಕೆಂದು ಕೃಷ್ಣಲಾಲನು ಯೋಚಿಸಿ, "ಅರುಣಕುಮಾರಿ, ಯಾವಪುಸ್ತಕವದು?" ಎಂದು ಪ್ರಶ್ನೆಮಾಡಿದನು.

ಅರುಣಕುಮಾರಿಯು ಮುಖವೆತ್ತಿನೋಡಿ ಕುಳಿತಸ್ಥಳದಿಂದೆದ್ದು-"ಕಾಲಿದಾಸ ಪ್ರಣೀತ ಶಾಕುಂತಲ ನಾಟಕವು."

"ಅಂತೆಯೇ ಇಷ್ಟು ಭಕ್ತಿಯಿಂದ ಓದತೊಡಗಿರುವೆ. ಪ್ರಣಯರಸದ ಪರಾಕಾಷ್ಠೆಯು ಶಾಕುಂತಲದಲ್ಲಿ ಕಂಡುಬರುವದು. ಕುಮಾರಿ, ಪ್ರತ್ಯಕ್ಷವಾದ ಪ್ರಣಯ ರುಚಿಯನ್ನು ಸವಿಯುವ ಭಾಗ್ಯವು ನಿನಗಿಲ್ಲ. ಪ್ರಣಯ ಪಾಠಗಳನ್ನು ಓದಿಯೇ ಕೃತಾರ್ಥಳಾಗಬೇಕಾಗಿದೆ"

ಕಷ್ಣಲಾಲನು ಕ್ಲೇಶಯುಕ್ತಧ್ವನಿಯಿಂದ ಹೀಗೆ ಮಾತಾಡಿದ್ದು ಕೇಳಿ, ಅರುಣ ಕುಮಾರಿಯೂ ದುಃಖಿತಳಾದಳು; ಆದರೂ ಅವಳು ತನ್ನ ಮನೋವಿಕಾರವನ್ನು ವ್ಯಕ್ತಪಡಿಸದೆ—"ಅಪ್ಪಾ, ನನ್ನಸಲುವಾಗಿ ನೀವು ಕೊರಗಬೇಡಿರಿ. ವಿಧಿಯು ನನ್ನ ದೈವದಲ್ಲಿ ವಿವಾಹವನ್ನು ಬರೆದಿಲ್ಲ. ದೈವಾನುಕೂಲವಿಲ್ಲದಿರುವಾಗ ಮನುಷ್ಯನ ಪ್ರಯತ್ನವೇನು ಸಾಗುವದು? ನಾನು ಉತ್ತಮವಾದ ಸಂಸ್ಕೃತಿಯಲ್ಲಿ ಬೆಳೆದಿದ್ದರೂ ಧರ್ಮಾಂಧ ಜನರು ನನ್ನನ್ನು ಹೀನಕುಲೋತ್ಪನ್ನಳೆಂದು ಭಾವಿಸಿರುವರು. ಹೀಗಿದ್ದ ಮೇಲೆ ಉಚ್ಚಕುಲದ ರಜಪುತಮನೆತನವು ದೊರೆಯುವ ಬಗೆ ಹೇಗೆ? ಹೇಗಾದರೂ ವಿವಾಹವಾದರೆ ತೀರಿತೆಂದು ಕುಸಂಸ್ಕೃತಿಯ ಮನುಷ್ಯನನ್ನು ವರಿಸಲಿಕ್ಕೆ ನಾನು ಸಿದ್ಧಳಾಗಲಾರೆನು; ಯಾಕಂದರೆ, ಕೇವಲ ವೈಷಯಿಕವ್ಯಾಮೋಹವೇ ವಿವಾಹದ ಮುಖ್ಯ ಧ್ಯೇಯವೆಂದು ನನ್ನ ಭಾವನೆ ಇರುವದಿಲ್ಲ. ಅಪ್ಪಾ, ವಿವಾಹಕ್ಕಾಗಿ ನಾವು ಇಷ್ಟೇಕೆ ಸಾಹಸ ಮಾಡಬೇಕು. ಆಮರಣವಾಗಿ ಅವಿವಾಹಿತ ಸ್ಥಿತಿಯಲ್ಲಿ ಕಾಲ ಹರಣ ಮಾಡಲಿಕ್ಕೆ ಅಡ್ಡಿಯೇನಿರುವದು? ಪ್ರತಿಭಾಶಾಲಿಯಾದ ರಜಪುತ ವೀರನ ಸಹಧರ್ಮಚಾರಿಣಿಯೆನಿಸಿಕೊಂಡು, ರಾಷ್ಟ್ರಕಾರ್ಯಸಾಧಿನಿಯಾಗಬೇಕೆಂಬ ಮಹತ್ವಾಕಾಂಕ್ಷೆಯು ನನ್ನಲ್ಲಿತ್ತು; ಆದರೆ ಪ್ರಾಪ್ತಪರಿಸ್ಥಿತಿಯಿಂದ ನನ್ನ ಮನೋರಾಜ್ಯವು ಮಣ್ಣುಪಾಲಾಗಿ ಹೋಯಿತು ನನ್ನಂತಹ ಕ್ಷುದ್ರಳಿಂದ ಮಹತ್ಕಾರ್ಯವಾಗಬಾರದೆಂದು ಭಗವದಿಚ್ಛೆ ಇದ್ದರೆ, ಅದಕ್ಕೆ ನಾನೇನು ಮಾಡಲಿ? ನನ್ನ ಜೀವನಕ್ಕೆ ಕಪರ್ದಿಕದ ಬೆಲೆಯು ಸಹ ಇಲ್ಲದಿರುವಾಗ ಜನರ ದೃಷ್ಟಿಕೋನವನ್ನು ಸರಿಪಡಿಸುವದು ಹೇಗೆ ಸಾಧ್ಯವಾಗಬೇಕು? ನೀವು ಇನ್ನು ಮೇಲೆ ನನ್ನ ವಿಷಯವಾಗಿ ಚಿಂತೆಮಾಡಬೇಡಿರಿ. ವರನನ್ನು ಹುಡುಕುವ ಸಾಹಸಕ್ಕೆ ಹೋಗಬೇಡಿರಿ. ಅಜಿತಾನಂದರು ನಿಜವಾಗಿ ಜ್ಞಾನಪೂರ್ಣರಿದ್ದರೆ ಅವರ ಭವಿಷ್ಯವು ನಿಜವಾಗಲಿಕ್ಕೆ ಇನ್ನೂ ಅವಕಾಶವಿರುವದು.'"

"ಅರುಣ!" ಕೃಷ್ಣಲಾಲನು ದೀರ್ಘವಾದ ಬಿಸಿಯುಸಿರು ಬಿಟ್ಟು—"ಇನ್ನೂ ಎಲ್ಲಿಯ ಅವಕಾಶವು? ನೀನು ಈಗಾಗಲೆ ಹದಿನೆಂಟು ವರ್ಷದವಳಾಗಿರುವೆ. ಇನ್ನು ಮೇಲೆ ಅಜಿತಾನಂದರ ಭವಿಷ್ಯದ ಸತ್ಯಾಸತ್ಯಗಳ ಪರೀಕ್ಷೆ ಮಾಡುತ್ತ ಕುಳಿತು ಕೊಳ್ಳಬಾರದೆಂದು ನಾನು ನಿರ್ಧರಿಸಿರುವೆನು.''

"ಹಾಗಾದರೆ ಮುಂದೆ ಏನು ಮಾಡಬೇಕೆನ್ನುವಿರಿ? ಯಾವನೊಬ್ಬ ಹೀನ ಕುಲದ ಹಿಂದುವಿನೊಡನೆ ನನ್ನ ವಿವಾಹ ಮಾಡಬೇಕೆನ್ನುವಿರಾ?'' ಅರುಣಕುಮಾರಿಯು ದುಃಖದಿಂದ ವಿಚಾರಿಸಿದಳು.

"ಕುಮಾರಿ, ನನ್ನ ಆಲೋಚನೆಯು ಈ ಬಗೆಯಾಗಿದ್ದರೆ ನೀನು ಇಷ್ಟು ದಿನಗಳ ವರೆಗೆ ಈಗಿನ ಸ್ಥಿತಿಯಲ್ಲಿ ಉಳಿಯುತ್ತಿರಲಿಲ್ಲ. ನಿನ್ನ ವಿವಾಹವನ್ನು ಉಚ್ಚ ಜ್ಞಾತಿಯ ರಜಪುತನೊಡನೆ ನೆರವೇರಿಸಬೇಕೆಂದು ನನ್ನ ಉತ್ಕಟೇಚ್ಛೆಯುಂಟು."

"ನಿಮ್ಮ ಮನೋದಯವು ಈಡೇರುವಂತಿಲ್ಲವೆಂಬದನ್ನು ಇಷ್ಟು ದಿನಗಳ ಅನುಭವದಿಂದ ತಿಳಿದುಕೊಂಡಿರುವೆನು. ನೀವು ಹಾಗೆ ತಿಳಿದಿಲ್ಲವೇನು?"

"ಎಲ್ಲವೂ ತಿಳಿದಿದೆ. ಇನ್ನೊಂದು ಕೊನೆಯ ಉಪಾಯವುಂಟು."

'ಅದಾವ ಉಪಾಯವು?' ಅರುಣಕುಮಾರಿಯು ಆತುರತೆಯಿಂದ ಕೇಳಿದಳು.

"ನಿನ್ನ ಬಾಲಮಿತ್ರನಾದ ವಿಜಯಲಾಲನು ನಿನ್ನನ್ನು ವರಿಸುವ ಮನಸ್ಸುಳ್ಳವನಾಗಿದ್ದನೆಂದು ನೀನು ಹೇಳಿರುವೆಯಲ್ಲವೆ? ಈಗ ಅವನು ಎಲ್ಲಿರುವನೆಂಬದನ್ನು ಶೋಧಿಸಿ, ಅವನೊಡನೆ ನಿನ್ನ ವಿವಾಹ ಮಾಡಬೇಕೆಂದು ಯೋಚಿಸಿರುವೆನು. ನನ್ನ ಈ ಇಚ್ಛೆಯು ನಿನ್ನ ಮನಸ್ಸಿನ ವಿರುದ್ಧವಿರುವದಿಲ್ಲವಷ್ಟೆ? ಅರುಣಕುಮಾರಿ, ವಿಜಯಲಾಲನು ನಿನ್ನ ಪಾಣಿಗ್ರಹಣ ಮಾಡಲಿಕ್ಕೆ ಎಲ್ಲ ಬಗೆಯಿಂದಲೂ ಯೋಗ್ಯನಿರುವನು."

ಕೃಷ್ಣಲಾಲನ ಮಾತುಗಳನ್ನು ಕೇಳಿ ಅರುಣಕುಮಾರಿಯ ಮನಸ್ಸು ಉದಾಸೀನತೆಹೊಂದಿತು. ವಿಜಯಲಾಲನು ಸದ್ಗುಣಿಯೂ, ಶೂರನೂ, ಚತುರನೂ ಆಗಿದ್ದರೂ, ಅವನನ್ನು ವರಿಸಬೇಕೆಂಬ ವಿಚಾರವು ಅರುಣಳ ಮನಸ್ಸಿನಲ್ಲಿ ಉತ್ಪನ್ನವಾಗಿರಲಿಲ್ಲ. ಅವಳು ವಿಜಯಲಾಲನನ್ನು ಬಂಧುಪ್ರೇಮದಿಂದ ನೋಡುತ್ತಿದ್ದಳು. ವಿಜಯಲಾಲನ ಹೃದಯವು ಪ್ರಣಯಾತುರವಾದದ್ದಕ್ಕಾಗಿ ಅವಳು ತನ್ನನ್ನು ತಪ್ಪುಗಾರಳೆಂದು ಭಾವಿಸಿಕೊಂಡಿರಲಿಲ್ಲ. ವಿಜಯಲಾಲನನ್ನು ವರಿಸುವ ಯೋಗವಿಲ್ಲದ್ದರಿಂದಲೇ ಅವನ ವಿಷಯವಾಗಿ ತನ್ನ ಹೃದಯವು ಪ್ರಣಯವುಳ್ಳದ್ದಾಗಲಿಲ್ಲವೆಂದು ಅರುಣಳ ದೃಢವಾದ ಭಾವನೆಯಾಗಿತ್ತು. ವಸ್ತುಸ್ಥಿತಿಯು ಹೀಗಿದ್ದಮೇಲೆ ಕೃಷ್ಣಲಾಲನ ಇಚ್ಛೆಯು ಹೇಗೆ ಈಡೇರಬೇಕು? ತನ್ನ ತಂದೆಯ ಹೃದಯದಲ್ಲಿ ಅಂಕುರಿಸಿದ್ದ ಇಚ್ಛೆಯನ್ನು ನಾಶಗೊಳಿಸಬೇಕಾಯಿತೆಂಬ ಉದ್ದೇಶದಿಂದ ಅವಳ ಮನಸ್ಸು ಉದಾಸಗೊಂಡಿತ್ತು. ಅವಳು ತಂದೆಗೆ ಏನು ಉತ್ತರವೀಯಬೇಕೆಂದು ವಿಚಾರಿಸತೊಡಗಿದಳು. ಅರುಣಳು ಸುಮ್ಮನೆ ಕುಳಿತದ್ದನ್ನು ನೋಡಿ ಕೃಷ್ಣಲಾಲನು ಸೋಜಿಗಗೊಂಡನು. ವಿಜಯಲಾಲನಂತಹ ತೇಜಸ್ವಿಯಾದ ರಜಪುತನನ್ನು ವರಿಸುವದಕ್ಕೆ ಅಭಿಪ್ರಾಯವನ್ನು ಕೇಳಿದಾಗ, ತನ್ನ ಮಗಳು ತಟಸ್ಥವೃತ್ತಿಯನ್ನೇಕೆ ಧರಿಸಿದಳೆಂಬವರ ಇಂಗಿತವು ಅವನಿಗೆ ತಿಳಿಯದಾಯಿತು. ಆಗ ಅವನು ವಿಸ್ಮಿತ ಸ್ವರದಿಂದ: "ಅರುಣ, ಸುಮ್ಮನೆ ಕುಳಿತಿರುವ ಕಾರಣವೇನು? ವಿಜಯಲಾಲನು ನಿನ್ನ ಪಾಣಿಗ್ರಹಣ ಮಾಡಲಿಕ್ಕೆ ಅಯೋಗ್ಯನಿರುವನೆಂದು ತಿಳಿದುಕೊಂಡಿರುವೆಯೇನು?"

"ಅಪ್ಪಾ, ವಿಜಯಲಾಲರು ತೀರ ಅಯೋಗ್ಯರಿರುವರು."

"ಅದೇಕೆ?" ಕೃಷ್ಣಲಾಲನು ದಂಗು ಬಡೆದು ಕೇಳಿದನು.

"ಅವರಲ್ಲಿ! ನಾನು ಬಂಧುಪ್ರೇಮವುಳ್ಳವಳಾಗಿರುವೆನು. ಅವರು ನನ್ನ

ಅಣ್ಣಂದಿರೆನಿಸಿಕೊಳ್ಳಲಿಕ್ಕೆ ಮಾತ್ರ ಯೋಗ್ಯರಿರುವರು."

"ಅವನು ನಿನ್ನಲ್ಲಿ ಅನುರಾಗವುಳ್ಳವನಾಗಿದ್ದನೆಂದು ನೀನೇ ಹೇಳಲಿಲ್ಲವೆ?"

"ನಿಜವು. ಅದಕ್ಕೆ ನಾನೇನು ಮಾಡಲಿ? ಅವರ ಮನಸ್ಸು ಹೇಗಿದ್ದರೇನು? ನಾನು ಮಾತ್ರ ಅವರಲ್ಲಿ ನಿರ್ವ್ಯಾಜಪ್ರೇಮವುಳ್ಳವಳಾಗಿರುವೆನು. ನನ್ನಲ್ಲಿ ಕಡೆತನಕ ಅವರ ವಿಷಯವಾಗಿ ಅನ್ಯಭಾವನೆಗಳು ಉದಯವಾಗುವ ಸಂಭವವಿಲ್ಲ."

ಕೃಷ್ಣಲಾಲನು ನಿರಾಶಗೊಂಡನು. ವಿವಾಹಾತುರಳಾದ ಅರುಣಳು ವಿಜಯಲಾಲನಂತಹ ಸುಂದರ ಹಾಗು ತರುಣ ಶೂರ ರಜಪೂತನನ್ನು ವರಿಸಲಿಕ್ಕೆ ಅಸಮ್ಮತಿಯನ್ನು ವ್ಯಕ್ತಪಡಿಸಲಾರಳೆಂದು ಅವನ ಭಾವನೆಯಿತ್ತು. ಅರುಣಕುಮಾರಿಯ ಸ್ಪಷ್ಟವಾದ ಉತ್ತರದಿಂದ ಅವನು ಉದಾಸೀನನಾದನು. ಆಗ ಅವನು ದುಃಖಿತನಾಗಿ:—"ಅರುಣಕುಮಾರಿ, ವಿಧಿಯು ನಿನ್ನ ಹಣೆಯಲ್ಲಿ ವಿವಾಹವನ್ನೇ ಬರೆದಿಲ್ಲವೆಂಬಂತೆ ತೋರುವದು!"

"ಅಪ್ಪಾ, ವಸ್ತುಸ್ಥಿತಿಯು ಹೀಗಿದ್ದ ಮೇಲೆ ನೀವು ವರಾನ್ವೇಷಣೆಗಾಗಿ ಇಷ್ಟೇಕೆ ಸಾಹಸ ಮಾಡಬೇಕು? ನಾನು ಕಡೆತನಕ ಕೌಮಾರ್ಯದಲ್ಲಿಯೇ ಬಾಳುವೆನು. ಸ್ತ್ರೀಯರು ಅವಿವಾಹಿತರಾಗಿ ಉಳಿದರೆ ಪಾಪವಿಲ್ಲವಷ್ಟೆ? ನೀವು ಇನ್ನು ಮೇಲೆ ನಿಶ್ಚಿಂತರಾಗಿ ಕಾಲಹರಣ ಮಾಡಿರಿ. ನನ್ನ ಸಲುವಾಗಿ ಕೊರಗಬಾರದೆಂದು ಬೇಡಿಕೊಳ್ಳುವೆನು."

ಕೃಷ್ಣಲಾಲನು ಒಮ್ಮೆ ನಿಟ್ಟುಸಿರುಬಿಟ್ಟು ಅಲ್ಲಿಂದ ತೆರಳಿದನು.

---

## ನಿರಾಶೆಯಲ್ಲಿ ಆಶಾಂಕುರ.

ಅತಿರೇಕವಾದ ನಿರಾಶೆ ಔದಾಶೀನ್ಯಗಳಿಂದ ಮನುಷ್ಯನಿಗ ಜೀವನವು ಬೇಸರಾಗುವದು. ಯಾವ ವಿಷಯಗಳಲ್ಲಿಯೂ ಅವನ ಮನಸ್ಸು ರಮಮಾಣವಾಗುವದಿಲ್ಲ. ಮೊದಲು ಯಾವ ವಿಷಯಗಳಲ್ಲಿ ಅವನು ಆನಂದಗೊಳ್ಳುತ್ತಿದ್ದನೋ ಅವೇ ವಿಷಯಗಳು ಮುಂದೆ ಅವನ ಕ್ಲೇಶಕ್ಕೆ ಕಾರಣವಾಗುವವು. ಜಗತ್ತೇ ಅವನ ಪಾಲಿಗೆ ಶೂನ್ಯವತ್ತಾಗಿ ಕಾಣತೊಡಗುವದು. ಇದೇ ಮೇರೆಗೆ ಕೃಷ್ಣಲಾಲನ ಸ್ಥಿತಿಯಾಗಿತ್ತು. ತನ್ನ ಕುಮಾರಿಯಾದ ಅರುಣಳ ಭೆಟ್ಟಿಗಾಗಿ ಮೊದಲು ಅವನು ಅತ್ಯಂತ ಉತ್ಸುಕನಾಗಿದ್ದನು. ಅಜಿತಾನಂದರ ಭವಿಷ್ಯವಾಣಿಯನ್ನು ಕೇಳಿದ ಮೇಲಂತೂ ಅವನ ಆನಂದಸಾಗರವು ಮೇರೆದಪ್ಪಿತ್ತು. ವಿಶ್ವಪ್ರಯತ್ನ ಮಾಡಿದರೂ ಯೋಗ್ಯವ[illegible]ರನು ದೊರೆಯದಾದಕೂಡಲೆ ಅವನು ಆನಂದಗಿರಿಯ ಅತ್ಯುಚ್ಚ ಶಿಖರದಿಂದ [illegible]ದುಃಖಗರ್ತದಲ್ಲಿ ಬಿದ್ದು ತೊಳಲತೊಡಗಿದನು. ತನ್ನ ವಂಶದ ಅಂಕುರವು ಹೀಗೆ[illegible]ಯೆ ಬೆಳೆಯಿಲ್ಲದ್ದಾಗಿ ಕಮರಿ ಹೋಗುವದೆಂದು ತಿಳಿದು ಅವನು ಅತ್ಯಂತ ಉದಾಸೀನನಾಗಿದ್ದನು. ಅರುಣಕುಮಾರಿಯನ್ನು ನೋಡಿದಾಗೆಲ್ಲ ಅವನ ಹೃದಯಕ್ಕೆ ಬರೆಕೊಟ್ಟಂತಾಗು

ತ್ತಿತ್ತು. ಅವಳು ತನ್ನ ಕಣ್ಣುಮರೆಯಾಗಿದ್ದರೆ ಸುಖವಾಗುತ್ತಿತ್ತೆಂದು ಕೃಷ್ಣ ಲಾಲನು ಅನ್ನತೊಡಗಿದ್ದನು. ಇತ್ತೀಚೆಗೆ ಅವನು ದಾನಧರ್ಮ ಪರೋಪಕಾರಗಳ ಮನಸ್ಸು ಹಾಕದಾಗಿದ್ದನು. ಅವನಿಂದ ನಡೆಯಿಸಲ್ಪಟ್ಟ ಸದಾವರ್ತಗಳು ನಿಂತವ ಯಾಚಕರು ನಿರಾಶರಾಗಿ ತಿರುಗಿ ಹೋಗತೊಡಗಿದರು.

ಅರುಣಕುಮಾರಿಗೆ ತಂದೆಯ ದುಃಖದ ಕಾರಣವು ತಿಳಿಯಲಿಕ್ಕೆ ಬಹಳ ದಿ ಗಳು ತಗಲಲಿಲ್ಲ. ತಾನು ತಂದೆಯ ದುಃಖಕ್ಕೆ ಕಾರಣೀಭೂತಳಾದೆನೆಂಬದು ತಿಳಿ ಕೂಡಲೆ, ಅವಳ ಮನಸ್ಸು ಅತಿಯಾಗಿ ಔದಾಸೀನ್ಯ ಹೊಂದಿತು. ಕ್ಲೇಶಮನಃ ನಾಗಿದ್ದ ತಂದೆಯು ದಾನ-ಧರ್ಮ-ಪರೋಪಕಾರಗಳಲ್ಲಿ ಮನಸ್ಸು ಹಾಕದೆ ಚಿಂ ಯಲ್ಲಿ ಮಗ್ನನಾಗಿ ಕಾಲಹರಣ ಮಾಡತೊಡಗಿದ್ದರಿಂದ ಅವಳಿಗೆ ಬಹಳ ದುಃ ವಾಯಿತು. ಅವನ ಮನಸ್ಸನ್ನು ಸಮಾಧಾನಪಡಿಸುವದಕ್ಕಾಗಿ ಅರುಣಳು ಬಹ ಪರಿಯಾಗಿ ಯತ್ನಿಸಿದಳು. ತನ್ನ ಅಸ್ತಿತ್ವವಿರುವವರೆಗೆ ತಂದೆಯ ಉದ್ವಿಗ್ನಮನಸ್ಸ ಶಾಂತವಾಗಲಾರದೆಂದು ಅವಳ ಭಾವನೆಯಾಯಿತು. ತಾನು ಇಹಲೋಕದಿಂ ಬಿಡುಗಡೆ ಹೊಂದಿದ ಮೇಲಾದರೂ ತಂದೆಯು ನಿಶ್ಚಿಂತನಾಗಿ ಪರೋಪಕಾರ ರ ನಾಗಬಹುದೆಂದು ತಿಳಿದು, ಅವಳು ಆತ್ಮತ್ಯಾಗಮಾಡಲಿಕ್ಕೆ ಸಹ ಸಿದ್ಧಳಾದಳು!

ಕೃಷ್ಣಲಾಲನು ವಾಸವಾಗಿದ್ದ ಮನೆಯಿಂದ ಸ್ವಲ್ಪ ಅಂತರದ ಮೇಲೆ ಒಂದ ಸರೋವರವಿತ್ತು. ಆ ಸರೋವರದ ನೀರು ಒಳ್ಳೆಯ ನಿರ್ಮಲವಿದ್ದುದರಿಂ ನೋಡುವವರಿಗೆ ಅದು ಒಂದು ದೊಡ್ಡ ಕನ್ನಡಿಯಂತೆ ಭಾಸವಾಗುತ್ತಿತ್ತು. ಅದ ಒಂದು ಭಾಗಕ್ಕೆ ಸೋಪಾನಗಳು ಕಟ್ಟಲ್ಪಟ್ಟಿದ್ದವು. ಸರೋವರದ ಸುತ್ತಲೂ ಸಣ್ಣ ದೊಡ್ಡ ವೃಕ್ಷಗಳು ಬೆಳೆದದ್ದರಿಂದ ಅದರ ಶೋಭೆಯು ಮತ್ತಿಷ್ಟು ಹೆಚ್ಚಾ ಗಿತ್ತು. ಆ ಸರೋವರದಲ್ಲಿ ಕೆಂದಾವರೆ ಹೊಂದಾವರೆ ಇಂದೀವರ ಮೊದಲಾದ ತ ತರದ ಜಾತಿಯ ಕಮಲದ ಬಳ್ಳಿಗಳು ಬೆಳೆದಿದ್ದವು. ಒಟ್ಟಿನ ಮೇಲೆ ಆ ಸರೊ ವರವು ಒಳ್ಳೆಯ ಮನೋಹರವಾಗಿದ್ದುದರಿಂದ ಎಷ್ಟೋ ಜನರು ಸಂಧ್ಯಾಸಮಯದ ಅಲ್ಲಿಗೆ ವಿಶ್ರಾಂತಿಗಾಗಿ ಬರುತ್ತಿದ್ದರು.

ಶುಕ್ಲಪಕ್ಷದ ರಾತ್ರಿಯು. ಸುಮಾರು ಮೂರು ತಾಸು ರಾತ್ರಿಯಾಗಿ ಬಹುದು. ಸರೋವರದ ಸೋಪಾನಗಳ ಮೇಲೆ ಜನರ ದಟ್ಟಣೆಯು ಇಲ್ಲದಂತಾ ಗಿತ್ತು. ಇಂತಹ ಸಮಯದಲ್ಲಿ ಶುಭ್ರವಸ್ತ್ರವನ್ನು ಧರಿಸಿದ ಒಬ್ಬ ಯುವತಿಯು ಸರೋವರಕ್ಕೆ ಬಂದಳು. ಅವಳು ಸೋಪಾನಗಳನ್ನಿಳಿಯುತ್ತ ಜಲಾಶಯವನ್ನು ತಲುಪಿದಳು. ತರುವಾಯ ಅವಳು ಕೈಜೋಡಿಸಿ ಮೇಲೆ ಮುಖವೆತ್ತಿ—"ಜ ನ್ನಾಯಕಾ! ದೀನರಕ್ಷಕಾ! ಈ ನಿನ್ನ ದೀನ ಕುಮಾರಿಗೆ ಸುಖವು ದೊರೆಯಬಾ ದೆಂದು ನಿನ್ನ ಸಂಕೇತವಿರುವದಲ್ಲವೆ? ನನ್ನ ಮೇಲೆ ದಯದೋರದಿದ್ದರೂ, ನಿನ್ನ ಏಕನಿಷ್ಠ ಭಕ್ತನಾದ ನನ್ನ ತಂದೆಯನ್ನಾದರೂ ಕೃಪಾದೃಷ್ಟಿಯಿಂದ ನೋಡಬಾರದೆ ಪ್ರಭೋ! ನನ್ನ ಸಲುವಾಗಿ ನನ್ನ ತಂದೆಯು ವ್ಯಥಿತಾಂತಃಕರಣನಾಗಿರುವನು

ರಾಣೀ ಅರುಣ ಕುಮಾರಿ.

ಅವನ ಜೀವನದ ಆಶಾಶಂತುವಾಗಿದ್ದ ನನ್ನ ದುರ್ದೆಶೆಯು ಅವನ ದುಃಖದ ಮೂಲವಾಗಿರುವದು. ನನಗೆ ಸೌಖ್ಯವಾಗಬೇಕೆಂದು ಅವನು ಬಹು ಪರಿಯಾಗಿ ಸಾಹಸ ಮಾಡಿ, ಕಡೆಗೆ ನಿರಾಶೆ ಹೊಂದಿ ಕುಳಿತುಬಿಟ್ಟಿರುವನು. ದೇವಾ! ಪರೋಪಕಾರ ರತನಾದ ನನ್ನ ತಂದೆಯು ಇಚ್ಛೆಯನ್ನು ನೆರವೇರಿಸದಿರಲಿಕ್ಕೆ ಅವನು ಅಂತಹ ಮಹಾಪಾತಕವನ್ನೇನು ಮಾಡಿರುವನು? ದುರ್ಭಾಗಿನಿಯಾದ ನನ್ನಿಂದ ಪಾಪವು ಘಟಿಸಿದ್ದರೆ, ಅದರ ದುಃಖವನ್ನು ನನ್ನ ತಂದೆಯು ಅನುಭವಿಸಬೇಕೆಂದು ನೀನು ಇಚ್ಛಿಸುವ ಉದ್ದೇಶವೇನು? ನನಗೆ ಇಡೀ ಆಯುಷ್ಯದಲ್ಲಿ ಸೌಖ್ಯವು ದೊರೆಯಬಾರದೆಂದು ನಿನ್ನ ಸಂಕಲ್ಪವಿದ್ದರೆ, ನಾನು ಈ ದುಃಖಮಯವಾದ ಜಗತ್ತಿನಲ್ಲಿ ಜೀವಿಸಲೇಕೆ? ನನ್ನ ಮರಣಾನಂತರದಲ್ಲಾದರೂ ನನ್ನ ತಂದೆಯು ಸುಖಬಡಬಹುದು. ನನಗೆ ಯೋಗ್ಯ ವರನು ಸಿಗಲೊಲ್ಲನೆಂಬ ತಲ್ಲಣದಿಂದಲಾದರೂ ಅವನು ಬಿಡುಗಡೆ ಹೊಂದಬಹುದು. ಮಾಡಿದ ಮಹಾಪಾತಕದ ಫಲವನ್ನನುಭವಿಸಲಾರದೆ ಆತ್ಮಹತ್ಯೆಗಾಗಿ ನಾನು ಸಿದ್ಧಳಾಗಿ, ಮೊದಲಿನ ಪಾತಕದಲ್ಲಿ ಹೆಚ್ಚಿನ ಭಾರಹಾಕಲುದ್ಯುಕ್ತಳಾಗಿರುವೆನು. ಈ ನನ್ನ ಕೃತಿಯು ತೀರ ಅನುಚಿತವೆಂಬದನ್ನಾದರೂ ನಾನು ಬಲ್ಲೆನು; ಆದರೆ ನನಗೆ ಈ ಮಾರ್ಗದ ಹೊರತು ಹೊಸ ಮಾರ್ಗವು ತೋಚದಾಗಿದೆ. ಕೇವಲ ಇಂದ್ರಿಯ ಲಾಲಸೆಯಿಂದ ಇಲ್ಲವೆ, ಸ್ವಸುಖದ ಉದ್ದೇಶದಿಂದ ನಾನು ವಿವಾಹವಾಗಲಿಚ್ಛಿಸುವದಿಲ್ಲವೆಂಬದನ್ನು ಸರ್ವಜ್ಞನಾದ ನಿನಗೆ ಹೇಳಲಿಕ್ಕೆ ಬೇಡ. ನಾನು ವಿವಾಹವಾಗಬೇಕೆಂಬದರ ಉದ್ದೇಶವು ಬೇರೆ ವಿಧವಾದದ್ದಿತ್ತು. ನಾನು ಕ್ಷಾತ್ರ ಕನ್ನಿಕೆಯಿರುವೆನು. ಕ್ಷತ್ರಿಯ ಧರ್ಮೋಚಿತವಾದ ಗುಣಗಳು ನನ್ನಲ್ಲಿ ಸಹಜವಾಗಿ ಉದಯಿಸಿರುವವು. ಹೀಗಿದ್ದರೂ ನನ್ನ ಗುಣಗಳ ಉಪಯೋಗವು ಈ ಜನ್ಮದಲ್ಲಿ ತಿಲಾಂಶವಾದರೂ ಆಗದಿದ್ದ ಮೇಲೆ ನಾನು ಬಾಳಲೇಕೆ? ಒಬ್ಬ ವೀರ ಕ್ಷತ್ರಿಯನ ಪಾಣಿಗ್ರಹಣ ಮಾಡಿ ನನ್ನಲ್ಲಿಯ ಕ್ಷಾತ್ರತೇಜಸ್ಸನ್ನು ಇಡೀ ಆರ್ಯಾವರ್ತದಲ್ಲಿ ಕೆಡಹಬೇಕೆನ್ನುವ ಉತ್ಕಟೇಚ್ಛೆಯನ್ನು ಈಡೇರಿಸಬಾರದೆಂದು ನಿನ್ನ ಹಟವಿರುವಾಗ, ಈ ದುಃಖಮಯವಾದ ಭೂಮಿಯಲ್ಲಿ ಜೀವಿಸಿರಬಾರದೆಂಬ ಹಟವನ್ನು ನಾನಾದರೂ ಬೇಗನೆ ಹೇಗೆ ಈಡೇರಿಸದಿರಲಿ? ಯೋಗ್ಯ ಪತಿಯು ದೊರೆತ ಹೊರತು ನಾನೊಬ್ಬಳೇ ಹೇಗೆ ನನ್ನ ಪ್ರತಾಪವನ್ನು ವ್ಯಕ್ತಪಡಿಸಲಿ? ಸರ್ವೇಶಾ! ನೀನು ಭಕ್ತವತ್ಸಲನಲ್ಲವೆ? ಹೀಗಿದ್ದು ನನ್ನ ಮೇಲೆ ಇದುವರೆಗೂ ಕೃಪೆಮಾಡಲಿಲ್ಲ; ಮುಂದೆಯಾದರೂ ದಯೆಮಾಡುವ ಲಕ್ಷಣವೂ ಇಲ್ಲ. ಜನರು ನಿನಗೆ ಕೃಪಾಸಾಗರನೆನ್ನುವರು; ದಿನೋದ್ಧಾರಕನೆನ್ನುವರು; ಭಕ್ತವತ್ಸಲನೆನ್ನುವರು. ಹೀಗೆನ್ನುವವರಿಗೆ ಹುಚ್ಚರೆಂದು ಕರೆಯಲಿಕ್ಕೆ ನಾನು ಹಿಂದೆಮುಂದೆ ನೋಡಲಾರೆನು. ನಾನು ನಿನ್ನ ಧ್ಯಾನವನ್ನು ಯಾವಾಗಲೂ ಮಾಡುತ್ತಿದ್ದೆನಲ್ಲವೆ? ನಿನ್ನ ಗುಣಗಾನದಲ್ಲಿ ಬಹಳ ವೇಳೆಯನ್ನು ಕಳೆಯುತ್ತಿದ್ದಿಲ್ಲವೆ? ಹೀಗಿದ್ದರೂ ನೀನು ನನಗೆ ಒಂದು ತುಚ್ಛತಮವಾದ ಭಿಕ್ಷೆಯನ್ನಿತ್ತು ಕೃತಾರ್ಥಳನ್ನೇಕೆ ಮಾಡಲಿಲ್ಲ? ನನ್ನ ಮನೋಗತವನ್ನು

ಈಡೇರಿಸುವದು ನಿನಗೆ ಅಸಾಧ್ಯವೆ? ಕರಿಯನ್ನು ರಕ್ಷಿಸಿದೆ; ದ್ರೌಪದಿಯ ಮಾನವನ್ನು ಕಾಯ್ದೆ; ಪಾರ್ಥಸಾರಥಿಯಾಗಿ ಪಾಂಡವರ ಪಂಚಪ್ರಾಣನಾದೆ. ಇಷ್ಟೆಲ್ಲ ಮಾಡಿದ ನೀನು ನನ್ನ ಅಲ್ಪವಾದ ಬೇಡಿಕೆಯನ್ನು ಈಡೇರಿಸಲಿಲ್ಲವೇಕೆ? ಈ ವರ್ತನವನ್ನು ನೋಡಿದರೆ ನೀನು ಪಕ್ಷಪಾತ ಬುದ್ಧಿಯವನಿರುವೆಯೆಂದು ನಾನು ಸಾರಿ ಹೇಳುವೆನು. ನೀನು ಎಂಥವನಿದ್ದ ಗೊಡವೆ ನನಗೇನು? ಬೇಸರವಾದ ಸ್ಥಳದಿಂದ ಹೊರಟು ಹೋಗಲಿಕ್ಕೆ ಯಾರದೇನು ಆತಂಕವು? ನಾನು ಜೀವಿಸಿದ್ದರೆ ನನಗೂ ಸೌಖ್ಯವಿಲ್ಲ; ನನ್ನ ತಂದೆಗೂ ಸೌಖ್ಯವಿಲ್ಲ. ನಾನು ಇಹಲೋಕ ತ್ಯಾಗ ಮಾಡಿದರೆ, ನನ್ನ ತಂದೆಗಾದರೂ ಒಂದು ಬಗೆಯ ಸೌಖ್ಯವೂ ಶಾಂತಿಯೂ ದೊರೆಯಬಹುದಾಗಿವೆ. ಅಂತೆಯೆ ನಾನು ಕಟುಕರ್ತವ್ಯವನ್ನಾಚರಿಸಲಿಕ್ಕೆ ಸಿದ್ಧಳಾಗಿರುವೆನು. ನಿರ್ದಯ ಸಮಾಜದ ಅಂಧಶ್ರದ್ಧೆಯೇ ನನ್ನ ಆಯುಷ್ಯವನ್ನು ದುಃಖಮಯ ಮಾಡಿದ್ದರಿಂದ ನಾನು ಆತ್ಮಹತ್ಯೆ ಮಾಡಿಕೊಳ್ಳಲುಪಕ್ರಮಿಸಿರುವೆನು. ನಾನು ಆಚರಿಸಬೇಕೆನ್ನುವ ಮಹಾ ಪಾತಕದ ಭಾರವು ಆ ನಿರ್ದಯ ಸಮಾಜದ ಮೇಲಿರುವದಲ್ಲದೆ, ಅದಕ್ಕೆ ನಾನು ತಿಲಪ್ರಾಯವಾದರೂ ಪಾಲುಗಾರಳಲ್ಲ. ನಾನು ಪವಿತ್ರ ರಜಪೂತ ಧರ್ಮದಲ್ಲಿ ಜನಿಸಿದ್ದರೂ ಲೋಕನಿಂದೆಗೆ ಪಾತ್ರಳಾಗಿ ಪತಿತಳೆನ್ನಿಸಿಕೊಳ್ಳತೊಡಗಿರುವೆನು. ದೇವಾ! ಈ ಪತಿತವಾದ ದೇಹವನ್ನು ಬಿಸುಟುವದರಿಂದ ನಾನು ಪಾಪಭಾಗಿನಿಯಾಗಲಾರೆನೆಂದು ಖಂಡಿತವಾಗಿಯೂ ತಿಳಿದಿರುವೆನು. ಇದೋ, ನಾನು ಈಗಲೇ ನಿನ್ನ ಸನ್ನಿಧಿಗೆ ಬರುವೆನು! ಜಯ ಭುವನೇಶ್ವರಿ!!'' ಎಂದು ನುಡಿದವಳೇ ಆ ಯುವತಿಯು ಸರೋವರದಲ್ಲಿ ದುಮುಕಿದಳು! 'ಧುಡುಂ' ಎಂಬ ಧ್ವನಿಯು ಆ ಸರೋವರದ ಪ್ರದೇಶದಲ್ಲ ಪ್ರತಿಧ್ವನಿಗೊಂಡಿತು. ಪರಕ್ಷಣದಲ್ಲಿ ಮತ್ತೆ 'ಧುಡುಂ' ಎಂಬ ಸಪ್ಪಳವಾಯಿತು. ಮುಂದೆ ಸ್ವಲ್ಪ ವೇಳೆಯಲ್ಲಿ ಒಬ್ಬ ತರುಣನು ಆ ರಜಪೂತ ಯುವತಿಯನ್ನು ನೀರೊಳಗಿಂದ ತೆಗೆದುಕೊಂಡು ಸೋಪಾನದ ಮೇಲೆ ಬಂದನು!

ರಜಪೂತ ತರುಣಿಯು ಈ ಆಕಸ್ಮಿಕ ಘಟನೆಯಿಂದ ದಂಗುಬಡೆದಳು! ಅವಳು ಚಕಿತದೃಷ್ಟಿಯಿಂದ ಎದುರಿಗೆ ನಿಂತ ತರುಣನ ಮುಖವನ್ನು ಎವೆಯಿಕ್ಕದೆ ನೋಡಹತ್ತಿದ್ದಳು. ಕೆಲವು ಕ್ಷಣಗಳು ಮೌನಾವಸ್ಥೆಯಲ್ಲಿ ಹೋದ ಬಳಿಕ ಆ ತರುಣನು ರಜಪೂತ ಯುವತಿಯನ್ನು ಕುರಿತು ಸ್ನೇಹಾರ್ದ್ರ ಸ್ವರದಿಂದ:—''ಲಾವಣ್ಯಮಯಿಯೆ! ನೀನು ಯಾರು? ಈ ಅತುಲನೀಯವಾದ ಸುಂದರ ತನುವಲ್ಲರಿಯನ್ನು ಬಿಸುಟುವ ದುಃಖದಾಯಕ ಪ್ರಸಂಗವೇನು ನಿನಗೆ ಘಟಿಸಿರುವದು?''

''ಮಹಾಶಯರೆ!'' ರಜಪೂತ ತರುಣಿಯು ನಿಟ್ಟುಸಿರುಬಿಟ್ಟು—''ಈ ಕುಲತ್ಯಾಗಿನಿಯ ದುಶ್ಚಾರಿತ್ರ್ಯದಿಂದ ನಿಮಗೆ ಪ್ರಯೋಜನವೇನು? ಆತ್ಮತ್ಯಾಗಮಾಡಿ, ಇಹಲೋಕದ ದುಃಖಬಂಧನಗಳಿಂದ ಬಿಡುಗಡೆಯಾಗಬೇಕೆಂಬ ನನ್ನ ಸಾಹಸಕ್ಕೆ ವಿಘ್ನವನ್ನುಂಟುಮಾಡಿದ ಉದ್ದೇಶವಾದರೂ ಏನುಂಟು? ನನಗೆ ಈ ಪ್ರಪಂಚವು

ವಿಷಮಯವಾಗಿದೆ. ಜೀವನವು ಭಾರಭೂತವಾಗಿದೆ. ಎಂತಹ ಲಾವಣ್ಯವಿದ್ದರೇನು? ಎಷ್ಟು ವೈಭವವಿದ್ದರೇನು? ಎಂತಹ ತಾರುಣ್ಯವಿದ್ದರೇನು? ಕೇವಲ ತಾರುಣ್ಯ ಲಾವಣ್ಯ ವೈಭವಗಳು ಜೀವನಕ್ಕೆ ಸುಖಶಾಂತಿಯನ್ನು ಕೊಡಲಾರವು. ಈ ಜೀವನಕ್ಕೆ ಸ್ವಾಸ್ಥ್ಯವಿಲ್ಲದ್ದರಿಂದಲೆ ಜಡದೇಹವನ್ನು ಬಿಸುಟಲಿಕ್ಕೆ ಯತ್ನಿಸಿರುವೆನು. ನನ್ನ ಮನಶ್ಶಾಂತಿಯು ನಷ್ಟವಾಗಲಿಕ್ಕೆ ಬಲವತ್ತರವಾದ ಒಂದೇ ಒಂದು ಕಾರಣವುಂಟು ಆದನ್ನು ನಿಮ್ಮೆದುರಿಗೆ ಹೇಳುವದರಿಂದ ಪ್ರಯೋಜನವೇನು? ಅದನ್ನು ಕೇಳಿ ಯಾದರೂ ನೀವು ಮಾಡುವದೇನು? ನೀವು ನನ್ನ ಕಟುಕರ್ತವ್ಯಕ್ಕೆ ವಿಘ್ನತಾರದೆ ಬದಿಗೆ ಸರಿಯಿರಿ.''

"ಮಾನಿನಿ! ನೀನು ಭ್ರಮಿಷ್ಟಳಿರುವೆ. ನಿನ್ನ ಆತ್ಮಶಾಂತಿಯೂ ಜೀವನದ ಸೌಖ್ಯವೂ ನಾಶವಾಗಲಿಕ್ಕೆ ಅಂತಹ ಕಾರಣವೇನು ಘಟಿಸಿರುವದು? ಜಗತ್ತಿನಲ್ಲಿ ಎಲ್ಲರೂ ದುಃಖಿಗಳಿರುವದಿಲ್ಲ. ಸುಖ-ದುಃಖಗಳು ಎಲ್ಲರಿಗೂ ಹೆಚ್ಚು--ಕಡಿಮೆ ಪ್ರಮಾಣದಿಂದ ಇದ್ದೇ ಇರುವವು. ಸೌಖ್ಯಕಾಲದಲ್ಲಿಯೂ ದುಃಖದಲ್ಲಿಯೂ ಸಮ ಸ್ಥಿತಿಯುಳ್ಳ ಮನುಷ್ಯನ ಜೀವನಕ್ಕೆ ಹೆಚ್ಚಿನ ಬೆಲೆಯಿರುವದು. ದುಃಖಕಾಲವು ಬಂದಕೂಡಲೆ ಆತ್ಮಘಾತದಂತಹ ನಿಂದ್ಯಕೃತಿಯನ್ನಾಚರಿಸಿ, ಮುಂದಿನ ಜನ್ಮದಲ್ಲಿ ಏನು ದೊರಕಿಸಬೇಕೆಂದು ಯೋಚಿಸಿರುವೆ? ಈಗ ನೀನು ಅನುಭವಿಸುವ ದುಃಖವು ನರಕಯಾತನೆಗಿಂತ ಹೆಚ್ಚಿನದಿರಲಿಕ್ಕಿಲ್ಲವಷ್ಟೆ? ಆತ್ಮಘಾತಮಾಡಿಕೊಂಡರೆ ಯಾವ ವಿಧದ ದುರ್ಗತಿಯು ದೊರೆಯುವದೆಂಬದನ್ನು ಯೋಚಿಸಿರುವೆಯೇನು? ದೇವತಾನು ಗ್ರಹದಿಂದ ಸದ್ಯದ ದುಃಖದ ಕಾಲವು ಹೋಗಿ ಸೌಖ್ಯದ ಕಾಲವು ದೊರೆಯಲಾರ ದೆಂದು ನೀನು ತಿಳಿದಿರಬಹುದು ದಯಾಮಯನಾದ ಪರಮಾತ್ಮನ ಇಚ್ಛೆಯಿಂದ ಅಚಿಂತ್ಯನೀಯವೂ ಅಸಾಧ್ಯವೂ ಆದ ಕಾರ್ಯಗಳು ಈಡೇರುವವು. ನೀನು ಆತ್ಮ ಹತ್ಯೆಮಾಡಿಕೊಂಡು ಹಿಂದಿನ ಪಾತಕದಲ್ಲಿ ಹೊಸಪಾತಕವನ್ನು ಬೆರಿಸಬೇಡ."

ರಜಪೂತ ತರುಣನ ಮಾತುಗಳನ್ನು ಕೇಳಿದ ಕೂಡಲೆ ಆ ತರುಣಿಯ ತಲೆಯಲ್ಲಿ ದಿವ್ಯವಾದ ಪ್ರಕಾಶವು ಬಿದ್ದಿತು. ತಾನು ಎಂತಹ ನೀಚಕೃತಿಯನ್ನು ಮಾಡತೊಡ ಗಿದ್ದೆನಲ್ಲ! ಎಂದು ಅವಳು ಪಶ್ಚಾತ್ತಾಪಬಡತೊಡಗಿದಳು. ಕೆಲವು ವೇಳೆಯ ವರೆಗೆ ಅವಳು ಸ್ವಸ್ಥವಾಗಿ ನಿಂತಿದ್ದಳು ಅನಂತರದಲ್ಲಿ ಅವಳು ಆ ತರುಣನನ್ನು ಕುರಿತು: "ಮಹಾನುಭಾವರೆ, ತಮ್ಮ ಉಪದೇಶದಿಂದ ನನ್ನಲ್ಲಿ ಸುವಿಚಾರವು ಉದಯಿಸಿತು. ಮನಸ್ಸಿನಲ್ಲಿ ಅಲ್ಲದ ಸಲ್ಲದ ಕಲ್ಪನೆಗಳನ್ನು ತಂದುಕೊಂಡು ನಾನು ಆತ್ಮನಾಶಮಾಡಿ ಕೊಳ್ಳಲುದ್ಯುಕ್ತಳಾಗಿದ್ದೆನು. ನೀವು ನನ್ನಲ್ಲಿ ಸದಸದ್ವಿವೇಕ ಬುದ್ಧಿಯನ್ನು ಹುಟ್ಟಿ ಸಿದಿರಿ. ನಿಮ್ಮ ಉಪಕಾರವನ್ನು ಮರೆಯಲಾರೆನು. ಮಹಾಶಯರೆ, ತಾವು ಯಾರು?''

"ನಾನು ಮೇವಾಡದ ಮಹಾರಾಣಾ ಉದಯಸಿಂಗನು.

"ಏನು? ನೀವು ಮೇವಾಡದ ಮಹಾರಾಣಾಜಿಯವರೇನು?''

"ಹೌದು" ಎಂದು ಉದಯಸಿಂಗನು ನುಡಿದು, ಆ ತರುಣಿಯನ್ನು ಕುರಿತು: "ನೀನು ಯಾರು? ನೀನು ಆತ್ಮಘಾತಮಾಡಿಕೊಳ್ಳಲಿಕ್ಕೆ ಸಿದ್ಧಳಾದ ಉದ್ದೇಶವೇನು?"

"ಮಹಾರಾಣಾಜೀ, ನಾನು ಕೃಷ್ಣಲಾಲನ ವಾತ್ಸಲ್ಯದ ಪುತ್ರಿಯಾದ ಅರುಣಕುಮಾರಿಯು. ನನ್ನ ಈ ಅನುಪಮ ತಾರುಣ್ಯದ ಹಾಗು ಅತುಲನೀಯ ಸೌಂದರ್ಯದ ಸಾರ್ಥಕತೆಯಾಗುವ ಯೋಗವೊದಗದ್ದರಿಂದ ಜಲಸಮಾಧಿ ಹೊಂದಬೇಕೆಂದು ಯೋಚಿಸಿದ್ದೆನು."

"ನೀನು ಕೃಷ್ಣಲಾಲನ ಕುವರಿಯಾದ ಅರುಣಳೇನು?" ಎಂದು ಉದಯಸಿಂಗನು ವಿಸ್ಮಯದಿಂದ ನುಡಿದು—"ಅರುಣಕುಮಾರಿ, ನಿನ್ನಂತಹ ದಿವ್ಯ ಲಾವಣ್ಯವತಿಯ ಪಾಣಿಗ್ರಹಣ ಮಾಡಲಿಕ್ಕೆ ಅದಾವ ರಜಪೂತ ತರುಣನು ಹಿಂಜರಿಯುವನು? ಅರುಣ, ನಿನ್ನ ಮಾತಿನಲ್ಲಿ ಸತ್ಯಾಂಶವಿಲ್ಲೆಂದು ನಾನು ತಿಳಿಯುವೆನು."

"ರಾಣಾಜಿ, ನಾನು ಸಟೆಯಾಡುವದಿಲ್ಲ."

"ನಿರ್ಜರಾಂಗನೆ! ನಿನ್ನ ಮಾತು ನಿಜವೆ? ನಿನ್ನನ್ನು ರಜಪೂತ ವೀರನು ವರಿಸದಿರಲಿಕ್ಕೆ ಕಾರಣವೇನು?"

"ಅಂಧಶ್ರದ್ಧೆಯ ಸಮಾಜಕ್ಕೆ ನಾನು ಕುಲಕಲಂಕಿನಿಯಾಗಿ ತೋರುತ್ತಿರುವೆನು."

"ಅರುಣಕುಮಾರಿ, ನೀನು ಹೇಗೆ ಕುಲಕಲಂಕಿನಿಯಾಗಿರುವೆ? ನಿನ್ನಿಂದ ಅಂತಹ ಯಾವ ದುಷ್ಕೃತಿಯು ಘಟಿಸಿರುವದು?"

"ನನ್ನಿಂದ ಯಾವ ದುಷ್ಕೃತಿಯೂ ಘಟಿಸಿಲ್ಲ. ನನ್ನ ಹೃದಯವು ಗಂಗಾಜಲದಂತೆ ಪವಿತ್ರವಿರುವದು. ನನ್ನ ತಂದೆಯು ರಜಪೂತನೇನೋ ನಿಜವು; ಆದರೆ ಲೌಕಿಕ ದೃಷ್ಟಿಯಿಂದ ಅವನು ರಜಪುತನಾಗಿ ಕಾಣಲೊಲ್ಲನು. ನನ್ನ ತಾಯಿಯು ವೇಶ್ಯಾಕುಲದಲ್ಲಿ ಜನಿಸಿದವಳಾಗಿದ್ದಳು. ಆದ್ದರಿಂದಲೇ ನನ್ನನ್ನು ಪರಿಗ್ರಹಿಸಲಿಕ್ಕೆ ಯಾವ ರಜಪೂತನೂ ಮುಂದುವರಿಯದಾದನು. ನನ್ನ ವಿವಾಹವಾಗುವ ಯೋಗವಿಲ್ಲೆಂದು ತಿಳಿದು, ನನ್ನ ತಂದೆಯು ಹೃದ್ರೋಗ ಹಚ್ಚಿಕೊಂಡಿರುವನು. ನನ್ನ ಮರಣದಿಂದಲಾದರೂ ಅವನ ಆತ್ಮಕ್ಕೆ ಶಾಂತಿಯು ಲಭಿಸಬಹುದೆಂದೂ ತಿಳಿದು, ಆತ್ಮಹತ್ಯೆ ಮಾಡಿಕೊಳ್ಳಲುದ್ಯುಕ್ತಳಾಗಿದ್ದೆನು."

"ಅರುಣೇ!" ಉದಯಸಿಂಗನು ಗಂಭೀರವಾಣಿಯಿಂದ ಅರುಣಕುಮಾರಿಯನ್ನು ಸಂಬೋಧಿಸಿದನು.

"ಯಾಕೆ ರಾಣಾಜೀ?" ಅರುಣಳು ವಿನಯದಿಂದ ಕೇಳಿದಳು.

"ರಜಪೂತ ಕುಲದಲ್ಲಿ ಜನಿಸಿದ ತರುಣನನ್ನೇ ವಿವಾಹವಾಗಬೇಕೆಂದು ನೀನು ಸಂಕಲ್ಪ ಮಾಡಿಕೊಂಡಿರುವೆಯಲ್ಲವೆ?"

"ಹೌದು ಮಹಾರಾಣಾಜೀ."

"ನಿನ್ನನ್ನು ರಜಪೂತನಿಗೆ ಕೊಡಬೇಕೆಂದು ನಿನ್ನ ತಂದೆಯ ಹವಣಿಕೆಯಿರುವದಷ್ಟೆ?"

"ನಿಜವು."

"ಅರುಣೆ, ನಾನು ನಿನ್ನ ಇಚ್ಛೆಯಂತೆ ರಜಪೂತ ಮನೆತನದ ವರನನ್ನು ಶೋಧಿಸುವೆನು."

"ಮಹಾರಾಣಾಜಿ, ನಾನು ತೀರ ನಿರಾಶೆಗೊಂಡಿರುವೆನು. ಸಮಾಜವು ಅಂಧ ಶ್ರದ್ಧೆಯುಳ್ಳದ್ದಾಗಿರುವ ವರೆಗೆ ನಮ್ಮಂತಹರ ಲಗ್ನವಾಗುವದು ಅಸಾಧ್ಯವಿರುವದು. ನನ್ನ ತಂದೆಯು ಕಡಿಮೆ ಸಾಹಸ ಮಾಡಿರುವದಿಲ್ಲ. ಅವನ ವರ್ಚಸ್ಸವು ಈ ಪ್ರಯಾಗ ಪಟ್ಟಣದಲ್ಲೆಲ್ಲ ನೆಲೆಗೊಂಡಿರುವದು. ಅವನು ಎಲ್ಲರಿಗೂ ಬೇಕಾದವನಾಗಿರುವನು. ಹೀಗಿದ್ದರೂ ಈ ವಿಷಯದಲ್ಲಿ ಎಲ್ಲ ಸನಾತನಿಗಳು ನನ್ನ ತಂದೆಯ ಮಾತನ್ನು ನಡೆಯಗೊಡದೆ, ಅವನು ಚಾರಿತ್ರ್ಯದೋಷವುಳ್ಳವನೆಂದು ಸಿದ್ಧಮಾಡಿದರು."

"ಅರುಣ, ಯಾರು ಏನನ್ನೇ ಸಿದ್ಧಮಾಡಲೊಲ್ಲರೇಕೆ, ನಾನು ನಿನಗೆ ಒಬ್ಬ ಅದ್ವಿತೀಯ ರಜಪೂತ ವರನನ್ನು ದೊರಕಿಸಿ ಕೊಡುವೆನು. ನನ್ನ ಆಶ್ವಾಸನೆಯಲ್ಲಿ ನಿನ್ನ ನಂಬಿಗೆಯಿರಲಿ. ನಾನು ಮತ್ತೊಮ್ಮೆ ನಿನ್ನನ್ನು ಕಾಣುವೆನು!"

"ನನ್ನ ಮನೆಯನ್ನು ನೀವು ಬಲ್ಲಿರಷ್ಟೇ?" ಅರುಣಕುಮಾರಿಯು ಉದಯಸಿಂಗನ ಮಾತುಗಳಿಂದ ಆನಂದವುಳ್ಳವಳಾಗಿ ಕೇಳಿದಳು.

"ಬಲ್ಲೆನು. ನಿಮ್ಮ ಮನೆಯಿಂದ ಸ್ವಲ್ಪ ಅಂತರದ ಮೇಲೆ ನನ್ನ ಅರಮನೆಯಿರುವದು. ನಾನು ನಿನ್ನನ್ನು ಮನೆಯಲ್ಲಿ ಕಾಣುವದಿಲ್ಲ. ಇಂದಿನಿಂದ ಎರಡು ದಿನಗಳ ಮೇಲೆ ಸಂಧ್ಯಾಕಾಲದ ಸಮಯಕ್ಕೆ ತ್ರಿವೇಣೀತೀರಕ್ಕೆ ಬರುವೆನು; ನೀನೂ ಅಲ್ಲಿಗೆ ಬಾ."

"ಮಹಾರಾಣಾಜಿಯವರೆ," ಅರುಣಕುಮಾರಿಯು ಕೃತಜ್ಞತೆಯಿಂದ: "ನೀವು ನಿರಾಶೆಯಲ್ಲಿ ಆಶಾಂಕುರವು ಉತ್ಪನ್ನವಾಗುವಂತೆ ಮಾಡಿದಿರಿ. ನಿಮ್ಮ ಆಜ್ಞೆಯಂತೆ ತ್ರಿವೇಣೀತೀರಕ್ಕೆ ಬರುವೆನು. ರಾಜಕಾರಣದ ಭರದಲ್ಲಿ ಈ ದೀನ ಅಬಲೆಯನ್ನು ಮರೆಯಬೇಡಿರಿ."

"ಅರುಣೆ, ನಿನ್ನಂತಹಳನ್ನು ಮರೆಯುವದು ನನಗೆ ಸಾಧ್ಯವಿಲ್ಲ. ಈಗ ನಾನು ಎಂತಹ ರಾಜಕಾರಣದಲ್ಲಿ ತೊಡಗಿದ್ದರೂ ನಿನ್ನ ಕಲ್ಯಾಣಚಿಂತನೆಯ ಬಗ್ಗೆ ವಿಸ್ಮೃತಿ ಹೊಂದಲಾರೆನು. ಅರುಣಕುಮಾರಿ, ಮುಖಲಕ್ಷಣವನ್ನು ನೋಡಲು ನೀನು ಮಹಾ ಭಾಗ್ಯವತಿಯಾಗುವೆಯೆಂದು ನನಗೆ ತೋರುವದು. ನೀನು ಬರಿಯ ರೂಪಸಂಪನ್ನಳಿರುವೆಯೆಂಬದಿಷ್ಟೇ ಅಲ್ಲ; ಅದ್ವಿತೀಯ ಸದ್ಗುಣಸಂಪನ್ನಳೂ ಆಗಿರುವೆ. ನಿನ್ನ ಸಲುವಾಗಿ ಉಚ್ಚಕುಲದ ಒಬ್ಬ ರಜಪುತ ರಾಜಕುಮಾರನನ್ನು ಶೋಧಿಸುವೆನು. ನೀನು ನಿಜವಾಗಿಯೂ ರಾಜನ ರಾಣಿಯಾಗಲಿಕ್ಕೆ ತಕ್ಕವಳಿರುವೆ."

"ಮಹಾರಾಣಾಜೀ!" ಅರುಣಕುಮಾರಿಯು ಆನಂದೋದ್ರೇಕದಿಂದ—ನೀವು ನನಗೆ ಇಲ್ಲದ ಗೌರವವನ್ನು ಕೊಟ್ಟು ನಾಚಿಸಬೇಡಿರಿ. ರಾಜನ ರಾಣಿಯಾಗುವ ಭಾಗ್ಯವು ನನಗೆ ಹೇಗೆ ದೊರಕೀತು? ಸ್ವಾಮಿ ಅಜಿತಾನಂದರು ನಿಮ್ಮಂತೆಯೇ

ಭವಿಷ್ಯ ಸೂಚನೆ ಮಾಡಿದ್ದರು. ನನ್ನ ದುರ್ದೈವದಿಂದ ಅವರ ವಾಣಿಯು ಸಟಿಯಾಗಿ, ಯಾವನೊಬ್ಬ ಸಾಮಾನ್ಯ ರಜಪೂತ ವರನು ಸಹ ದೊರಕುವದು ದುರ್ಲಭವಾಗಿ ಹೋಗಿರುವದು. ಅವರ ಭವಿಷ್ಯವಾಣಿಯು ನಿಜವಾಗುವದೆಂಬ ವಿಶ್ವಾಸವು ಹುಟ್ಟಿದ್ದರೆ. ಆತ್ಮತ್ಯಾಗ ಮಾಡಲಿಕ್ಕೆ ಸಿದ್ಧಳಾಗುತ್ತಿದ್ದಿಲ್ಲ''

"ಅರುಣ, ಮಹಾತ್ಮರ ವಾಣಿಯು ಸುಳ್ಳಾಗುತ್ತಿರುವದಿಲ್ಲ. ನಾನು ಅಜಿತಾನಂದರ ಖ್ಯಾತಿಯನ್ನು ಕೇಳಿರುವೆನು. ಅವರ ಭವಿಷ್ಯವು ನಿಜವಾಗುವ ಯೋಗವಿದ್ದದರಿಂದಲೇ ಇಂದು ನೀನು ಜೀವದಿಂದುಳಿದೆ."

"ಒಂದು ಕ್ಷಣ ನಿಮ್ಮ ತರ್ಕವನ್ನು ನಿಜವೆಂದು ಗ್ರಹಿಸುವೆನು. ರಾಣಾಜೀ, ಕುಲಕಲಂಕಿನಿಯೆಂದು ಹೆಸರು ಪಡೆದ ನನ್ನನ್ನು ಯಾರು ವರಿಸುವರು? ಅಧಿಕಾರ ಸಂಪನ್ನರಾದ ನಿಮ್ಮ ಮುರುವತ್ತಿಗೆ ಒಳಪಟ್ಟು ಒಬ್ಬ ಸಾಮಾನ್ಯ ರಜಪೂತನು ಒಂದು ವೇಳೆ ನನ್ನನ್ನು ವರಿಸಬಹುದು. ರಾಜಮನೆತನದ ಸಂಬಂಧವಾಗುದು ಮಾತಾಡಿದಷ್ಟು ಸುಲಭವಲ್ಲವೆಂಬದನ್ನು ಚನ್ನಾಗಿ ಲಕ್ಷ್ಯದಲ್ಲಿಡಿರಿ''

"ಅರುಣಕುಮಾರಿ, ಈ ವಿಷಯದಲ್ಲಿ ನೀನು ಆಲೋಚನೆ ಮಾಡುವ ಕಾರಣವಿಲ್ಲ. ನಿನ್ನ ಮನಸ್ಸಿನಂತೆ ಕಾರ್ಯ ಮಾಡುವ ಭಾರವು ನನ್ನ ಮೇಲಿರುವದು. ಶರಧಿಯಲ್ಲಿ ಬಿದ್ದು ಮೃತ್ಯುಪಥವನ್ನು ಹಿಡಿಯಲುದ್ಯುಕ್ತಳಾಗಿದ್ದ ನಿನ್ನನ್ನು ಪಾರ ಮಾಡಿ, ಮತ್ತೆ ಅಂತಹ ಶರಧಿಯಲ್ಲಿಯೇ ಬಿಸುಟುವ ನಿಷ್ಠುರ ಹೃದಯದವನು ಈ ಉದಯಸಿಂಗನಲ್ಲವೆಂಬದನ್ನು ನೀನು ಚನ್ನಾಗಿ ಲಕ್ಷ್ಯದಲ್ಲಿಡು. ನಾನು ಇನ್ನೂ ಕೆಲವು ದಿನಗಳ ವರೆಗೆ ಪ್ರಯಾಗದಲ್ಲಿರುವೆನು. ಅಷ್ಟರಲ್ಲಿ ನಿನ್ನನ್ನು ಆನಂದಗಿರಿಯ ಅತ್ಯುಚ್ಚ ಶಿಖರದ ಮೇಲೆ ಕುಳ್ಳಿರಿಸುವೆನು. ಈ ಮಹಾರಾಣಾ ಉದಯಸಿಂಗನ ಯೋಗ್ಯತೆಯ ವರನು ದೊರಕಿದರೆ, ನೀನು ಅವನನ್ನು ಆನಂದದಿಂದ ವರಿಸುವೆಯಷ್ಟೆ?''

"ಮಹಾರಾಣಾಜಿಯವರೆ, ನಾನು ಅಂತಹ ಪುಣ್ಯವನ್ನು ಮಾಡಿರುವೆನೆ? ಉದಯಸಿಂಗ ಮಹಾರಾಣಾಜಿಯವರ ಯೋಗ್ಯತೆಯವರು ನನ್ನಂತಹ ಕುಲತ್ಯಾಗಿನಿಯ ಪಾಣಿಗ್ರಹಣ ಮಾಡಬಹುದೆ? ನೀವು ವಿನೋದಕ್ಕಾಗಿ ಹೀಗೆ ನುಡಿಯುತ್ತಿರುವದಿಲ್ಲವಷ್ಟೆ?''

"ವಿನೋದವಲ್ಲ; ಸತ್ಯವನ್ನೇ ಆಡುತ್ತಿರುವೆನು. ಅತುಲನೀಯ ಲಾವಣ್ಯಮಯಿಯಾದ ನಿನ್ನನ್ನು ಉದಯಸಿಂಗನ ಯೋಗ್ಯತೆಯವನೇ ಏಕೆ, ಪ್ರತ್ಯಕ್ಷ ಉದಯಸಿಂಗನು ಸಹ ವರಿಸಬಹುದು.''

ಅರುಣಕುಮಾರಿಯು ಬೆಚ್ಚಿಬಿದ್ದು, ಆಶ್ಚರ್ಯಚಕಿತಳಾಗಿ ಉದಯಸಿಂಗನ ಮುಖವನ್ನು ತನ್ನ ವಿಶಾಲನೇತ್ರಗಳಿಂದ ನೋಡಲಾರಂಭಿಸಿದಳು. ತಾನು ಸ್ವಪ್ನ ಸೃಷ್ಟಿಯಲ್ಲಿರುವೆನೋ, ಸತ್ಯಸೃಷ್ಟಿಯಲ್ಲಿರುವೆನೋ ಎಂಬದರ ಅರಿವು ಸಹ ಅವಳಿಗೆ ಉಳಿಯದಾಯಿತು. ಅವಳ ಸ್ಥಿತಿಯನ್ನು ನೋಡಿ ಉದಯಸಿಂಗನು ನಸುನಗುತ್ತ-

"ಅರುಣ, ನೀನು ಇಷ್ಟು ಬೆರಗಾಗುವ ಕಾರಣವಿಲ್ಲ. ನನ್ನ ಮಾತಿನ ಸತ್ಯತೆಯು ಬೇಗನೆ ತಿಳಿಯುವದು. ಈಗ ನೀನು ಮನೆಗೆ ತೆರಳು. ಹೆಚ್ಚು ವೇಳೆ ನಿಲ್ಲಲಿಕ್ಕೆ ನನಗೂ ಅವಕಾಶವಿಲ್ಲ. ಇಷ್ಟರಲ್ಲಿ ಚಿತೋಡದಿಂದ ಚಂದಾವತ ಸರದಾರನು ಬಂದಿರಬಹುದು" ಎಂದು ನುಡಿದು, ಉದಯಸಿಂಗನು ಅರುಣಕುಮಾರಿಯ ನಿರೋಪಹೊಂದಿ ಅಲ್ಲಿಂಪ ತೆರಳಿದನು.

ಅರುಣಕುಮಾರಿಯು ವಿಚಾರಸಾಗರದಲ್ಲಿ ತೇಲುತ್ತ ಮುಳುಗುತ್ತ ತರಂಗಗಳ ಆಘಾತದಿಂದ ಒಮ್ಮೆ ತನ್ನ ಮನೆಯನ್ನು ತಲುಪಿದಳು.

---

## ಮೇವಾಡದ ರಾಜಕಾರಣ.

ಮಹಾರಾಣಾ ಸಂಗ್ರಾಮಸಿಂಹನ ಎರಡನೆಯ ಮಗನಾದ ವಿಕ್ರಮಜಿತುವಿನ ರಾಜ್ಯದಾಡಳಿತವು ಪ್ರಜಾಜನರಿಗೂ ಅಧಿಕಾರಿಗಳಿಗೂ ಅಪ್ರಿಯವಾಗಿತ್ತು. ವಿಕ್ರಮ ಜಿತುವು ಮೇಲಿಂದ ಮೇಲೆ ದೊಡ್ಡ ದೊಡ್ಡ ಸರದಾರ ಮಂತ್ರಿ ಸೇನಾನಾಯಕರ ಅಪಮಾನ ಮಾಡತೊಡಗಿದ್ದನು. ಅಧಮತನದ ಹಾಗು ನಿಂದ್ಯವಾದ ಅನೇಕ ಕೃತಿಗಳು ಅವನಿಂದ ಘಟಿಸಿದ್ದವು. ರಾಜನು ದುಷ್ಕರ್ಮಿಯೂ, ಕಠೋರ ಹೃದ ಯಿಯೂ, ಅತ್ಯಾಚಾರಿಯೂ ಆದರೆ, ಪ್ರಜಾಜನರು ಪ್ರಕ್ಷುಬ್ಧರಾಗುವದು ಸ್ವಾಭಾ ವಿಕವು. ಪ್ರಜಾಜನರು ಅಸಂತುಷ್ಟರಾದರೆಂದರೆ ಅವರಲ್ಲಿಯ ರಾಜನಿಷ್ಠೆಯು ಸಹಜ ವಾಗಿ ನಾಶಹೊಂದಿ ಹೋಗುವದು. ರಾಜನ ಮೇಲೆ ರಾಷ್ಟ್ರದ ವರ್ಚಸ್ಸವಿರದಿದ್ದರೆ ಅವನು ಸದ್ವರ್ತನಿಯಾಗುವದು ಕಠಿಣವು. ಪ್ರಜಾವಿಟಂಬನೆ ಮಾಡುವ ರಾಜ ನನ್ನು ಪದಭ್ರಷ್ಟ ಮಾಡಿ ಪ್ರಜಾರಂಜನರತನಾದ ರಾಜನ ಯೋಜನೆ ಹೂಡುವ ಪದ್ಧತಿಯು ಸದ್ಯದ ಸ್ವಾತಂತ್ರ್ಯಯುಗದಷ್ಟು ಪೂರ್ವಕಾಲದಲ್ಲಿರದಿದ್ದರೂ, ಅಲ್ಪ ಮಟ್ಟಿಗಾದರೂ ಪ್ರಚಾರದಲ್ಲಿತ್ತೆಂದು ಐತಿಹಾಸಿಕ ದೃಶ್ಯಗಳಿಂದ ಕಂಡುಬರುವದು. ವಿಕ್ರಮಜಿತುವು ಪ್ರಜಾಛಲನೆ ಮಾಡತೊಡಗಿದೊಡನೆಯೆ ಅವನನ್ನು ನಾಶಮಾಡ ಬೇಕೆಂದು ಮೇವಾಡದ ಪ್ರಜಾಜನರು ನಿರ್ಧರಿಸಿದರು. ಇದೇ ಸಂಧಿಯಲ್ಲಿ ವಿಕ್ರಮ ಜಿತುವು ಕರಮಚಂದನೆಂಬ ಒಬ್ಬ ರಾಜನಿಷ್ಠ ಸರದಾರನ ಕೊಲೆಮಾಡಿದ್ದರಿಂದ ಓಲ ಗದ ಜನರೆಲ್ಲರೂ ಸಂತಪ್ತರಾದರು. ಆಗ ಅವರು ಸಂಗ್ರಾಮಸಿಂಹನ ಅಣ್ಣ ಪೃಥ್ವೀ ರಾಜನ ದಾಸೀ ಪುತ್ರನಾದ ಬನಬೀರನ ವಶದಲ್ಲಿ ರಾಜಸಿಂಹಾಸನವನ್ನು ಕೊಡ ಬೇಕೆಂದು ಗೊತ್ತು ಮಾಡಿ, ಅವನಿಂದ ವಿಕ್ರಮಜಿತುವಿನ ಕೊಲೆ ಮಾಡಿಸಿದರು.

ಸಂಗ್ರಾಮಸಿಂಗನಿಗೆ ಉದಯಸಿಂಗನೆಂಬ ಮತ್ತೊಬ್ಬ ಮಗನಿದ್ದನು. ಅವನು ಚಿಕ್ಕವನಿದ್ದುದರಿಂದ ಬನಬೀರನೇ ಸದ್ಯಕ್ಕೆ ರಾಜಸೂತ್ರಗಳನ್ನು ಕೈಯಲ್ಲಿ ತೆಗೆದು ಕೊಳ್ಳಬೇಕೆಂದು ಜನರ ಆಶೆಯಿತ್ತು; ಆದರೆ ರಾಜ್ಯಲೋಭವು ದುರತಿಕ್ರಮವಾದದ್ದು.

ವಿಕ್ರಮಜಿತುವಿನ ಕೊಲೆಯಾದ ಕೂಡಲೆ, ಬನಬೀರನು ಉದಯಸಿಂಗನ ಕೊಲೆ ಮಾಡಬೇಕೆಂದು ಅರಮನೆಗೆ ಬಂದನು. ಉದಯಸಿಂಗನ ಕೊಲೆಯಾಯಿತೆಂದರೆ ಚಿತೋಡದ ಮಹಾರಾಣಾನ ವಂಶವು ಸಮೂಲ ನಾಶಹೊಂದಿ, ರಾಜ್ಯವೈಭವವು ವಂಶಪರಂಪರವಾಗಿ ತನ್ನ ಮನೆತನಕ್ಕೆ ಉಳಿಯುವವೆಂದು ಅವನ ಗ್ರಹಿಕೆಯಿತ್ತು. ಅವನು ತನ್ನ ದುರಾಕಾಂಕ್ಷೆಯನ್ನು ಈಡೇರಿಸಿಕೊಳ್ಳಬೇಕೆಂದು ದೃಢಸಂಕಲ್ಪಮಾಡಿ ಕೊಂಡಿದ್ದನು ವಿಕ್ರಮಜಿತುವಿನ ಕೊಲೆಯ ವಾರ್ತೆಯು ತಿಳಿದ ಕೂಡಲೆ ರಾಣೀ ವಾಸದೊಳಗಿನ ಸ್ತ್ರೀಯರಲ್ಲಿ ಹಾಹಾಕಾರವೆದ್ದಿತು. ವಿಕ್ರಮಜಿತುವಿನಂತೆ ಉದಯ ಸಿಂಗನ ಕೊಲೆಯಾದರೂ ಆಗುವದೆಂದು ಗೊತ್ತಾದೊಡನೆಯೆ ಅವರು ಮತ್ತಿಷ್ಟು ಭಯಾಕುಲರಾದರು. ಆಗ ರಾಜನಿಷ್ಠಳಾದ ಪನ್ನೆಯೆಂಬ ದಾಸಿಯು ತನ್ನ ಮಗ ನನ್ನು ಬನಬೀರನ ಖಡ್ಗಕ್ಕೆ ಬಲಿಕೊಟ್ಟು, ರಾಜಕುಮಾರನನ್ನು ಕುಮಳಮೇರ ದುರ್ಗಕ್ಕೆ ತೆಗೆದುಕೊಂಡು ಹೋದಳು.

ಕುಮಳಮೇರದ ಸುಭೇದಾರನಾದ ಆಸಾಸಾಹನು ಉದಯಸಿಂಗನನ್ನು ಬಹಳೇ ಪ್ರೇಮದಿಂದ ರಕ್ಷಿಸತೊಡಗಿದನು. ಅವನ ಚರಿತ್ರವನ್ನಾದರೂ ರಹಸ್ಯ ವಾಗಿರಿಸಿದನು. ಈ ಮೇರೆಗೆ ಉದಯಸಿಂಗನು ಆಸಾಸಾಹನ ಮನೆಯಲ್ಲಿ ಏಳು ವರ್ಷಗಳನ್ನು ಕಳೆದನು. ಅನಂತರದಲ್ಲಿ ಸೋನೀಗಡದ ಠಾಕುರನು ಆಸಾಸಾಹನ ಭೆಟ್ಟಿಗಾಗಿ ಬಂದನು. ಠಾಕುರನಿಗೆ ಉದಯಸಿಂಗನು ರಜಪೂತ ರಾಜವಂಶೀಯನು ನೆಂಬದು ಗೊತ್ತಾಯಿತು. ಆಸಾಸಾಹನಾದರೂ ಅವನಿಗೆ ರಾಜಕುಮಾರನ ನಿಜ ವಾದ ವೃತ್ತಾಂತವನ್ನು ತಿಳಿಸಿದನು. ಸಂಗರಾಣಾನ ವಂಶಜನು ಜೀವಂತನಿರುವ ನೆಂಬ ಸಂಗತಿಯು ಮೆಲ್ಲಮೆಲ್ಲಗೆ ಎಲ್ಲ ಕಡೆಗೂ ಪಸರಿಸತೊಡಗಿತು. ಸಾಳುಂಬ್ರೆಯ ಠಾಕೂರನಾದ ಸಾಹಿದಾಸ ಚೊಂಡಾ, ಸೋನೀಗಡದ ಅಖಿರಾಜ, ಬಗೋರದ ಸಂಗರಾಜ, ಸಾಂಚೋರದ ಪೃಥ್ವೀರಾಜ ಹಾಗು ಲೋಣಕರ್ಣ ಜೇಠಾವತ ಮೊದ ಲಾದ ರಾಜನಿಷ್ಠ ಸರದಾರರು ಕುಮಳಮೇರಕ್ಕೆ ಹೋಗಿ ಉದಯಸಿಂಗನನ್ನು ಭೆಟ್ಟಿ ಯಾದರು ಉದಯಸಿಂಗನು ಸ್ವಾಮಿನಿಷ್ಠ ಪನ್ನಾದಾಸಿಯ ಅದ್ವಿತೀಯ ಸ್ವಾರ್ಥ ತ್ಯಾಗದಿಂದ ಬದುಕಿದನೆಂಬದು ಗೊತ್ತಾದಕೂಡಲೆ ಎಲ್ಲ ಜನರು ವಿಸ್ಮಯಾನಂದ ಭರಿತರಾದರು. ಚಿತೋಡದ ರಾಜಸಿಂಹಾಸನವನ್ನು ದೊರಕಿಸಿ ಕೊಡುವದಕ್ಕಾಗಿ ಸಾಹಸ ಮಾಡುವೆವೆಂದು ಎಲ್ಲರೂ ಉದಯಸಿಂಗನಿಗೆ ಆಶ್ವಾಸನ ಕೊಟ್ಟರು. ಸೋನೀ ಗಡದ ಠಾಕುರನು ತನ್ನ ಲಾವಣ್ಯವತಿ ಕುಮಾರಿಯಾದ ಸರೋಜಸುಂದರಿಯನ್ನು ಅವನಿಗೆ ಧಾರೆಯೆರೆದು ಕೊಟ್ಟನು. ಮುಂದೆ ಕೆಲವು ದಿನಗಳ ಮೇಲೆ ಉದಯ ಸಿಂಗನು ಝಾಲವಾಡದ ರಾವನ ಮಗಳನ್ನೂ ವಿವಾಹವಾದನು.

ಪೃಥ್ವೀರಾಜನ ದಾಸೀಪುತ್ರನಾದ ಬನಬೀರನ ರಾಜಾಡಳಿತವು ಜನರಿಗೆ ಅಪ್ರಿಯವಾಗಿತ್ತು. ಪರಂಪರವಾಗಿ ನಡೆದು ಬಂದ ಪದ್ಧತಿಯ ವಿರುದ್ಧವಾದ ಆಚ ರಣೆಗಳನ್ನು ಅವನು ಬಳಿಕೆಯಲ್ಲಿ ತಂದಿದ್ದನು. ರಾಜಸಿಂಹಾಸನವು ತನ್ನ ಸ್ವಾಧೀನ

ವಾಯಿತೆಂಬ ಉಬ್ಬಿನಿಂದ ಅವನು ಮನಸೋಕ್ತವಾಗಿ ನಡೆಯಲಾರಂಭಿಸಿದ್ದನು. ಅವನ ಈ ವರ್ತನವು ಓಲಗದೊಳಗಿನ ಸ್ವಾಮಿನಿಷ್ಠ ಸರದಾರರ ಮನಸ್ಸಿಗೆ ಬಂದಿರಲಿಲ್ಲ. ಅವರು ಬನಬೀರನ ಪಾರಿಪತ್ಯಗೊಳಿಸಬೇಕೆಂಬ ಸಾಹಸದಲ್ಲಿದ್ದರು. ಬನಬೀರನ ತರುವಾಯ ಮೇವಾಡಸಿಂಹಾಸನದ ಬಾಧ್ಯಸ್ಥರು ಯಾರೂ ಇಲ್ಲೆಂದು ಜನರ ತಿಳುವಳಿಕೆಯಿದ್ದುದರಿಂದ ಬನಬೀರನು ಇಷ್ಟು ದಿನಗಳ ವರೆಗೆ ರಾಜ್ಯದಾಡಳಿತವನ್ನು ಹಾಗೆ ಸಾಗಿಸಿದ್ದನು. ಸಂಗರಾಣಾನ ವಂಶಜನು ಕುಮುಳಮೇರದಲ್ಲಿ ಜೀವಂತನಿರುವನೆಂಬದು ಗೊತ್ತಾದೊಡನೆಯೆ ಜನರಿಗೆ ಪರಮಾನಂದವಾಯಿತು. ಬನಬೀರನನ್ನು ವಿಕ್ರಮಜಿತುವಿನ ಹಾದಿಗೆ ಹಚ್ಚಿ, ಉದಯಸಿಂಗನನ್ನು ತರಬೇಕೆಂದು ಅವರು ಸಂಚು ನಡೆಯಿಸಿದರು.

ಐಕ್ಯ, ಸದಭಿಮಾನ, ಸತ್ಪಕ್ಷಪಾತ ಮೊದಲಾದವುಗಳಿಗೆ ನಮ್ಮ ಭರತವರ್ಷವು ಪ್ರಾಚೀನಕಾಲದಿಂದಲೂ ಅಷ್ಟೊಂದು ಮಹತ್ವಕೊಟ್ಟಿಲ್ಲವೆಂದು ಹೇಳಿದರೆ ಪೂರಾ ತಪ್ಪಾಗಲಾರದು. ರಾಷ್ಟ್ರಧರ್ಮವಿಹೀನತೆಯೇ ನಮ್ಮ ರಾಷ್ಟ್ರದ ಅಧಃಪಾತಕ್ಕೆ ಕಾರಣವಾಗಿರುವದೆಂದು ಸಾರಿ ಹೇಳಬಹುದು. ಉದಯಸಿಂಗನ ಕಾಲದಲ್ಲಾದರೂ ಇಂತಹ ವ್ಯತ್ಯಗಳು ಅನೇಕವಿದ್ದವು. ಚಿತೋಡದ ನಿಜವಾದ ಔರಸಪುತ್ರನು ಅರವಲಿಯ ಗಿರಿಕಂದರಗಳಲ್ಲಿ ಬೆಳೆಯುತ್ತಿರುವನೆಂದೂ, ಪ್ರಬದ್ಧನಾದ ಮೇಲೆ ಅವನ ಸ್ವಾಧೀನಕ್ಕೆ ಸಿಂಹಾಸನವನ್ನು ಕೊಡಬೇಕೆಂದೂ ಬಹಳೇ ಜನರು ಯತ್ನಿಸಿದ್ದರು. ಚಂದಾವತ ಸರದಾರನಾದ ಸಾಹಿದಾಸನು ಅತ್ಯಂತ ರಾಜನಿಷ್ಠನಿದ್ದು, ಬನಬೀರನ ಅವಿಚಾರಿ ವರ್ತನಕ್ಕೆ ವಿರೋಧಿಯಾಗಿದ್ದನು. ಪೃಥ್ವೀರಾಜ, ಸಂಗರಾಜ ಮೊದಲಾದ ಮಂಡಲೇಶ್ವರರು ಇದೇ ಹಾದೀ ಹಿಡಿದಿದ್ದರು. ಚಿತೋಡದ ಓಲಗದಲ್ಲಿ ಬನಬೀರನ ಪಕ್ಷಪಾತಿಗಳಾದ ಕೆಲವು ಸರದಾರರಿದ್ದರು. ಅವರು ಉದಯಸಿಂಗನ ವಿರುದ್ಧವಿದ್ದು, ಬನಬೀರನ ಹಿತದ ಕಡೆಗೆ ಚನ್ನಾಗಿ ಲಕ್ಷ್ಯಗೊಡುತ್ತಿದ್ದರು. ಅವರಲ್ಲಿ ಮಾಹೋಲಿಯ ಸೋಳಂಖಿಯೂ, ಠಾಣೆಯ ಮಾಲೋಜಿಯೂ ಅಗ್ರಗಣ್ಯರಾಗಿದ್ದರು. ಅವರು ಉದಯಸಿಂಗನ ನಾಶಕ್ಕಾಗಿಯೂ ಬನಬೀರನ ಹಿತಕ್ಕಾಗಿಯೂ ಸದೈವ ಜಾಗ್ರತರಾಗಿರುತ್ತಿದ್ದರು. ಉದಯಸಿಂಗನು ತನ್ನ ಸಿಂಹಾಸನವನ್ನು ಇಚ್ಛಿಸಿದರೆ ಅವನ ವಿರುದ್ಧವಾಗಿ ಸಂಗ್ರಾಮ ಮಾಡಲಿಕ್ಕೆ ಅವರ ಸಿದ್ಧತೆಯಿತ್ತು. ಬನಬೀರನಾದರೂ ಈ ಶಕ್ತಿಸಂಪನ್ನರಾದ ಸರದಾರರ ಬಲವನ್ನವಲಂಬಿಸಿಯೇ ಉದಯಸಿಂಗನೊಡನೆ ಕಾದಬೇಕೆಂದು ಮನಸ್ಸು ಮಾಡಿದ್ದನು.

ಝಾಲವಾಡದ ರಾವನು ತನ್ನ ಮಗಳನ್ನು ಉದಸಿಂಗನಿಗೆ ಕೊಟ್ಟನಷ್ಟೆ? ಈ ವಿವಾಹವು ಬಲ್ಹೀ ಎಂಬಲ್ಲಿ ನೆರವೇರಿತು. ವಿವಾಹ ಕಾಲದಲ್ಲಿ ಮೇವಾಡದ ಠಾಕುರರೂ ಸರದಾರರೂ ಉದಯಸಿಂಗನಿಗೆ ಕಾಣಿಕೆಗಳನ್ನೂ, ಉಡುಗರೆಗಳನ್ನೂ ಕೊಟ್ಟರು. ಮಾಹೋಲಿಯ ಸೋಳಂಖಿ ಹಾಗು ಠಾಣೆಯ ಮಾಲೋಜಿ ಇವರು ಮಾತ್ರ ರಾಣಾನ ಸನ್ಮಾನಾರ್ಥವಾಗಿ ಕಾಣಿಕೆ ಕಳುಹಿಸಲಿಲ್ಲ; ಹಾಗು ನಿಮಂತ್ರ

ಣದ ಮೇರೆಗೆ ವಿವಾಹಕ್ಕೆ ಸಹ ಹೋಗಲಿಲ್ಲ. ಅವರ ಈ ಅಪಮಾನಕಾರಕ ಕೃತಿಯು ಉದಯಸಿಂಗನಿಗೂ ಅವನ ಸ್ವಾಮಿನಿಷ್ಠ ಸರದಾರರಿಗೂ ಸಹನವಾಗ ಲಿಲ್ಲ. ಸಾಹಿದಾಸ ಚೊಂಡಾನಂತೂ ಅವರಿಬ್ಬರ ಪಾರಿಪತ್ಯ ಮಾಡಬೇಕೆಂದೇ ನಿರ್ಧರಿಸಿದನು. ಉನ್ಮತ್ತರೂ ರಾಜದ್ರೋಹಿಗಳೂ ಆದ ಆ ಸರದಾರರ ಮೇಲೆ ದಾಳಿ ಮಾಡಿ ಅದೇ ದಾಳಿಯಲ್ಲಿ ಸ್ವಾರ್ಥಲೋಲುಪನೂ ಮದಾಂಧನೂ ಆದ ಬನ ಬೀರನನ್ನು ಪದಭ್ರಷ್ಟಗೊಳಿಸಬೇಳಿಸಬೇಕೆಂದು ಮೇವಾಡದ ಸ್ವಾಮಿನಿಷ್ಠ ಸರದಾರ ಠಾಕುರರು ಯೋಚಿಸಿದ್ದರು. ಅವರು ಉದಯಸಿಂಗನೊಡನೆ ಒಳಸಂಚು ನಡೆಯಿಸಿ ದರು. ಮೇವಾಡದಿಂದ ಕುಮಳಮೇರದ ವರೆಗೂ ಕುಮಳಮೇರದಿಂದ ಮೇವಾ ಡದ ವರೆಗೂ ಗುಪ್ತಚರರು ಎಡತಾಕ ತೊಡಗಿದರು. ಕುಮಳಮೇರದ ಸುಭೇದಾ ರನಾದ ಅಸಾಸಾಹನು ಉದಯಸಿಂಗನಿಗೆ ಬೇಕಾದ ಸಹಾಯ ಮಾಡಲಿಕ್ಕೆ ಸಿದ್ಧ ನಾದನು. ಸೋನೀಗಡದ ಆಖಿರಾಜ, ಸಾಂಚೋರದ ಪೃಥ್ವೀರಾಜ, ಎಲ್ಲ ಚೋಂಡಾವತ ಠಾಕುರರು, ಬಗೋರದ ಸಂಗರಾಜ ಮೊದಲಾದವರು ಬನಬೀರನ ಮತ್ತು ಅವನ ಅನುಯಾಯಿಗಳಾದ ಸೋಳಂಖಿ ಹಾಗು ಮಾಲೋಜಿ ಇವರ ಪಾರಿಪತ್ಯಗೊಳಿಸಲಿಕ್ಕೆ ಟೊಂಕಕಟ್ಟಿದರು.

ಸಂಗರಾಣಾನ ಮಕ್ಕಳಲ್ಲಿ ರತ್ನಸಿಂಗ ವಿಕ್ರಮಜಿತುಗಳು ದುರಾಚರಣಿಗಳೂ ದುಷ್ಟರೂ ಆಗಿ ಅವರು ತಮ್ಮ ಮೃತ್ಯುವನ್ನು ತಾವೇ ಬರಮಾಡಿಕೊಂಡಂತಾದ್ದರಿಂದ ಮೇವಾಡದ ರಾಜನಿಷ್ಠ ಪ್ರಜಾಜನರು ರಾಜವಂಶದ ವಿಷಯಕ್ಕೆ ಎಷ್ಟೇ ಅನಾದರ ಭಾವವನ್ನು ತಳೆದಿದ್ದರೂ, ದಾಸೀ ಪುತ್ರನಾದ ಬನಬೀರನು ಅವರ ಮನಸ್ಸನ್ನು ಎಳೆದುಕೊಳ್ಳಲು ಎಂದೂ ಸಮರ್ಥನಾಗಲಿಲ್ಲ. ಅವನಲ್ಲಿ ಬಹು ಜನರು ತಿರಸ್ಕಾರ ಭಾವನೆಯುಳ್ಳವರಾಗಿದ್ದರು. ದಾಸೀ ಪುತ್ರನು ಮೇವಾಡದ ಪವಿತ್ರತಮವಾದ ಸಿಂಹಾಸನವನ್ನಲಂಕರಿಸುವದು ತಮ್ಮ ಶೀಲಕ್ಕೂ ಗೌರವಕ್ಕೂ ಕುಂದು ತರುವಂತಹ ಸಂಗತಿಯೆಂದು ಅವರ ತಿಳುವಳಿಕೆಯಾಗಿತ್ತು. ಇಂಥದರಲ್ಲಿ ಅವನ ಗುಣಗಳೂ ವಿಪರೀತವಾದ್ದರಿಂದ ಪ್ರಜಾಕ್ಷೋಭೆಗೆ ಮತ್ತಿಷ್ಟು ಚಾಲನವು ದೊರೆಯಿತು. ಉದಯ ಸಿಂಗನು ಸಂಗ್ರಾಮಸಿಂಹನ ಮಗನೆಂಬ ಸಂಗತಿಯು ಸ್ವಾಮಿನಿಷ್ಠ ಪನ್ನಾದಾಸಿ ಹಾಗು ಕುಮಳಮೇರದ ಅಸಾಸಾಹ ಮೊದಲಾದವರ ಮುಖಾಂತರವಾಗಿ ತಿಳಿದ ಕೂಡಲೆ ಅವರ ಸಹಜಸಿದ್ಧವಾದ ಸ್ವಾಮಿನಿಷ್ಠೆಯು ಜಾಗ್ರತವಾಯಿತು. ಆಗ ಅವರು ಪಟ್ಟಬಾಧ್ಯನಾದ ಉದಯಸಿಂಗನ ವಶದಲ್ಲಿ ರಾಜ್ಯಸೂತ್ರಗಳು ಬರುವಂತೆ ಮಾಡಬೇಕೆಂದು ಸಿದ್ಧರಾದರು.

ಉದಯಸಿಂಗನು ವಿಲಾಸವೃತ್ತಿಯವನಿದ್ದನು. ಅವನಿಗೆ ಕುಮಳಮೇರ ದುರ್ಗದಲ್ಲಿರುವದು ಬೇಸರವಾಯಿತು. ಆಗ ಅವನು ತನ್ನ ಪರಿವಾರದೊಡನೆ ಪ್ರಯಾಗಕ್ಷೇತ್ರದಲ್ಲಿರತೊಡಗಿದನು. ಕೃಷ್ಣಲಾಲನ ಮನೆಯ ಸಮೀಪದಲ್ಲಿಯೆ ಅವನ ಅರಮನೆಯಿತ್ತು. ರಾಜಕಾರಣದ ಒಳಸಂಚು ನಡೆದಾಗ ಉದಯಸಿಂಗನು

ಪ್ರಯಾಗದಂತಹ ಕ್ಷೇತ್ರವನ್ನು ಹಿಡಿದು ವಿಲಾಸವೃತ್ತಿಯಲ್ಲಿ ದಿನಕಳೆಯುವದು ಮೇವಾಡದ ರಾಜನಿಷ್ಠ ಸರದಾರರಿಗೆ ಸರಿದೋರಲಿಲ್ಲ. ಅವನ ಹಿರಿಯ ರಾಣಿಯಾದ ಸರೋಜಸುಂದರಿಯಾದರೂ ಪತಿಯ ರಾಜಕಾರಣದುರ್ಲಕ್ಷ್ಯತನವನ್ನೂ, ವಿಲಾಸ ವೃತ್ತಿಯನ್ನೂ ಅಲ್ಲಗಳೆಯುತ್ತಿದ್ದಳು. ಮೇವಾಡದ ಸರದಾರರಲ್ಲಿ ಸಾಹಿದಾಸ ಚೋಂಡಾನು ಉದಯಸಿಂಗನಲ್ಲಿ ಅತಿಯಾಗಿ ಭಕ್ತಿಯುಳ್ಳವನಾಗಿದ್ದನು. ಅವನು ಮೇವಾಡದ ಸದ್ಯದ ರಾಜಕಾರಣದಲ್ಲಿ ಅಗ್ರೇಸರನಾಗಿದ್ದನು. ರಾಜದ್ರೋಹಿಗಳಾದ ಸರದಾರರನ್ನೂ, ಸ್ವಾರ್ಥಲೋಲುಪನಾದ ಬನಬೀರನನ್ನೂ ಬೇಗನೆ ಪಾರಿಪತ್ಯ ಗೊಳಿಸಬೇಕೆಂದು ಸಾಹಿದಾಸನ ದೃಢಸಂಕಲ್ಪವಿತ್ತು. ಯಾವ ಬಗೆಯಿಂದ ಶತ್ರು ಗಳ ದಮನ ಮಾಡಬೇಕೆಂಬದನ್ನು ವಿಚಾರಿಸುವದಕ್ಕಾಗಿ ಅವನು ಪ್ರಯಾಗಕ್ಕೆ ಬಂದನು.

ಸಾಹಿದಾಸನು ಬಂದಾಗ ಉದಯಸಿಂಗನು ಅರಮನೆಯಲ್ಲಿದ್ದಿಲ್ಲ; ವಿಶ್ರಾಂತಿ ಗಾಗಿ ಸರೋವರ ತಟಾಕಕ್ಕೆ ಹೋಗಿದ್ದನು. ಅವನ ಹಿರಿಯರಾಣಿಯಾದ ಸರೋಜ ಸುಂದರಿಯು ಅವನನ್ನು ಓಲಗದ ಕೋಣೆಯಲ್ಲಿ ಕುಳ್ಳಿರಿಸಿಕೊಂಡು, ಮೇವಾಡದ ರಾಜಕಾರಣ ವಿಷಯವನ್ನು ಕೇಳತೊಡಗಿದ್ದಳು. ರಾಜಕಾರಣದ ವಿಷಯದಲ್ಲಿ ಸರೋಜಸುಂದರಿಯ ಒಲವು ಇದ್ದದ್ದನ್ನು ನೋಡಿ ಸಾಹಿದಾಸನಿಗೆ ಪರಮಾನಂದ ವಾಯಿತು. ಅವನು ಎಲ್ಲ ಸಂಗತಿಗಳನ್ನು ರಾಣಿಗೆ ಹೇಳಿದನು. ಅಷ್ಟರಲ್ಲಿ ರಾಣಾನೂ ಅಲ್ಲಿಗೆ ಬಂದನು. ಸಾಹಿದಾಸನು ಅವನಿಗೆ ವಂದನೆಗಳನ್ನರ್ಪಿಸಿದನು. ಅನಂತರ ದಲ್ಲಿ ಉದಯಸಿಂಗನು:—"ಸರದಾರರೆ, ಮೇವಾಡದ ರಾಜಕಾರಣವು ಎಲ್ಲಿಗೆ ಬಂದಿ ರುವದು? ಮದಾಂಧರೂ ದುಷ್ಟರೂ ಆದ ಮಾಲೋಜಿ ಹಾಗು ಬನಬೀರರ ಪಾರಿ ಪತ್ಯಗೊಳಿಸುವಷ್ಟು ಸಿದ್ಧತೆಯಾಗಿರುವದೊ?"

"ಮಹಾರಾಣಾಜಿ!" ಸಾಹಿದಾಸ ಚೋಂಡಾನು ವಿನಯದಿಂದಲೂ ಭಕ್ತಿ ಯಿಂದಲೂ— "ತಮ್ಮ ಏಕನಿಷ್ಠ ಸೇವಕರಿಗೆ ಯಾವದು ತಾನೆ ಅಸಾಧ್ಯವು? ಯಾವ ನಿಮಿತ್ಯದಿಂದಲೋ ನೀವು ಕುಂಭಳಮೇರವನ್ನು ತ್ಯಜಿಸಿ ಇಲ್ಲಿಗೆ ಬಂದದ್ದರಿಂದ ಇಷ್ಟು ದಿನಗಳ ವರೆಗೆ ನಮ್ಮ ಕಾರ್ಯವು ತಡೆದು ನಿಂತಿತು. ನೀವು ಹೊರಡುವ ದೊಂದೇ ಅವಕಾಶವು. ಎಲ್ಲ ಸರದಾರರೂ ನಿಮ್ಮ ಮಾರ್ಗಪ್ರತೀಕ್ಷೆ ಮಾಡುತ್ತ ಲಿರುವರು."

"ಸಾಹಿದಾಸರೆ, ಸರದಾರರೆಲ್ಲರೂ ನನ್ನ ಮಾರ್ಗಪ್ರತೀಕ್ಷೆ ಮಾಡುವ ಉದ್ದೇಶ ವೇನು? ಇಷ್ಟು ಜನ ಸರದಾರರೂ ಅಮೋಘ ಸೈನ್ಯವೂ ಇರುತ್ತಿರುವಾಗ ನಾನೊಬ್ಬ ನಿಲ್ಲದಿದ್ದರೆ ಯಾವ ಅಡ್ಡಿಯಾಗುವದು? ನೀವು ವಿಜಯ ಸಂಪಾದನೆ ಮಾಡಿಕೊಂಡು ಇಲ್ಲಿಗೆ ಬರ್ರಿ. ಕೂಡಲೆ ನಾನು ನಿಮ್ಮ ಹಿಂದೆ ಚಿತೋಡಕ್ಕೆ ಹೊರಡುವೆನು."

ಉದಯಸಿಂಗನ ವಿಲಕ್ಷಣವಾದ ಮಾತುಗಳನ್ನು ಕೇಳಿ ಸಾಹಿದಾಸನು ಬೆರ ಗಾದನು! ಮೇವಾಡದ ನಾಮಾಂಕಿತ ರಾಜಮನೆತನದಲ್ಲಿ ಇತ್ತೀಚೆಗೆ ಇಂತಹ

ಕರ್ತೃತ್ವಶೂನ್ಯರೂ ರಾಜನೀತಿಹೀನರೂ ಉದಯುವಾಗತೊಡಗಿದ್ದನ್ನು ನೋಡಿ ಅವನಿಗೆ ಪರಮಾವಧಿಯಾದ ದುಃಖವಾಯಿತು. ರತ್ನಸಿಂಗ ವಿಕ್ರಮಜಿತುಗಳಂತೆ ಉದಯುಸಿಂಗನಾದರೂ ಒಂದು ಬಗೆಯಿಂದ ರಾಜ್ಯಭಾರವನ್ನು ವಹಿಸಲಿಕ್ಕೆ ಅನರ್ಹನೇ ಇರುವನೆಂದು ತತ್‌ಕ್ಷಣದಲ್ಲಿ ಅವನು ಗುಂಗುತಿಸಿದನು; ಆದರೆ ಉದಯುಸಿಂಗನು ರಾಜವಂಶೀಯನಿದ್ದುದರಿಂದ ಹೇಗಿದ್ದರೂ ಅವನು ತನಗೆ ಪೂಜ್ಯನೆಂದು ತಿಳಿದು ಮನೋವಿಕಾರವನ್ನು ವ್ಯಕ್ತಪಡಿಸಲಿಲ್ಲ. ಆಗ ಅವನು ಶಾಂತಸ್ವರದಿಂದ:-"ಮಹಾರಾಣಾಜಿ, ನಾಯಕರಿಲ್ಲದಿದ್ದರೆ ಸೈನ್ಯವು ಕಟ್ಟನಲ್ಲಿ ಉಳಿಯಲಾರದು. ತಾವು ಯುದ್ಧಭೂಮಿಗೆ ಬಂದರೆ, ತಮ್ಮ ಎಲ್ಲ ಸರದಾರರೂ, ಸೈನಿಕರೂ ಐಕ್ಯದಿಂದಲೂ, ಉತ್ಸಾಹದಿಂದಲೂ, ಶೂರತನದಿಂದಲೂ ಕಾದಿ ವಿಜಯಸಂಪಾದನೆ ಮಾಡಿಕೊಳ್ಳುವರು. ಸದ್ಯದ ಭಾಗ್ಯೋದಯ ಪ್ರಸಂಗದಲ್ಲಿ ಕರ್ತವ್ಯಶೂನ್ಯರಾಗಿ, ಪ್ರಯಾಗಕ್ಷೇತ್ರವನ್ನು ಹಿಡಿದು ಕುಳಿತುಕೊಳ್ಳುವ ಮಹತ್ವದ ಪ್ರಸಂಗವೇನುಂಟು?"

"ಸ್ವಾಮಿನಿಷ್ಠ ಸೇವಕರು ಕೇವಲ ಸ್ವಾಮಿಯನ್ನೇ ಅವಲಂಬಿಸಿ ಕುಳಿತುಕೊಳ್ಳಬಾರದು. ನಾನು ಸಮರಭೂಮಿಗೆ ಬರಬೇಕೆಂದು ನಿಮ್ಮ ಇಚ್ಛೆಯಿರುವದಷ್ಟೆ? ನಾನು ಕೆಲವು ದಿನ ತಡೆದು ಕುಮುಳಮೇರಕ್ಕೆ ಬರುವೆನು. ನಾನು ಬಂದ ಮೇಲೆಯೆ ದಂಡಯಾತ್ರೆಯನ್ನು ಪ್ರಾರಂಭಿಸುವ ಬಗ್ಗೆ ಸೂಚಿಸುವೆನು"

ಭಾಗ್ಯೋದಯಪ್ರಸಂಗದಲ್ಲಿ ಉದಯುಸಿಂಗನು ದಿನಾವಧಿ ಮಾಡತೊಡಗಿದ್ದುದು ಸರೋಜಸುಂದರಿಗೆ ಸರಿದೋರಲಿಲ್ಲ. ಆಗ ಅವಳು ಪತಿಯನ್ನು ಕುರಿತು:-"ಸಾಹಿದಾಸರು ನನ್ನ ಮುಂದೆ ಎಲ್ಲ ಸಂಗತಿಯನ್ನು ಮೊದಲೇ ತಿಳಿಸಿರುವರು. ಎಲ್ಲ ಸರದಾರರು ಈಗಾಗಲೆ ದಂಡಯಾತ್ರೆಯ ಸಿದ್ಧತೆ ಮಾಡಿರುವದು. ನೀವು ನಿರರ್ಥಕವಾಗಿ ದಿನಾವಧಿ ಮಾಡಬಾರದು. ಇಲ್ಲಿ ಅಂತಹ ಮಹತ್ವದ ರಾಜಕಾರಣವೇನಿರುವದು?"

"ರಾಜಕಾರಣವೇನಿರದಿದ್ದರೂ ಗೃಹಕಾರಣವಿದೆ. ಇನ್ನೆರಡು ದಿನ ತಡೆದು ಹೋದರೆ ಹಾನಿಯೇನು? ಎಲ್ಲ ಕೆಲಸವನ್ನು ಸಾವಧಾನದಿಂದ ಮಾಡಬೇಕು; ತ್ವರೆಯು ಕೆಲಸದ್ದಲ್ಲ."

"ಮಹಾರಾಣಾಜೀ, ನಿಮ್ಮ ಇಚ್ಛೆಯಿದ್ದಂತಾಗಲಿ. ನಾನು ನನ್ನ ಪಥಕದ ಒಂದು ಭಾಗವನ್ನು ಇಲ್ಲಿಯೇ ಬಿಡುವೆನು. ನೀವು ಆ ಪಥಕದೊಂದಿಗೆ ಕುಮುಳಮೇರಕ್ಕೆ ಹೋಗಿರಿ. ಅಲ್ಲಿಯ ಸುಭೇದಾರರನ್ನು ಕೂಡಿಕೊಂಡು ಸಾಧ್ಯವಾದಷ್ಟು ಬೇಗನೆ ಚಿತೋಡಕ್ಕೆ ಹೊರಡತಕ್ಕದ್ದು ಸೋಳಂಖಿ-ಮಾಲೋಜಿಯರ ಪಾರಿಪತ್ಯಗೊಳಿಸಿದರೆ ಬನಬೀರನು ತಾನಾಗಿ ಮೆತ್ತಗಾಗುವನು. ಸದ್ಯದಲ್ಲಿ ಚಿತೋಡದ ರಾಜಸಿಂಹಾಸನವು ಅಲ್ಪ ಸಾಹಸದಿಂದ ಕೈವಶವಾಗುವಂತಿದೆ. ಈ ಸಂಧಿಯಲ್ಲಿ ನೀವು ದುರ್ಲಕ್ಷ್ಯ ಮಾಡಿದರೆ ಇಷ್ಟು ದಿನಗಳ ಪ್ರಯತ್ನವು ನಿಷ್ಫಲವಾಗಿ, ಮುಂದೆ ಕಾರ್ಯಸಾಧನೆ ಮಾಡಿಕೊಳ್ಳುವದು ಕಠಿಣವಾಗಬಹುದು"

"ಸಾಹಿದಾಸರೆ, ನೀವು ನಿಶ್ಚಿಂತೆಯಿಂದಿರತಕ್ಕದ್ದು ನನಗೆ ಎಲ್ಲವೂ ತಿಳಿದಿದೆ. ಶೂರರೂ, ರಾಜಕಾರಣಪಟುಗಳೂ, ಕರ್ತವ್ಯದಕ್ಷರೂ, ಸ್ವಾಮಿನಿಷ್ಠರೂ, ಪ್ರಭಾವಶಾಲಿಗಳೂ ಆದ ನಿಮ್ಮಂತಹ ಸರದಾರರಿದ್ದ ಮೇಲೆ ಯಾವದು ತಾನೆ ದುಸ್ಸಾಧ್ಯವು? ನಾನು ಬೇಗನೆ ಇಲ್ಲಿಂದ ಹೊರಡುವೆನು."

ಉದಯುಸಿಂಗನ ಮಾತುಗಳಿಂದ ಸಾಹಿದಾಸನಿಗೆ ಸಮಾಧಾನವೆನಿಸಲಿಲ್ಲ; ಆದರೆ ಅವನು ಮಾಡುವದೇನು? ದೇವತಾಕ್ಷೋಭೆಯಿಂದಲೇ ಉದಯುಸಿಂಹನಂತಹ ತೇಜೋಹೀನರು ಮೇವಾಡದ ರಾಜಮನೆತನದಲ್ಲಿ ಹುಟ್ಟತೊಟಗಿರುವರೆಂದು ಬಗೆದು, ಅವನು ರಾಣಾನ ಆಜ್ಞೆಯನ್ನು ಹೊಂದಿ ಅಲ್ಲಿಂದ ತೆರಳಿದನು.

---

## ಪ್ರೇಮ-ಮೀಲನ.

ಸಂಧ್ಯಾಕಾಲದ ಸಮಯುವಾಗಿತ್ತು. ಭಗವಾನ್ ಅಂಶುಮಾಲಿಯು ತನ್ನ ದಿನಚರ್ಯೆಯನ್ನು ಪೂರೈಸಿಕೊಂಡು ಪಶ್ಚಿಮಾಂಬುಧಿಯನ್ನು ಸೇರಲುದ್ಯುಕ್ತನಾಗಿದ್ದನು. ಅಸ್ತಮಾನ ಸೂರ್ಯನ ಹೊಂಬಣ್ಣದ ಕಿರಣಗಳು ಪ್ರಯಾಗಕ್ಷೇತ್ರದ ಮೇಲೆಯೂ ತ್ರಿವೇಣೀತೀರದಲ್ಲಿಯೂ ಬಿದ್ದು ಆ ಸ್ಥಳವನ್ನು ಒಳಿತಾಗಿ ಶೋಭೆಗೊಳಿಸಿದ್ದವು. ಮಂದಮಾರುತನು ಪುಷ್ಪಗಂಧವನ್ನು ಹೊತ್ತುಕೊಂಡು ಮೆಲ್ಲಮೆಲ್ಲನೆ ಸಂಚರಿಸತೊಡಗಿದ್ದನು. ಪಾವನಕರಳಾದ ತ್ರಿವೇಣಿಯು ತನ್ನ ಗೌರವವನ್ನು ತಾನೇ ಹೊಗಳಿಕೊಳ್ಳುವಳೋ ಏನೋ ಎಂಬಂತೆ "ಖಳ-ಖಳ" ಧ್ವನಿಗೈಯುತ್ತ, ಪತಿಯಾದ ಸಮುದ್ರನಾಥನ ಸಾನಿಧ್ಯವನ್ನು ಹೊಂದುವದಕ್ಕಾಗಿ ವೇಗದಿಂದ ಸಾಗಿದ್ದಳು. ಇಂತಹ ಪ್ರಶಾಂತ ಸಮಯದಲ್ಲಿ ತ್ರಿವೇಣೀತೀರದ ವಾಲುಕಾಮಯ ಪ್ರದೇಶದಲ್ಲಿ ಒಬ್ಬ ನವಯುವತಿಯು ಕುಳಿತುಕೊಂಡಿದ್ದಳು. ಅವಳು ಮುಗಿಲಬಣ್ಣದ ರೇಶಿಮೆಯ ವಸ್ತ್ರವನ್ನುಟ್ಟು, ಅಂತಹ ಬಣ್ಣದ್ದೇ ಕಂಚುಕವನ್ನು ತೊಟ್ಟಿದ್ದಳು. ಅವಳ ಮೈಮೇಲೆ ಬಹಳ ಅಲಂಕಾರಗಳಿರಲಿಲ್ಲ ಇದ್ದ ಒಂದೆರಡು ಅಲಂಕಾರಗಳೇ ಆ ನಿರ್ಜರಾಂಗನೆಯ ಸೊಬಗನ್ನು ವೃದ್ಧಿಗೊಳಿಸಿದ್ದವು. ಅವಳ ಕೊರಳೊಳಗಿನ ಕಾಂತಿಯುಕ್ತ ಮೌಕ್ತಿಕ ಮಾಲೆಯು ಅವಳ ಕಾಂತಿಯುಕ್ತವಾದ ಮುಖದ ಕಾಂತಿಯನ್ನು ದ್ವಿಗುಣಿತವನ್ನಾಗಿ ಮಾಡಿತ್ತು. ಅವಳ ಗೌರವರ್ಣದ ಅಂಗವರ್ಣವು ಸುವರ್ಣ ವರ್ಣದ ರವಿಕಿರಣಗಳಿಂದ ಸುವರ್ಣ ಚಂಪಕವನ್ನು ಹೀಯಾಳಿಸುತ್ತಿರುವಂತೆ ಭಾಸಮಾನವಾಗತೊಡಗಿತ್ತು. ಯಾವದೋ ಒಂದು ನಭೂತಪೂರ್ವವಾದ ಆನಂದದಿಂದ ಅವಳ ಮುಖವು ಮತ್ತಿಷ್ಟು ಪ್ರಕಾಶಮಾನವಾಗಿತ್ತು. ಹೃದಯದಲ್ಲಿ ಎಡವಿಡದೆ ಅಲೆದಾಡತೊಡಗಿದ ಆನಂದಲಹರಿಗಳಿಂದ ಅವಳು ಭಾವನಾಪರವಶಳಾಗಿದ್ದಳು. ಆ ತರುಣಿಯು ಯಾರದೋ ಮಾರ್ಗಪ್ರತೀಕ್ಷೆ ಮಾಡುತ್ತಿರುವಂತೆ ಅವಳ ಮುಖಲಕ್ಷಣದಿಂದ ಸ್ಪಷ್ಟವಾಗಿ ತಿಳಿಯುವಂತಿತ್ತು.

ಅವಳು ಬಹಳ ವೇಳೆಯವರೆಗೆ ಮಾರ್ಗ ನಿರೀಕ್ಷಣೆ ಮಾಡಬೇಕಾಗಲಿಲ್ಲ. ಸ್ವಲ್ಪ ವೇಳೆಯಲ್ಲಿಯೇ ನವವಯಸ್ಕನಾದ ಒಬ್ಬ ತರುಣನು ಅಲ್ಲಿಗೆ ಬಂದನು.

"ಅರುಣಕುಮಾರಿ!" ತರುಣನು ಆ ಯುವತಿಯನ್ನು ಕುರಿತು ನಗೆ ಮೊಗದಿಂದ—"ನೀನು ಇಲ್ಲಿಗೆ ಬಂದು ಬಹಳ ವೇಳೆಯಾಗಿರುವದೆಂದು ನಾನು ತರ್ಕಿಸಿರುವೆನು "

"ಮಹಾರಾಣಾಜೀ!" ಅರುಣಕುಮಾರಿಯು ಮಂದಹಾಸದಿಂದ—"ನಾನು ಇಲ್ಲಿಗೆ ಬಂದು ಒಂದೇ ಗಳಿಗೆಯಾಯಿತು."

"ಕಾರ್ಯಬಾಹುಲ್ಯದ ಮೂಲಕ ನನ್ನಿಂದ ವಿಲಂಬವಾಯಿತು. ನಾನು ತಡ ಮಾಡಿದ್ದಕ್ಕೆ ನಿನಗೆ ತೊಂದರೆಯಾಗಿರಬಹುದಲ್ಲವೆ?"

"ಉದಯಸಿಂಗರಾಣಾಜಿ, ನನಗೇನೂ ತೊಂದರೆಯಾಗಿಲ್ಲ; ನಿಮ್ಮಿಂದ ತಡವೂ ಆಗಿಲ್ಲ ನಿಮ್ಮ ದೃಷ್ಟಿಯಿಂದ ನಾನು ಕಃಪದಾರ್ಥವಾಗಿರುವೆನು. ಹೀಗಿದ್ದರೂ ನನ್ನ ಸಲುವಾಗಿ ನೀವು ಬಹುಪರಿಯಾಗಿ ತೊಂದರೆಪಟ್ಟಿರಿ. ಮೇವಾಡದ ಮಹಾರಾಣಾಜಿಯವರು ಒಬ್ಬ ದೀನ ಸ್ತ್ರೀಯ ಹಿತಚಿಂತನೆಗಾಗಿ ಯತ್ನಿಸತೊಡಗಿದ್ದೇನು ಸಾಮಾನ್ಯವಾದ ಮಾತಲ್ಲ." ಅರುಣಕುಮಾರಿಯು ಕೃತಜ್ಞತೆಯಿಂದ ನುಡಿದಳು.

"ಅರುಣಕುಮಾರಿ, ನಿನ್ನನ್ನು ನೀನೇ ಕ್ಷುದ್ರಳೆಂದು ನಿಂದಿಸಿಕೊಳ್ಳಬೇಡ. ನೀನು ಗುಣರೂಪಸಂಪನ್ನಳಿರುವದರಿಂದ ಚಿತೋಡದ ಮಹಾರಾಣಾನಿಗೆ ಸರಿಯಾದ ಯೋಗ್ಯತೆಯವಳಾಗಿರುತ್ತೀ. ಜನಾಂಗದ ದೃಷ್ಟಿಯು ವಿಚಿತ್ರತರದ್ದಿರುವದರಿಂದ ನಿನ್ನ ಬೆಲೆಯು ಅದಕ್ಕೆ ಗೊತ್ತಾಗಲಿಲ್ಲ. ನಾನು ನಿನ್ನ ವಿಷಯವಾಗಿ ಎಲ್ಲ ಸಂಗತಿಗಳನ್ನು ತಿಳಿದುಕೊಂಡಿರುವೆನು. ನೀನು ಶಸ್ತ್ರಾಸ್ತ್ರ ವಿದ್ಯೆಯಲ್ಲಿ ನಿಷ್ಣಾತಳಿರುವೆಯೆಂದು ಕೇಳಿದ್ದೇನೆ. ಅರುಣ, ನೀನು ನಿಜವಾದ ಕ್ಷಾತ್ರ ರಮಣಿಯಿರುವೆ; ಅದ್ವಿತೀಯ ಸ್ತ್ರೀರತ್ನವಿರುವೆ; ಆದರ್ಶ ಆರ್ಯಾಂಗನೆಯಿರುವೆ! ನಿನ್ನಂತಹ ನಾರೀರತ್ನವು ಅರ್ಧಾಂಗಿಯಾಗಬೇಕಾದರೆ ಸುದೈವವೇ ಬೇಕು."

ಉದಯಸಿಂಗನು ಅರುಣಕುಮಾರಿಯ ಗುಣಗಳನ್ನು ಮನಃಪೂರ್ವಕವಾಗಿ ಹೊಗಳತೊಡಗಿದ್ದನು. ಅರುಣಳು ತನ್ನ ಪ್ರಶಂಸೆ ಕೇಳುತ್ತ, ತಲೆಬಾಗಿ ಸುಮ್ಮನೆ ಕುಳಿತಿದ್ದಳು. ಮಹಾರಾಣಾನಂತಹ ದೊಡ್ಡ ಮನುಷ್ಯನು ತನ್ನ ಗುಣಗಾನ ಮಾಡತೊಡಗಿದ್ದರಿಂದ ಅವಳಿಗೆ ಆನಂದವಾಗತೊಡಗಿತ್ತು. ಆಗ ಅವಳು ಉದಯಸಿಂಗನನ್ನು ಕುರಿತು-"ಮಹಾರಾಣಾಜ, ಜನಾಂಗವು ನಿಮ್ಮಂತೆ ಗುಣಗ್ರಾಹಿಯಿಲ್ಲವೆಂದೇ ನನ್ನ ಆಯುಷ್ಯವು ವ್ಯರ್ಥವಾಗುವ ಪ್ರಸಂಗವೊದಗಿರುವದು. ನಿಮ್ಮ ಆಶ್ವಾಸನವನ್ನವಲಂಬಿಸಿಯೆ ನಾನು ಇಲ್ಲಿಯ ವರೆಗೆ ಜೀವಿಸಿರುವೆನು. ಜಗತ್ತಿನ ಮುಳ್ಳು ಹಾಸಿಗೆಯ ಮೇಲೆ ಕಾಲಕ್ಷೇಪ ಮಾಡುವದು ಪರಮ ದುಸ್ತರವಿರುವದು. ನನ್ನ ಜೀವನಕ್ಕೆ ಯೋಗ್ಯದಿಶೆಯು ದೊರೆಯದ್ದರಿಂದ ಇಹಲೋಕವನ್ನು ತ್ಯಜಿಸಬೇಕೆಂದು ಸಾಹಸ ನಡೆಯಿಸಿದ್ದನು. ನನ್ನನ್ನು ನೀವು ರಕ್ಷಿಸಿರುವಿರಿ ಮುಂದೆ ನನಗೆ ಭಾಗ್ಯೋ

ದಯವಾಗುವಂತೆ ಮಾಡುವ ಭಾರವು ನಿಮ್ಮನ್ನೇ ಅವಲಂಬಿಸಿದೆ. ನಿಮ್ಮ ಮೊರೆ ಹೊಕ್ಕಿರುವ ಈ ಅನಾಥಳನ್ನು ಹಾಲಲ್ಲಿದ್ದಿರಿ; ಇಲ್ಲವೆ ನೀರಲ್ಲಿದ್ದಿರಿ"

"ನಿನ್ನ ಜೀವನವನ್ನು ಸುಖಮಯ ಮಾಡಬೇಕೆಂಬ ಉದ್ದೇಶದಿಂದಲೇ ನಾನು ನಿನ್ನನ್ನು ಇಲ್ಲಿಗೆ ಬರಹೇಳಿದೆನು. ಅರುಣ, ನೀನು ಯಾರಲ್ಲಿ ಪ್ರಣಯವುಳ್ಳವಳಾಗಿರುವೆ? ನಿನ್ನ ಹೃದಯದಲ್ಲಿ ಸ್ಥಾನಾಪನ್ನನಾಗಿದ್ದ ಭಾಗ್ಯವಂತನಾದ ಪ್ರಣಯದೇವನ ನಾಮಾಭಿಧಾನವೇನು?"

"ರಾಣಾಜಿಯವರೆ, ನನ್ನ ಹೃದಯದರ್ಪಣದ ಮೇಲೆ ಇದು ವರೆಗೆ ಯಾವ ಪುರುಷನ ಛಾಯಾಚಿತ್ರವೂ ಮೂಡಿಲ್ಲ. ನನ್ನ ಹೃದಯವು ಅತ್ಯಂತ ಪರಿಶುದ್ಧವಾಗಿರುವದು. ಕುಲಕಲಂಕಿನಿಯೂ ದುಶ್ಚರಿತ್ರಳೂ ಎಂದು ವಿಖ್ಯಾತಳಾಗಿದ್ದ ಈ ಅನಾಥಳಾದ ಅರುಣಳನ್ನು ವರಿಸಲಿಕ್ಕೆ ಯಾವ ರಜಪುತ ತರುಣನೂ ಮುಂದುವರೆಯದಿರುವಾಗ ನನ್ನ ಹೃದಯದಲ್ಲಿ ಯಾವ ಪುರುಷನ ಮೂರ್ತಿಯು ಸ್ಥಾನಾಪನ್ನವಾಗುವದು? ನಿಶ್ಚಲಮನಸ್ಕಳಾದ ನಾನು ಸಹಜವಾಗಿ ವಿಕಾರವಶಳಾಗುವಂತಹಳಲ್ಲ. ಜನಾಂಗವು ನನ್ನನ್ನು ಬಿಸುಟಿ ಒಗೆದಿದ್ದರೂ, ಯಾವನೊಬ್ಬ ಹೀನಕುಲೋತ್ಪನ್ನನನ್ನು ವರಿಸಿ ವೈಷಯಿಕ ಸೌಖ್ಯವನ್ನನುಭವಿಸಬೇಕೆಂಬ ಕ್ಷುದ್ರಮನೋವೃತ್ತಿಯವಳು ನಾನಲ್ಲ. ಮಹಾರಾಣಾಜಿ, ಪತ್ನಿಯ ಜೀವನದ ಸಾರ್ಥಕತೆಯಾಗಬೇಕಾದರೆ ಅನುರೂಪನಾದ ಪತಿಯೇ ದೊರೆಯಬೇಕಲ್ಲವೆ? ಒಬ್ಬ ಕ್ಷತ್ರಿಯ ವೀರ ವರನ ಕೈ ಹಿಡಿದು ವೀರಪತ್ನಿಯೆನಿಸಿಕೊಂಡು, ಕ್ಷತ್ರಿಯ ರಮಣಿಯರಲ್ಲಿರ ತಕ್ಕ ಪ್ರತಿಭೆಯನ್ನು ಜಗತ್ತಿಗೆ ತೋರಿಸಬೇಕೆಂದು ನನ್ನ ನಿರ್ಧಾರವಿದೆ. ಮಹಾರಾಣಾಜೀ, ಅಂತಹ ವರನು ದೊರಕಿದರೆ ಮಾತ್ರ ನಾನು ಅವನ ಕೈ ಹಿಡಿಯುವೆನು; ಅನುರೂಪನಾದ ವರನು ದೊರೆಯದಿದ್ದರೆ, ಕೊನೆಯ ವರೆಗೆ ಅವಿವಾಹಿತಳಾಗಿಯೇ ಉಳಿಯುವೆನು. ವಿವಾಹವಾಗದೆ ಉಳಿಯುವದರಿಂದ ಆರ್ಯಸ್ತ್ರೀಯ ಶೀಲಕ್ಕೂ ಮಾನಕ್ಕೂ ಬಾಧೆ ಬರುವದಿಲ್ಲವಷ್ಟೆ? ವಿವಾಹವೆಂದರೆ ಜೀವನದ ಜೀವವು"

"ನಿನ್ನ ಮಾತು ಅಕ್ಷರಶಃ ನಿಜವು. ನಿನಗೆ ಯೋಗ್ಯನಾದ ವರನನ್ನು ದೊರಕಿಸುವೆನೆಂದು ನಾನು ಆಶ್ವಾಸನೆ ಕೊಟ್ಟೆನು; ಆದರೆ ಈ ಎಲ್ಲ ಕಟ್ಟಳೆಗಳನ್ನು ಕೇಳಿದರೆ, ನಿನ್ನ ಮನಸ್ಸಿಗೆ ತಕ್ಕ ವರನು ದೊರೆಯುವನೋ ಇಲ್ಲವೋ ಎಂಬ ಸಂದೇಹವು ಉತ್ಪನ್ನವಾಗತೊಡಗಿದೆ. ಪ್ರತಿಯೊಬ್ಬ ಮನುಷ್ಯನಲ್ಲಿ ಒಂದಿಲ್ಲೊಂದು ಬಗೆಯ ಕುಂದು-ಕೊರತೆಗಳಿರುವವು. ಈ ಜಗತ್ತಿನಲ್ಲಿ ಸರ್ವಾಂಗಪೂರ್ಣರು ಯಾರಿರುವರು? ನಿನಗೆ ಎಂತಹ ವರನು ಬೇಕೆಂಬದನ್ನು ಸ್ಪಷ್ಟವಾಗಿ ತಿಳಿಸಿಬಿಡು."

"ಇಷ್ಟು ವೇಳೆಯ ವರೆಗೆ ನಾನು ನಿಮಗೆ ಅದನ್ನೇ ಹೇಳಿರುವೆನು."

"ಪ್ರತಿಯೊಂದು ವಿಷಯದಲ್ಲಿಯೂ ನನ್ನನ್ನು ಸರಿಗಟ್ಟುವ ತರುಣನನ್ನು ನೀನು ವರಿಸಲೊಪ್ಪುವೆಯಾ?"

"ಪ್ರತಿಯೊಂದು ವಿಷಯದಲ್ಲಿ ಅಂದರೇನು?"

"ರೂಪ, ಗುಣ, ಯೌವನ, ಶೌರ್ಯ, ಧೈರ್ಯ, ಅಧಿಕಾರ, ಸಂಪತ್ತು...."

"ಓಹೋ! ಒಪ್ಪಿಗೆ! ಒಪ್ಪಿಗೆ! ಮಹಾರಾಣಾಜೀ, ಅಂಥ ವರನು ಯಾರು?"

"ಸ್ತ್ರೀಯರ ಮನೋಭೂಮಿಕೆಯು ವಿಚಿತ್ರವಾದದ್ದಿರುವದು. ಚಂಚಲ ಚಿತ್ತರಾದ ಅವರ ಮಾತುಗಳನ್ನು ನಂಬುವದು ಬಹಳ ಕಠಿಣವು. ಇನ್ನೊಮ್ಮೆ ಚನ್ನಾಗಿ ವಿಚಾರ ಮಾಡಿ ಹೇಳು. ಈ ಉದಯಸಿಂಹನಂತಹ ವರನು ದೊರಕಿದರೆ ನೀನು ಅವನನ್ನು ವರಿಸುವೆಯಾ?"

"ಮಹಾರಾಣಾಜೀ, ಅಂತಹ ಭಾಗ್ಯವನ್ನು ನಾನು ನಿಜವಾಗಿ ಕಾಣುವೆನೇ! ನೀವು ನಿರರ್ಥಕವಾಗಿ ಸ್ತ್ರೀ ಹೃದಯಕ್ಕೆ ಹೆಸರಿಡಬೇಡಿರಿ. ಸ್ತ್ರೀ ಹೃದಯವು ಪುರುಷರ ಹೃದಯದಷ್ಟು ನೀಚವೂ, ಕಠೋರವೂ, ಕ್ಷುದ್ರವೂ ಆಗಿರುವದಿಲ್ಲ. ಆರ್ಯಾಂಗನೆ ಯರ ಹೃದಯದ ಪಡಿಕಟ್ಟು ಹೇಗಿರುವದೆಂಬದನ್ನು ನೀವೇನು ತಿಳಿಯದವರಿಲ್ಲ. ಮಹಾರಾಣಾಜೀ, ನಾನು ಅನನ್ಯಗತಿಕಳಾಗಿರುವದರಿಂದ ನಿರ್ಲಜ್ಜಳಂತೆ ನನ್ನ ಹೃದಯಚಿತ್ರವನ್ನು ಆತ್ಮೀಯ ಭಾವನೆಯಿಂದ ನಿಮ್ಮೆದುರಿಗಿರಿಸಿರುವೆನು. ಮಹಾ ರಾಣಾ ಉದಯಸಿಂಗರ ಯೋಗ್ಯತೆಯ ಪತಿಯು ಅಭಾಗಿನಿಯರಾದ ಸ್ತ್ರೀಯರಿಗೆ ಹೇಗೆ ದೊರೆಯುವರು?"

"ಪ್ರತ್ಯಕ್ಷ ಉದಯಸಿಂಗನೇ ದೊರೆಯಬಹುದೆಂದು ಮೊನ್ನೆಯೆ ನಿನಗೆ ಹೇಳ ಲಿಲ್ಲವೆ? ಉದಯಸಿಂಗನನ್ನು ನೀನು ವರಿಸಲೊಪ್ಪುವೆಯಾ?

"ವಿನೋದ ಮಾಡಬೇಡಿರಿ. ಈ ವಿಷಯದಲ್ಲಿ ಹೆಚ್ಚಾಗಿ ಮಾತು ಬೆಳೆಯಿಸಿ ನನ್ನನ್ನು ನಾಚಿಸಬಾರದೆಂದು ಪ್ರಾರ್ಥಿಸುವೆನು. ಉದಯಸಿಂಗರ ರಾಣಿಯ ದಾಸಿ ಯಾಗುವ ಯೋಗ್ಯತೆಯಾದರೂ ನನ್ನಲ್ಲಿರುವದೆ?"

"ಅರುಣ, ಉದಯಸಿಂಗನ ಯೋಗ್ಯತೆಗೆ ಸರಿಯಾದ ವರನು ದೊರಕಿದರೆ ನೀನು ಅವನನ್ನು ವರಿಸುವ ಬಗ್ಗೆ ಕೈ ಮೇಲೆ ಕೈ ಹಾಕಿ ಹೇಳು." ಉದಯಸಿಂಗನು ನಗುತ್ತ ತನ್ನ ಕೈ ಮುಂದೆ ಮಾಡಿದನು.

"ಒಳ್ಳೇದು." ಅರುಣಳು ತನ್ನ ಕೈಯನ್ನು ಮುಂದೆ ಮಾಡಿದಳು. ಉದಯ ಸಿಂಗನು ಅರುಣಳ ಕೈ ಹಿಡಿದು—"ಈ ಪಾವನಕರಳಾದ ತ್ರಿವೇಣಿಯ ಹ ಭಗವಾನ್ ಸಹಸ್ರರಶ್ಮಿಯ ಸಾಕ್ಷಿಯಾಗಿ ಈ ಉದಯಸಿಂಗನು ಅರುಣಕುಮಾರಿ ಪಾಣಿಗ್ರಹಣ ಮಾಡಿರುವನು!"

ಅರುಣಕುಮಾರಿಯ ಮೈಯಲ್ಲಿ ವಿದ್ಯುತ್ಸಂಚಾರವಾದಂತಾಯಿತು! ಎಂದ.. ಅನುಭವಿಸದಿದ್ದಂತಹ ಒಂದು ವಿಧದ ಅವಸ್ಥೆಯು ಅವಳಲ್ಲಿ ಉತ್ಪನ್ನವಾಯಿತು. ಅವಳು ದೇಹಭಾನವನ್ನು ಪೂರಾ ಮರೆತು, ಶಿಲಾಪ್ರತಿಮೆಯಂತೆ ನಿಂತುಕೊಂಡಳು. ಸ್ವಪ್ನಸೃಷ್ಟಿಯಲ್ಲಿರುವೆನೆಂದು ಅವಳ ಭಾವನೆಯಾಗಿಹೋಯಿತು. ಚಿತ್ರವಿಚಿತ್ರ ವಾದ ವಿಚಾರತರಂಗಗಳಿಂದ ಅವಳ ಹೃದಯವು ಹೊಯ್ದಾಡತೊಡಗಿತು. ಒಂದು ಬಗೆಯ ಪ್ರಚಂಡವಾದ ಬಿರುಗಾಳಿಯಿಂದ ಅವಳ ನಿಶ್ಚಲಚಿತ್ತವು ವಿಕಾರವಶವಾಗಿ

ಹೋಯಿತು. ತನ್ನನ್ನು ಮೋಹಿನಿಯು ಆವರಿಸಿತೋ, ಭೂತವೇತಾಳಗಳು ಆವರಿಸಿದವೋ? ಎಂಬದನ್ನು ಸಹ ನಿರ್ಧರಿಸಲಿಕ್ಕೆ ಅವಳು ಅಸಮರ್ಥಳಾಗಿದ್ದಳು. ಉದಯಸಿಂಗನಂತಹ ಅಲ್ಪಪರಿಚಿತ ಪರಪುರುಷನು ಕೈ ಹಿಡಿದು ನಿಂತುಕೊಂಡಿರುವಾಗ, ಅವನ ಕೈಯೊಳಗಿಂದ ತನ್ನ ಕೈಯನ್ನು ಬಿಡಿಸಿಕೊಳ್ಳಬೇಕೆಂಬುದರ ಪರಿವೆಯು ಸಹ ಅವಳಿಗೆ ಉಳಿದಿರಲಿಲ್ಲ. ಸುಮಾರು ಅರ್ಧಗಳಿಗೆಯು ವರೆಗೆ ಇದೇ ಬಗೆಯ ಭ್ರಮಿಷ್ಟಸ್ಥಿತಿಯಲ್ಲಿ ವೇಳೆಗಳೆದ ಬಳಿಕ, ಅಪ್ಸರಾಸಮಾನಳಾದ ಅರುಣಳ ಪಾಣಿಗ್ರಹಣ ಮಾಡಿ ತಾನೇ ತಾನಾಗಿ ನಿಂತಿದ್ದ ಉದಯಸಿಂಗನು ದೇಹಭಾನವುಳ್ಳವನಾಗಿ—

"ಪ್ರಿಯೇ, ಅರುಣಕುಮಾರಿ!"

ಅರುಣಕುಮಾರಿಯು ಬೆಚ್ಚಿಬಿದ್ದು, ಉದಯಸಿಂಗನ ಕೈಯೊಳಗಿಂದ ತನ್ನ ಕೈಯನ್ನು ಬಿಡಿಸಿಕೊಂಡು ಹಿಂದೆ ಸರಿದು:—"ಮಹಾರಾಣಾಜೀ!"

"ಪ್ರಿಯಕರೆ! ಇಷ್ಟೇಕೆ ಬೆದರುವೆ? ಈ ಉದಯಸಿಂಗನು ಪರಕೀಯನಲ್ಲ. ಪಂಚಭೂತಗಳ ಸಾಕ್ಷಿಯಾಗಿ ನಾನು ನಿನ್ನ ಪಾಣಿಗ್ರಹಣ ಮಾಡಿರುವೆನು. ಪ್ರಣಯಾತುರನಾದ ನನ್ನನ್ನು ವರಿಸುವ ಬಗ್ಗೆ ನೀನು ವಚನಬದ್ಧಳಾಗಿರುವೆ."

"ಮಹಾರಾಣಾಜೀ, ನೀವು ಈ ಅರುಣಳನ್ನು ಮನಃಪೂರ್ವಕವಾಗಿ ವರಿಸಲೊಪ್ಪುವಿರಾ?" ವಿಸ್ಮಯದಿಂದ ಅರುಣಳು ಕೇಳಿದಳು.

"ಪ್ರಿಯತಮೆ, ನಿನಗೆ ನಂಬಿಗೆಯಾಗುವಂತೆ ಇನ್ನೂ ಹೇಗೆ ಮಾತಾಡಬೇಕು?"

"ನಾಥ!............" ಅರುಣಕುಮಾರಿಯು ಲಜ್ಜಾವನತಮುಖಿಯಾದಳು.

ಉದಯಸಿಂಗನು ಅವಳ ಕಪೋಲಗಳನ್ನು ಹಿಡಿದೆತ್ತಿ:—"ಪ್ರಿಯೆ, ಮತ್ತೇನು ಕೇಳಬೇಕೆಂದಿರುವೆ?"

"ನೀವು ಮಹಾರಾಜರು. ನನ್ನಂತಹ ಎಷ್ಟು ಜನ ಸ್ತ್ರೀಯರು ನಿಮ್ಮ ಅಂತಃಪುರದಲ್ಲಿರುವರೋ ಏನೋ! ನೀವು ನನ್ನನ್ನು ತಮ್ಮ ಸೇವೆಗೆ ವಂಚಿತಳನ್ನಾಗಿ ಮಾಡಬಾರದು. ತಮ್ಮ ದರ್ಶನಕ್ಕೆ ಹೊರತಾಗುವಂತಹ ಪರಿಸ್ಥಿತಿಯೊದಗಬಾರದೆಂದು ಪರಮಾತ್ಮನಲ್ಲಿ ಬೇಡಿಕೊಳ್ಳುವೆನು. ನಾನು ಸಾಮಾನ್ಯಳು; ಅದರಲ್ಲಿ ಕುಲೋತ್ಪನ್ನಳೆಂದು ಪ್ರಖ್ಯಾತಳಾದವಳು. ನನ್ನನ್ನು ವರಿಸಿದರೆ ನಿಮ್ಮ ಪ್ರಜೆಯರಲ್ಲಿ ಕ್ಷೋಭೆಯು ಉತ್ಪನ್ನವಾಗಿ ನಿಮಗೆ ತೊಂದರೆಯಾಗಬಹುದು. ನಂತು ನಿಮ್ಮ ಮೂರ್ತಿಯನ್ನು ನನ್ನ ಹೃದಯಮಂದಿರದಲ್ಲಿ ಸ್ಥಾಪನೆ ಮಾಡಿಕೊಂಡೆನು. ನಿಮ್ಮ ಹೊರತು ಜಗತ್ತಿನೊಳಗಿನ ಎಲ್ಲ ಪುರುಷರು ನನ್ನ ಬಂಧುಸಮಾನರು. ನೀವು ಎಲ್ಲ ಬಗೆಯಿಂದ ವಿಚಾರಿಸಿ ನನ್ನನ್ನು ತಮ್ಮ ರಾಜ್ಞಿಯನ್ನಾಗಿ ಮಾಡಿಕೊಳ್ಳಿರಿ. ನನಗೆ ನಿಮ್ಮ ಪಾದಸೇವೆಯು ದೊರೆತರೆ ಸಾಕು; ಅದಕ್ಕಿಂತ ಹೆಚ್ಚಿಗೆ ಯಾವುದನ್ನೂ ಇಚ್ಛಿಸುವದಿಲ್ಲ. ಮಹಾರಾಜರವರ ಧರ್ಮಪತ್ನಿಯೆನಿಸಿಕೊಳ್ಳುವ ಮಹದ್ಭಾಗ್ಯವು ದೊರೆತರೆ ನಾನು ಕೃತಕೃತ್ಯಳಾಗುವೆನು."

"ಅರುಣ, ನಾನು ನಿನ್ನ ಸದ್ಗುಣಗಳಿಗೂ ರೂಪಕ್ಕೂ ಮೆಚ್ಚಿಯೇ ಪಾಣಿಗ್ರಹಣ ಮಾಡಿರುವೆನು. ಇನ್ನು ನೀನು ಯಾವ ವಿಧದ ಆಕ್ಷೇಪಣೆಗಳನ್ನೂ ಮನಸ್ಸಿನಲ್ಲಿ ತಂದುಕೊಳ್ಳಬೇಡ. ಪ್ರತಿಯೊಂದು ವಿಷಯದಲ್ಲಿ ನೀನು ನನ್ನ ಇಬ್ಬರು ರಾಣಿಯರಿಗಿಂತಲೂ ವರಿಷ್ಠಳಿರುವೆ. ನಿನ್ನನ್ನು ಹೀನಕುಲೋತ್ಪನ್ನಳೆಂದು ಸಿದ್ಧಪಡಿಸುವ ಎದೆಯಾರದು? ಎಲ್ಲ ರೀತಿಯಿಂದ ವಿಚಾರಿಸಿಯೆ ನಾನು ನಿನ್ನನ್ನು ವರಿಸಲಿಕ್ಕೆ ಸಿದ್ಧನಾದೆನು."

"ಹಾಗಾದರೆ ಸ್ವಾಮಿ ಅಜಿತಾನಂದರ ಭವಿಷ್ಯವಾಣಿಯು ನಿಜವಾದಂತಾಯಿತು!" ಅರುಣಕುಮಾರಿಯು ಆನಂದೋದ್ಗಾರ ತೆಗೆದಳು.

"ಪ್ರಿಯೆ!"

"ನಾಥರೆ!"

"ಎಲ್ಲವೂ ಸರಿಯಾಯಿತು..........

"ಮತ್ತೇನು?"

"ಉದಯಸಿಂಗನಂತಹ ವರನನ್ನೇ ದೊರಕಿಸಿ ಕೊಡುವೆನೆಂದು ನಾನು ಆಶ್ವಾಸನೆ ಕೊಟ್ಟಿದ್ದೆನು. ಈಗ ದೊರೆತ ವರನು ಉದಯಸಿಂಗನಿಗಿಂತ ಶ್ರೇಷ್ಠನೋ ಕನಿಷ್ಠನೊ?" ಉದಯಸಿಂಗನು ಗಹಗಹಿಸಿ ನಗುತ್ತ ತನ್ನ ಪ್ರಿಯತಮೆಗೆ ಪ್ರಶ್ನೆ ಮಾಡಿದನು.

"ಶ್ರೇಷ್ಠತನ-ಕನಿಷ್ಠತನಗಳನ್ನು ಒರೆಗೆ ಹಚ್ಚಲಿಕ್ಕೆ ನಾನೇಕೆ ಯತ್ನಿಸಲಿ? ಪ್ರಾಮಾಣಿಕತನದ ವ್ಯವಹಾರದಲ್ಲಿ ಅಲ್ಲದ ಸಲ್ಲದ ಚಿಕಿತ್ಸೆ ಮಾಡುವಂತಹ ಸ್ವಭಾವವು ನನ್ನದಲ್ಲ. ಪಾಲಿಗೆ ಬಂದದ್ದು ಪಂಚಾಮೃತ!" ಅರುಣಕುಮಾರಿಯು ನಗುತ್ತಲೆ ಉತ್ತರವಿತ್ತಳು.

"ಅರುಣ!" ಉದಯಸಿಂಗನು ಅರುಣಕುಮಾರಿಯ ಕೈ ಹಿಡಿದು—"ನೀನು ಸದ್ಗುಣಿಯೂ, ಸುಸ್ವರೂಪಿಯೂ, ಜಾಣಳೂ ಇರುವದಲ್ಲದೆ, ಅತುಲನೀಯ ವಾಕ್ಚತುರಳಿರುವೆ. ಮಹಾರಾಣಾ ಉದಯಸಿಂಗನೊಡನೆ ಇಷ್ಟು ವಾಚಾಲತನವು ಕೆಲಸದ್ದಲ್ಲ. ಈಗ ಹೆಚ್ಚು ಮಾತಾಡಿದ ತಪ್ಪಿಗಾಗಿ ನಿನ್ನ ಅರವಿಂದ ಸಮವಾದ ಮುಖಕ್ಕೆ ಯೋಗ್ಯ ದಂಡನೆಯನ್ನು ವಿಧಿಸಬೇಕಾಗಿದೆ." ಉದಯಸಿಂಗನು ನಸುನಗುತ್ತ ನುಡಿದು, ಅರುಣಕುಮಾರಿಯ ಪಕ್ವಬಿಂಬಸದೃಶವೂ ಮೃದುವೂ ಆದ ಅಧರಗಳನ್ನು ಮೆಲ್ಲನೆ ಚುಂಬಿಸಿದನು.

"ಅವ್ವಯ್ಯಾ! ಇದೇನು? ವಿವಾಹಕ್ಕೆ ಮೊದಲೇ ಅತ್ಯಾಚಾರವು ನಡೆಯಿತಲ್ಲ!" ಅರುಣಕುಮಾರಿಯು ನಗುತ್ತಲೆ ದೂರ ಸರಿದು ನಿಂತಳು.

ಸಂಧಿಪ್ರಕಾಶವು ಅಡಗುತ್ತ ಬಂದಿತ್ತು. ತ್ರಿವೇಣೀತೀರದಲ್ಲಿ ಜನರ ಸುಳಿವು ತೀರ ಕಡಿಮೆಯಾಗಿತ್ತು. ಸ್ವರ್ಗೀಯ ಆನಂದದಲ್ಲಿ ಲೋಲಾಡುತ್ತಿದ್ದ ಆ ಪ್ರಣಯಮೂರ್ತಿಗಳಿಗೆ ವೇಳೆಯ ಪರಿವೆಯೇ ಇದ್ದಿಲ್ಲ. ಸಂಧಿಪ್ರಕಾಶವು ಪೂರಾ ಅಡಗಿ

ತ್ರಿವೇಣೀತೀರದ ಪ್ರದೇಶವು ಚಂದ್ರಪ್ರಕಾಶದಿಂದ ಬೆಳಗತೊಡಗಿತು.

"ಓಹೋ! ರಾತ್ರಿಯು ಬಹಳವಾದಂತೆ ತೋರುವದು. ನೋಡಿದಿರಾ, ಚಂದ್ರಮನು ಎಷ್ಟು ಮೇಲೆ ಬಂದಿರುವನು?" ಅರುಣಕುಮಾರಿಯು ತನ್ನ ಪ್ರಣಯ ದೇವನನ್ನು ಜಾಗೃತಪಡಿಸಿದಳು.

ಅನಂತರದಲ್ಲಿ ಏಕಜೀವವಾದ ಆ ಪ್ರಣಯಮೂರ್ತಿಗಳು ತ್ರಿವೇಣಿಯ ವಾಲುಕಾಮಯ ಪ್ರದೇಶದಿಂದ ತಮ್ಮ ತಮ್ಮ ನಿವಾಸಗಳಿಗೆ ತೆರಳಿದರು.

---

## ಈ ಕಿಂಕರಿಯನ್ನು ಮರೆಯಬೇಡಿರಿ.

ವಾತ್ಸಲ್ಯದ ಕುವರಿಯಾದ ಅರುಣಳ ವಿವಾಹಯೋಗವೊದಗದ್ದರಿಂದ ಕೃಷ್ಣ ಲಾಲನು ಪರಮ ದುಃಖಿಯಾಗಿದ್ದನು. ಅವನು ಯಾವ ಕಾರ್ಯಗಳಲ್ಲೂ ಮನಸ್ಸು ಹಾಕುತ್ತಿರಲಿಲ್ಲ. ಅವನು ಇಡೀ ಜಗತ್ತನ್ನು ಉದಾಶೀನ ದೃಷ್ಟಿಯಿಂದ ನೋಡ ತೊಡಗಿದ್ದನು. ಅವನು ಕರ್ತವ್ಯಮೂಢನಾದ ಸಂಗತಿಯು ಚರರ ಮುಖಾಂತರ ವಾಗಿ ಅಜಿತಾನಂದರಿಗೆ ತಿಳಿಯಿತು. ಕೂಡಲೆ ಅವರು ಗುಪ್ತಪುರಿಯಿಂದ ಹೊರಟು ಪ್ರಯಾಗಕ್ಕೆ ಬಂದರು. ಕೃಷ್ಣಲಾಲನಿಗೆ ಸದುಪದೇಶ ಮಾಡಿ ಅವನನ್ನು ಕರ್ತವ್ಯ ನಿರತನನ್ನಾಗಿ ಮಾಡಬೇಕೆಂದು ಅಜಿತಾನಂದರ ಇಚ್ಛೆಯಿತ್ತು. ಕೃಷ್ಣಲಾಲನು ಸ್ವಾಮಿಮಹಾರಾಜರನ್ನು ಸನ್ಮಾನಿಸಿ ತಕ್ಕಸ್ಥಳದಲ್ಲಿ ಕುಳ್ಳಿರಿಸಿದನು. ಚಿಂತೆಯಿಂದ ಕೃಶನಾದ ಕೃಷ್ಣಲಾಲನನ್ನು ನೋಡಿ ಅಜಿತಾನಂದರು ಅಂತಃಕರಣಪೂರ್ವಕವಾಗಿ- "ಕೃಷ್ಣಲಾಲ, ನೀನು ಚಿಂತೆಯಿಂದ ಬಹಳ ಸೊರಗಿರುವೆ. ಯಾವದೊಂದು ವಿಷಯ ವಾಗಿ ಪ್ರತಿಕೂಲ ಪರಿಸ್ಥಿತಿಯು ಪ್ರಾಪ್ತವಾದರೆ ಅದನ್ನು ಮನಸ್ಸಿಗೆ ಹಚ್ಚಿಕೊಳ್ಳ ಬಾರದು. ಇದುವರೆಗೂ ಅರುಣಕುಮಾರಿಯು ವಿವಾಹವಾಗಲಿಲ್ಲೆಂದು ನೀನು ಕ್ಲೇಶಪಡತೊಡಗಿರುವೆ. ಈ ಕ್ಲೇಶದಿಂದಲೇ ನೀನು ನಿನ್ನ ಮಹತ್ವವಾದ ಕರ್ತವ್ಯ ವನ್ನು ಮರೆತು ಮೂಢನಾಗಿ ಕುಳಿತುಬಿಟ್ಟಿರುವೆ. ನಿನ್ನ ಪುತ್ರಿಯ ವಿವಾಹ ವಾಗುವ ಯೋಗವಿದ್ದರೆ ನಿರಾಯಾಸವಾಗಿ ಆಗುವದು. ಒಂದು ವೇಳೆ ಅವಳು ಅವಿವಾಹಿತಳಾಗಿಯೇ ಉಳಿಯಬೇಕೆಂದು ಪರಮಾತ್ಮನ ಸಂಕೇತವಿದ್ದರೆ ನೀನು ಎಷ್ಟು ಸಾಹಸ ಮಾಡಿದರೇನು? ಎಷ್ಟು ಚಿಂತಿಸಿದರೇನು?"

ಅಜಿತಾನಂದರ ಮಾತುಗಳಿಂದ ಕೃಷ್ಣಲಾಲನ ಮನಸ್ಸಿಗೆ ಸಮಾಧಾನವಾಗ ಲಿಲ್ಲ. ಅವನು ಕ್ಲೇಶಯುಕ್ತ ಧ್ವನಿಯಿಂದ—"ಸ್ವಾಮಿನ್, ನೀವು ಹೇಳುತ್ತಿರುವ ಮಾತುಗಳು ನನಗೆ ತಿಳಿಯುತ್ತವೆ; ಆದರೆ ಅದರಂತೆ ನಡೆಯುವದಾಗಲೊಲ್ಲದು.

ಸಂಸಾರವು ಮಿಥ್ಯಾರೂಪವೆಂಬದನ್ನು ನಾನು ನಿಮ್ಮ ಬಾಯಿಂದ ಅನೇಕ ಸಾರೆ ಕೇಳಿರುವೆನು. ನಿಮ್ಮ ಉಪದೇಶದ ಪರಿಣಾಮವು ಮಾತ್ರ ನನ್ನ ಮನಸ್ಸಿನ ಮೇಲೆ ತಿಲಾಂಶವಾದರೂ ಆಗಿಲ್ಲ. ಸುಖದುಃಖ ಸಮಸ್ಥಿತಿಯು ತಮ್ಮಂತಹ ಸಾಧುಸಂತ ರಲ್ಲಿರುವದಲ್ಲದೆ, ಪ್ರಾಪಂಚಿಕ ಮಾಯಾ ಮೋಹಗಳಿಂದ ಗ್ರಸ್ತರಾದ ನಮ್ಮಂತಹರಲ್ಲಿ ಹೇಗೆ ಇರುವದು? ಸ್ವಾಮಿ ಮಹಾರಾಜರೆ, ನನ್ನ ವಂಶದ ಅಂಕುರವಾದ ಅರುಣ ಕುಮಾರಿಗೆ ಸೌಖ್ಯವು ದೊರೆಯದ ಮೇಲೆ ನನಗೆ ಹೇಗೆ ಸುಖಶಾಂತಿಗಳು ಲಭಿಸುವವು? ಅರುಣಳ ದೈವದಲ್ಲಿ ರಾಜ್ಞಿಯಾಗುವ ಸುಯೋಗವಿರುವದೆಂಬ ಭವಿಷ್ಯ ಕೇಳಿದಾಗಿ ನಿಂದ ನನ್ನ ಆನಂದವು ಮೇರೆದಪ್ಪಿತ್ತು. ಅವಳು ರಾಣಿಯಾಗುವದೊತ್ತಟ್ಟಿಗಿರಲಿ; ಗೃಹಿಣಿಯಾಗುವ ಯೋಗವು ಸಹ ಒದಗದ್ದರಿಂದ ನನ್ನ ಅಂತಃಕರಣವು ಅನುತಾಪ ಶಿಖಿಯಿಂದ ಬಹುಪರಿಯಾಗಿ ಬೆಯ್ಯುತ್ತಿರುವದು. ಗುರುಮಹಾರಾಜರೆ, ಹೃದಯ ದಲ್ಲಿ ಸಣ್ಣಾಗಿ ಹೊತ್ತುತ್ತಿರುವ ಬೆಂಕಿಯನ್ನು ನೊಂದಿಸುವದು ನನಗೆ ಸಾಧ್ಯವಿಲ್ಲ. ಅದು ನನ್ನನ್ನು ಒಂದಿಲ್ಲೊಂದು ದಿನ ಭಸ್ಮೀಭೂತನನ್ನಾಗಿ ಮಾಡದೆ ಬಿಡದು.''

ಕೃಷ್ಣಲಾಲನ ಮಾತುಗಳನ್ನು ಕೇಳಿ ಅಜಿತಾನಂದರು ನಸುನಕ್ಕರು. ಅವನ ಮನಸ್ಸು ಈ ಬಗೆಯಾಗಿ ವ್ಯಾಮೋಹಗಳಲ್ಲಿ ತೊಡಗಿದ್ದಿರುವದೆಂಬ ಕಲ್ಪನೆಯು ಅಜಿತಾನಂದರಿಗಿದ್ದಿಲ್ಲ. ಆಗ ಅವರು ಕೃಷ್ಣಲಾಲನನ್ನು ಕುರಿತು:—ನಿನ್ನ ಮನಸ್ಸು ಬಹಳೇ ಅಧೀರವಾದದ್ದಿರುದು. ಮಗಳ ವಿವಾಹವಾಗುವದಿಲ್ಲವೆಂದು ತಿಳಿದುಕೊಂಡು ನೀನು ಈ ಪರಿಯಾಗಿ ಶೋಕಸಾಗರದಲ್ಲಿ ಮುಳುಗಿರುವೆಯಲ್ಲವೆ? ನನ್ನ ಭವಿ ಷ್ಯವು ತೀರ ಸುಳ್ಳಾದದ್ದೆಂದು ನೀನು ತಿಳಿದು ಬಿಟ್ಟಿರುವೆಯಾ? ಈ ಅಜಿತಾನಂದನು ಮಿಥ್ಯಾವಾದಿಯಲ್ಲವೆಂಬದು ಬೇಗನೆ ನಿನ್ನ ದೃಷ್ಟಿಪಥದಲ್ಲಿ ಬರುವದು. ಅರುಣ ಕುಮಾರಿಯಾದರೂ ನನ್ನಲ್ಲಿ ವಿಶ್ವಾಸವಿಲ್ಲದವಳಾಗಿದ್ದಳು. ಅವಳಿಗೆ ಈಗ ನನ್ನ ಮಾತಿನ ಸತ್ಯತೆಯು ಕಂಡುಬಂದಿರುವದು.''

ಕೃಷ್ಣಲಾಲನು ವಿಸ್ಮಿತನಾದನು. ಅಜಿತಾನಂದರ ವಾಣಿಯು ಸತ್ಯವಾಗು ವಂತಹ ಯಾವ ಘಟನೆಯು ಸಂಭವಿಸಿರಬಹುದೆಂದು ಆತನು ಯೋಚಿಸತೊಡಗಿ ದನು. ಅವನು ಸೋಜಿಗದಿಂದ ಅಜಿತಾನಂದರಿಗೆ—''ಮಹಾತ್ಮರೆ! ನಿಮ್ಮ ಮಾತಿನ ಅರ್ಥವಾಗಲೊಲ್ಲದು. ನನ್ನ ಕುಮಾರಿಯ ಭಾಗ್ಯೋದಯವಾಗುವಂತಹ ಯಾವ ಸಂಗತಿಯು ಘಟಿಸಿರುವದು? ಒಂದು ವೇಳೆ ಅಂತಹ ಸಂಗತಿಯು ಘಟಿಸಿದ್ದರೆ, ಇದು ವರೆಗೆ ನನಗೆ ತಿಳಿಯದೆ ಹೇಗೆ ಉಳಿಯಿತು? ಗುರುಮಹಾರಾಜರೆ, ನನಗೆ ಏನೂ ತಿಳಿಯದಾಗಿದೆ. ಈ ವಿಷಯದಲ್ಲಿ ನಾನು ಪೂರಾ ಅಂಧನಿರುವೆನು. ನೀವು ಎಲ್ಲ ಸಂಗತಿಯನ್ನು ತಿಳಿಸಿ, ಆತುರಗೊಂಡ ನನ್ನ ಮನಸ್ಸನ್ನು ಸಮಾಧಾನಪಡಿಸಬೇಕು.''

''ಅರುಣಕುಮಾರಿಯು ಎಲ್ಲಿರುವಳು?''

''ಈಗ ಎಲ್ಲಿಯೋ ಹೋದಳು.'' ಎಂದು ಕೃಷ್ಣಲಾಲನು ಹೇಳುವಷ್ಟರಲ್ಲಿ ''ಅರುಣಕುಮಾರಿ,'' ಎಂದು ಕೂಗುತ್ತ ರಾಣಾ ಉದಯಸಿಂಗನು ಅಲ್ಲಿಗೆ ಬಂದನು.

ಮಹಾರಾಣಾನಂತಹ ದೊಡ್ಡ ಮನುಷ್ಯನು ಅಕಲ್ಪಿತವಾಗಿ ತನ್ನ ಮನೆಗೆ ಬಂದದ್ದರಿಂದ ಕೃಷ್ಣಲಾಲನಿಗೆ ಪರಮಾಶ್ಚರ್ಯವಾಯಿತು. ಆಗ ಅವನು ವಿಸ್ಮಯ ದ್ಯೋತಕ ಧ್ವನಿಯಿಂದ—"ಮಹಾರಾಣಾಜೀ, ಬರಬೇಕು. ಇದೇನು, ಬಡವರ ಮನೆಗೆ ಭಾಗೀರಥಿಯು ಬಂದಂತಾಯಿತು! ತಮ್ಮಂತಹರ ಪಾದಧೂಳಿಯು ನನ್ನ ಮನೆಯನ್ನು ಪವಿತ್ರಗೊಳಿಸುವದೆಂದು ಇದಕ್ಕಿಂತ ಮೊದಲು ನಾನು ಎಂದೂ ತಿಳಿದಿರಲಿಲ್ಲ. ಬನ್ನಿರಿ. ಕುಳಿತುಕೊಳ್ಳಿರಿ."

"ಇತ್ತಕಡೆಗೆ ಸಹಜವಾಗಿ ಬಂದೆನು." ಎಂದು ಉದಯಸಿಂಗನು ನುಡಿದನು.

"ಕಾರ್ಯಕಾರಣಗಳಿಲ್ಲದೆ ದೊಡ್ಡ ಜನರು ಸಾಮಾನ್ಯರಲ್ಲಿಗೆ ಹೋಗುತ್ತಿರುವುದಿಲ್ಲ." ಅಜಿತಾನಂದರು ಉದಯಸಿಂಗನ ಇಂಗಿತವನ್ನು ಹೊರಗೆಡಹುವ ಉದ್ದೇಶದಿಂದು ನುಡಿದರು.

ಕೂಡಲೆ ರಾಣಾನು ಅವರ ಕಡೆಗೆ ಹೊರಳಿ ನೋಡಿದನು. ಕಾಷಾಯಾಂಬರಧಾರಿಗಳಾದ ದಿವ್ಯವಿಭೂತಿಗಳು ವ್ಯಾಘ್ರಾಂಬರದ ಮೇಲೆ ಕುಳಿತುಕೊಂಡಿದ್ದರು. ಕೂಡಲೆ ಅವನು ಯತಿಮಹಾರಾಜರ ಚರಣಗಳನ್ನು ಮಸ್ತಕದಲ್ಲಿರಿಸಿಕೊಂಡನು. ಆಗ ಕೃಷ್ಣಲಾಲನು ಉದಯಸಿಂಗನನ್ನು ಕುರಿತು—"ರಾಣಾಜೀ, ಇವರು ನನ್ನ ಗುರುಮಹಾರಾಜರು. ಅದ್ವಿತೀಯ ವಿಭೂತಿಗಳಾದ ಇವರು ತ್ರಿಕಾಲಜ್ಞಾನಿಗಳೂ ಶಾಪಾನುಗ್ರಹಶಕ್ತಿಯುಳ್ಳವರೂ ಆಗಿರುವರು."

"ಮಹಾತ್ಮರ ಚರಣದರ್ಶನದಿಂದ ಈ ಕಿಂಕರನ ದೇಹವು ಪುನೀತವಾಯಿತು" ಉದಯಸಿಂಗನು ಭಕ್ತಿಪುರಸ್ಸರವಾಗಿ ಮಾತಾಡಿದನು.

"ಗುರುಮಹಾರಾಜರೆ, ಇವರು ಮೇವಾಡದ ಮಹಾರಾಣಾ ಉದಯಸಿಂಗರು" ಎಂದು ಕೃಷ್ಣಲಾಲನು ಅಜಿತಾನಂದರಿಗೆ ಹೇಳಿದನು.

"ಇಷ್ಟುದಿನ ಇವರ ದೈವವು ಪ್ರತಿಕೂಲವಿತ್ತು. ಇನ್ನು ಬೇಗನೆ ಅರಸೊತ್ತಿಗೆ ಪಡೆಯುವರು" ಎಂದು ಅಜಿತಾನಂದರು ಕೃಷ್ಣಲಾಲನಿಗೆ ಹೇಳಿ, ಉದಯಸಿಂಗನನ್ನು ಕುರಿತು:—"ಮಹಾರಾಣಾಜೀ, ನೀವು ಇನ್ನು ಮೇಲೆ ನಿಶ್ಚಿಂತರಾಗಿರ್ರಿ. ನಿಮ್ಮ ಮನಸ್ಸಿನಂತೆ ಎಲ್ಲ ಕಾರ್ಯಗಳೂ ಈಡೇರುವವು. ನಿಮ್ಮ ನಷ್ಟಚರ್ಯೆಯ ದಿನಗಳು ಮುಗಿಯುತ್ತ ಬಂದಿರುವವು. ನೀವು ವಿಲಾಸವೃತ್ತಿಯವರಿರುವಿರಿ. ಮಿತಿ ಮೀರಿದ ವಿಲಾಸ ಲಾಲಸೆಯು ಮನುಷ್ಯನನ್ನು ಕರ್ತವ್ಯಪರಾಙ್ಮುಖನನ್ನಾಗಿ ಮಾಡುವದು. ನೀವು ನಿಮ್ಮ ಕರ್ತವ್ಯವನ್ನು ದುರ್ಲಕ್ಷಿಸಬೇಡಿರಿ. ಈಗ ನಿಮಗೆ ಅನುಕೂಲ ಪರಿಸ್ಥಿತಿಯು ಪ್ರಾಪ್ತವಾಗಿದೆ. ಮೇವಾಡದ ಎಲ್ಲ ಸರದಾರರು ರಾಜನಿಷ್ಠೆಯಿಂದ ನಿಮಗೆ ನೆರವಾಗಲು ಸಿದ್ಧರಾಗಿರುವರು. ಈ ಸಂಧಿಯನ್ನು ವ್ಯರ್ಥ ಹೋಗಗೊಡಬೇಡಿರಿ. ಈ ಕೃಷ್ಣಲಾಲನ ವಶದಲ್ಲಿ ಎಂಟುನೂರು ಸುಶಿಕ್ಷಿತ ಸೈನಿಕರಿರುವರು. ಹೇರಳವಾದ ಧನಸಂಗ್ರಹವಿದೆ. ಇವನು ನಿಮಗೆ ಸಹಾಯ ಮಾಡಲಿಕ್ಕೆ ಹಿಂಜರಿಯಲಾರನು."

"ಸಾ ಮಿಮಹಾರಾಜರೆ!" ಉದಯಸಿಂಗನು ವಿಸ್ಮಯದಿಂದ—"ಕೃಷ್ಣಲಾಲನ ಬಳಿಯಲ್ಲಿ ಸೈನ್ಯವೂ, ಹೇರಳವಾದ ಧನಸಂಗ್ರಹವೂ ಇರುವವೆ?"

"ನಿಜವು."

"ಇವರ ಸೈನ್ಯವು ಸದ್ಯಕ್ಕೆ ಎಲ್ಲಿರುವದು?"

"ಗುಪ್ತಪುರಿಯಲ್ಲಿ."

"ಗುಪ್ತಪುರಿಯಲ್ಲಿ? ಗುಪ್ತಪುರಿಯು ಎಲ್ಲಿರುವದು? ಗುಪ್ತಪುರಿಯೆಂಬದು ಊರೋ? ಅಡವಿಯೊ? ಅದು ಯಾವ ಕಡೆಗಿರುವದು?"

"ಗುಪ್ತಪುರಿಯೆಂಬದು ಊರೂ ಅಲ್ಲ; ಅಡವಿಯೂ ಅಲ್ಲ. ಅಡವಿಯೊಳಗಿನ ಊರು; ಊರೊಳಗಿನ ಅಡವಿಯು. ಬೇಕಾದಂತೆ ಅದಕ್ಕೆ ಹೆಸರಿಡಬಹುದು. ಗುಪ್ತಪುರಿಯೆಂಬದು ಗುಪ್ತವಾಗಿಯೇ ಇರುವದು. ಬರಬರುತ್ತ ನಿಮಗೆ ಎಲ್ಲ ಸಂಗತಿಗಳೂ ತಿಳಿಯುವವು."

"ಕೃಷ್ಣಲಾಲರ ಬಳಿಯಲ್ಲಿ ಎಷ್ಟು ಧನವಿದ್ದರೇನು, ಸೈನ್ಯವಿದ್ದರೇನು? ನನ್ನ ಸಲುವಾಗಿ ಅವರನ್ನು ತೊಂದರೆಯಲ್ಲಿ ತೊಡಗಿಸುವದೇಕೆ? ನನ್ನ ಏಕನಿಷ್ಠ ಸರದಾರರು ಚಿತೋಡದ ಸಿಂಹಾಸನವನ್ನು ನನ್ನ ಸ್ವಾಧೀನಕ್ಕೆ ಕೊಡಿಸಬೇಕೆಂದು ದೀರ್ಘಸಾಹಸ ನಡೆಯಿಸಿರುವರು. ಬಹಳ ಮಾಡಿ ಅವರಿಂದ ಕಾರ್ಯಸಿದ್ಧಿಯಾಗಬಹುದು."

"ಅತ್ಯಾಚಾರಿಗಳ ಆಳಿಕೆಯನ್ನು ನಾಶಗೊಳಿಸಿ, ಪ್ರಜಾವತ್ಸಲನಾದ ರಾಜನನ್ನು ಸಿಂಹಾಸನದ ಮೇಲೆ ಕುಳ್ಳಿರಿಸುವ ಕಾರ್ಯವೇನು ಯಾರ ಮನೆಯದೂ ಅಲ್ಲ; ಅದೊಂದು ರಾಷ್ಟ್ರಕಾರ್ಯವೇ ಆಗಿರುವದು. ರಾಷ್ಟ್ರಕಾರ್ಯಕ್ಕಾಗಿ ಪ್ರತಿಯೊಬ್ಬ ರಾಷ್ಟ್ರಾಭಿಮಾನಿಯಾದ ವೀರನು ಕೈಲಾದಮಟ್ಟಿಗೆ ಹೆಣಗಲಿಕ್ಕೆ ಬೇಕು. ಅದರಲ್ಲಿ ಕೃಷ್ಣಲಾಲರೇನು ನಿಮಗೆ ಪರಕೀಯರಲ್ಲ. ಆತ್ಮೀಯ ಭಾವನೆಯಿಂದ ನೆರವಾಗುವ ಸ್ವಕೀಯರನ್ನು ಉಪೇಕ್ಷಿಸುವದು ಒಳಿತಲ್ಲ. ಇಷ್ಟು ದಿನ ನಿಮಗೂ ಕೃಷ್ಣಲಾಲನಿಗೂ ಯಾವ ವಿಧದ ಸಂಬಂಧವೂ ಇರಲಿಲ್ಲ. ಇನ್ನು ಮೇಲೆ ಪರಸ್ಪರರು ಪರಸ್ಪರರಿಗೆ ನೆರವಾಗುತ್ತ ಹೋಗಿರಿ."

ಅಜಿತಾನಂದರ ಮಾತುಗಳ ಮರ್ಮವು ಕೃಷ್ಣಲಾಲನಿಗೆ ಗೊತ್ತಾಗಲಿಲ್ಲ. ಅವರು ಈ ಮೇರೆಗೆ ಮಾತಾಡಿದ ಕಾರಣವೇನಿರಬಹುದೆಂದು ಕೃಷ್ಣಲಾಲನು ವಿಚಾರಿಸತೊಡಗಿದನು. ಉದಯಸಿಂಗನಿಗೆ ಮಾತ್ರ ಅವರ ಮಾತಿನ ರಹಸ್ಯವು ತಿಳಿಯಿತು. ಯಾರಿಗೂ ಗೊತ್ತಿಲ್ಲದ ವಿಷಯವು ಅಜಿತಾನಂದರಿಗೆ ಹೇಗೆ ತಿಳಿಯಿತೆಂದು ಅವನು ಬಹಳವಾಗಿ ವಿಸ್ಮಯಗೊಂಡನು ಅರುಣಕುಮಾರಿಯ ಹಾಗು ತನ್ನ ಗುಪ್ತವಾದ ಪ್ರೇಮಮೀಲನದ ಸಂಗತಿಯು ಅಜಿತಾನಂದರಿಗೆ ತಿಳಿಯಬೇಕಾದರೆ ಅವರು ನಿಜವಾಗಿ ಜ್ಞಾನದೃಷ್ಟಿಯುಳ್ಳವರಿರುವರೆಂದು ಉದಯಸಿಂಗನಿಗೆ ನಂಬಿಗೆಯಾಯಿತು. ಏನೂ ಅರಿಯದ ಕೃಷ್ಣಲಾಲನು ಮಾತ್ರ ವಿಚಾರತರಂಗಗಳ ತಾಕಲಾಟದಲ್ಲಿ ಸಿಲುಕಿದ್ದನು. ಎಷ್ಟು ವಿಧವಾಗಿ ವಿಚಾರಿಸಿದರೂ, ಮನಸ್ಸಿನೊಳಗಿನ

ತೊಡಕು ಬಿಡಲಿಲ್ಲ. ಅವನು ಯಾವ ವಿಧದ ವಿಚಾರದಲ್ಲಿ ಮುಳುಗಿರುವನೆಂಬದು ಅಜಿತಾನಂದರಿಗೆ ಗೊತ್ತಾಯಿತು. ಅವರು ಮುಗುಳು ನಗೆ ನಗುತ್ತ—"ಕೃಷ್ಣ ಲಾಲ, ಬಹಳೇ ವಿಚಾರ ನಡೆದಂತೆ ತೋರುವದು? ಉದಯಸಿಂಗನು ನಿನಗೆ ಹೇಗೆ ಆಪ್ತರಾಗಿರುವರೆಂಬದು ನಿನಗೆ ತಿಳಿಯದಿದ್ದರೂ ನನಗೆ ತಿಳಿದಿದೆ."

"ಪೂರ್ವದ ಸಂಬಂಧವೇನಾದರೂ ಇರಬಹುದು" ಕೃಷ್ಣಲಾಲನು ನುಡಿದನು.

"ಪೂರ್ವದ ಸಂಬಂಧವಲ್ಲ; ಹೊಸದು, ತೀರ ಹೊಸದು!"

ಉದಯಸಿಂಗನು ಮುಖವನ್ನು ಕೆಳಗೆ ಮಾಡಿದನು.

"ಉದಯಸಿಂಗರಾಣಾಜೀ!" ಅಜಿತಾನಂದರು ಆನಂದದಿಂದಲೂ ಗಂಭೀರತೆಯಿಂದಲೂ, "ನೀವು ಅರುಣಕುಮಾರಿಯನ್ನು ವರಿಸಲೊಪ್ಪಿದ್ದರಿಂದ ನನಗೆ ಪರಮಾನಂದವಾಗಿದೆ. ಅಂಧಪರಂಪರೆಯ ಸನಾತನಿಗಳು ಕೃಷ್ಣಲಾಲನನ್ನು ಜಾತಿಭ್ರಷ್ಟನೆಂದು ನಿರ್ಧರಿಸಿ, ಅರುಣಕುಮಾರಿಯನ್ನು ವರಿಸಲಿಕ್ಕೆ ಮನಸ್ಸು ಮಾಡಲಿಲ್ಲ. ನೀವು ಯಾವ ವಿಧದ ಸಂಶಯುವನ್ನು ಮನಸ್ಸಿನಲ್ಲಿ ಹಿಡಿಯದೆ, ಪ್ರೇಮಪೂರ್ವಕವಾಗಿ ಅವಳನ್ನು ಪರಿಗ್ರಹಿಸಲೊಪ್ಪಿರುವಿರಿ. ಅರುಣಕುಮಾರಿಯು ರಾಣಿಯಾಗಬೇಕೆಂದೇ ಈಶಸಂಕೇತವಿರುವದು. ಅವಳ ಹಸ್ತದಲ್ಲಿ ರಾಜಚಿಹ್ನೆಗಳಿರುವವು. ನೀವು ರಾಜಸಿಂಹಾಸನವನ್ನಾರೋಹಿಸಿದ ಮೇಲೆ ಅವಳನ್ನು ವರಿಸತಕ್ಕದ್ದು. ಆತುರತೆಯಿಂದ ಈಗಲೆ ವಿವಾಹವಾದರೆ ಅವಳ ಆಯುಷ್ಯದೀಪವು ನಂದಿಹೋಗುವದು. ನೀವು ಈಗ ರಾಜರಿಲ್ಲ. ರಾಜ್ಯಪ್ರಾಪ್ತಿಯಾದ ಮೇಲೆಯೇ ಅವಳನ್ನು ವರಿಸತಕ್ಕದ್ದು.

"ಸ್ವಾಮಿಮಹಾರಾಜರ ಆಜ್ಞೆಯು ಶಿರಸಾಮಾನ್ಯವಿರುವದು." ಉದಯಸಿಂಗನು ಕೈಜೋಡಿಸಿ ಉತ್ತರವಿತ್ತನು

"ಸ್ವಾಮಿಮಹಾರಾಜರೆ!" ಕೃಷ್ಣಲಾಲನಿಗೆ ಇತ್ಥಂಭೂತ ಸಂಗತಿಗಳೆಲ್ಲ ಗೊತ್ತಾದ ಮೇಲೆ ಆನಂದಾತಿಶಯದಿಂದ—"ಇದೇನು ವಿಚಿತ್ರ ಯೋಗಾಯೋಗವು! ಕಲ್ಪನಾತೀತವಾದ ವಿಸ್ಮಯಜನಕ ಸಂಗತಿಯನ್ನು ನಾನು ಕೇಳಿದೆನು. ನನ್ನ ವಾತ್ಸಲ್ಯದ ಪುತ್ರಿಯಾದ ಅರುಣಕುಮಾರಿಯು ಇಂತಹ ಅಮೃತೋಪಮ ಸುದಿನಗಳನ್ನು ಕಾಣುವಳೆಂದು ನಾನು ಸ್ವಪ್ನದಲ್ಲಿಯೂ ಭಾವಿಸಿರಲಿಲ್ಲ. ಅವಳು ನನ್ನೆದುರಿಗೆ ಈ ವಿಷಯವಾಗಿ ಚಕಾರವನ್ನಾದರೂ ಉಚ್ಚರಿಸಿಲ್ಲ."

"ಸ್ತ್ರೀ ಸ್ವಭಾವವು ಲಜ್ಜಾಯುಕ್ತವಿರುವದರಿಂದ ಅವಳು ಈ ವಿಷಯವನ್ನು ನಿನ್ನೆದುರಿಗೆ ಆಡಲಿಕ್ಕೆ ಸಮರ್ಥಳಾಗಿಲ್ಲ. ಅರುಣಕುಮಾರಿ--ಉದಯಸಿಂಗರ ಪ್ರೇಮಮೀಲನವಾಗಿ ಇನ್ನೂ ಬಹಳ ದಿನಗಳಾಗಿಲ್ಲ. ಕೃಷ್ಣಲಾಲ, ನಿನ್ನ ಕುಮಾರಿಯು ಇನ್ನೂ ಬರಲಿಲ್ಲವಲ್ಲ?" ಎಂದು ಅಜಿತಾನಂದರು ಕೇಳುವಷ್ಟರಲ್ಲಿ ಅಲ್ಲಿಗೆ ಅರುಣಕುಮಾರಿಯು ಬಂದಳು. ಅವಳು ಅಜಿತಾನಂದರಿಗೆ ಅಭಿವಂದಿಸಿ, ಎದುರಿಗಿದ್ದ ಉದಯಸಿಂಗನನ್ನು ನೋಡಿ ಅವನತಮುಖಿಯಾಗಿ ನಿಂತಳು.

"ಅರುಣಕುಮಾರಿ, ಇಷ್ಟು ಹೊತ್ತಿನ ವರೆಗೆ ಎಲ್ಲಿಗೆ ಹೋಗಿದ್ದೆ?"

"ಸರೋವರತೀರಕ್ಕೆ" ಅಜಿತಾನಂದರ ಮಾತಿಗೆ ಅರುಣಳು ಉತ್ತರ ಕೊಟ್ಟಳು.

"ನೀನು ಸರೋವರ ತೀರಕ್ಕೆ ಹೋದದ್ದು ನಿರರ್ಥಕವಾಗಿರಬಹುದಲ್ಲವೆ?"

ಅರುಣಳು ಸುಮ್ಮನೆ ನಿಂತಿದ್ದಳು. ಅವಳ ಮುಖವು ಮಾತ್ರ ಒಳಿತಾಗಿ ಬೆವರೊಡೆಯಿತು.

"ಇವರನ್ನು ನೀನು ಗುರುತಿಸುವೆಯೇನು?" ಅಜಿತಾನಂದರು ಉದಯಸಿಂಗನ ಕಡೆಗೆ ಬೆರಳು ಮಾಡಿ ಅರುಣಳನ್ನು ಕೇಳಿದರು.

ಅರುಣಕುಮಾರಿಯ ಮುಖದಿಂದ ಉತ್ತರ ಹೊರಡಲಿಲ್ಲ

"ಯಾಕೆ? ನಾಚಿಕೆಯಾಗುತ್ತಲಿರುವದು? ಇವರು ರಾಜಮನೆತನದ ಪುರುಷರು. ಹೀಗೆ ನಾಚುವವರನ್ನು ತಮ್ಮ ಅಂತಃಪುರದಲ್ಲಿ ಸೇರಿಸಿಕೊಳ್ಳುವ ಚಟವು ಇವರಲ್ಲಿರುತ್ತದೆ."

"ಸ್ವಾಮಿಮಹಾರಾಜರೆ!" ಅರುಣಳು ಗಟ್ಟಿ ಮನಸ್ಸು ಮಾಡಿ—"ಸರ್ವಜ್ಞರಾದ ನಿಮಗೆ ನಾನು ಏನು ಹೇಳಲಿ? ನೀವು ನನ್ನನ್ನು ಹೆಚ್ಚಾಗಿ ನಾಚಿಸುವ ಹವ್ಯಾಸಕ್ಕೆ ಬೀಳಬೇಡಿರಿ."

ಅಜಿತಾನಂದರು ಗಹಗಹಿಸಿ ನಗತೊಡಗಿದರು. ಆಗ ಕೃಷ್ಣಲಾಲನು—"ಕುಮಾರಿ, ನೀನು ಸುದೈವಿಯಮ್ಮಾ! ಅಂತೆಯೆ ಈ ಮಹಾರಾಣಾರ ಪ್ರೇಮಕ್ಕೆ ಪಾತ್ರಳಾದೆ" ಎಂದು ಆನಂದೋದ್ಗಾರ ತೆಗೆದನು.

ಅರಣಳು ನಾಚಿ ಅಲ್ಲಿಂದ ಒಳಗೆ ಹೋದಳು ಅಜಿತಾನಂದರು ಅವಳ ಕೈ ಹಿಡಿದು ಹೊರಗೆ ತಂದು, ಅವಳ ಕೈಯನ್ನು ಉದಯಸಿಂಗನ ಕೈಯಲ್ಲಿ ಕೊಟ್ಟು—"ಮಹಾರಾಣಾಜೀ, ನಾನು ಈ ಅರುಣಕುಮಾರಿಯ ಕೈಯನ್ನು ನಿಮ್ಮ ಕೈಯಲ್ಲಿ ಕೊಟ್ಟಿರುತ್ತೇನೆ. ಇವಳು ಇಂದಿನಿಂದ ನಿಮ್ಮವಳಾದಳು. ಈ ಅರುಣಳು ಸಾಮಾನ್ಯಳೆಂದು ತಿಳಿಯಬೇಡಿರಿ. ಮಹಾಸಾಧ್ವಿಯೂ, ವೀರಪುತ್ರಿಯೂ, ವೀರಾಂಗನೆಯೂ, ವೀರಪತ್ನಿಯೂ ಆದ ಅರುಣಕುಮಾರಿಯು ನಿಜವಾಗಿ ಅತುಲನೀಯಳಿರುವಳು. ನೀವು ರಾಜಕಾರಣದಲ್ಲಿ ಇವಳ ಅಭಿಪ್ರಾಯದಂತೆ ನಡೆದರೆ ಸುಖ ಪಡೆಯುವಿರಿ. ಸಹಧರ್ಮಿಣಿಯಾದ ಈ ಅರುಣಳಿಂದ ನಿಮ್ಮ ಯಶೋವೃದ್ಧಿಯಾಗುವದು. ರಾಣಾಜಿ, ನೀವು ಸ್ವಲ್ಪ ದಿನಗಳಲ್ಲಿ ಚಿತೋಡದ ರಾಜಸಿಂಹಾಸನವನ್ನಲಂಕರಿಸುವಿರಿ. ಅನಂತರದಲ್ಲಿ ಇವಳನ್ನು ಧರ್ಮೋಚಿತವಾದ ವಿಧಿಯಿಂದ ವಿವಾಹವಾಗಿರಿ. ಅರುಣಕುಮಾರಿ, ನಿನ್ನ ಕೊರಳೊಳಗಿನ ಪುಷ್ಪಮಾಲೆಯನ್ನು ನಿನ್ನ ಪ್ರಣಯ ದೇವನ ಕೊರಳಲ್ಲಿ ಹಾಕು."

ಅಜಿತಾನಂದರು ಹೀಗೆ ನುಡಿದ ಮೇಲೆ ಅರುಣಳು ತನ್ನ ಕೊರಳೊಳಗಿನ ಪುಷ್ಪಮಾಲೆಯನ್ನು ಉದಯಸಿಂಗನ ಕೊರಳಲ್ಲಿ ಹಾಕಿ, ದೂರ ಸರಿದು ನಿಂತಳು.

ಕೂಡಲೆ ಉದಯಸಿಂಗನು ತನ್ನ ಕೊರಳೊಳಗಿನ ರತ್ನಮಾಲೆಯನ್ನು ತಗೆದು ಅರುಣಕುಮಾರಿಯ ಕೊರಳಲ್ಲಿ ಹಾಕಿದನು. ಅನಂತರದಲ್ಲಿ ಪ್ರಣಯಿಗಳಿಬ್ಬರೂ ಅಜಿತಾನಂದರಿಗೂ ಕೃಷ್ಣಲಾಲರಿಗೂ ನಮಸ್ಕರಿಸಿ ಆಶೀರ್ವಾದಹೊಂದಿದರು. ಅನಂತರದಲ್ಲಿ ಕೃಷ್ಣಲಾಲನು ಉದಯಸಿಂಗನನ್ನು ಕುರಿತು—"ಮಹಾರಾಣಾಜೀ, ನೀವು ಅರುಣಕುಮಾರಿಯನ್ನು ಪ್ರೇಮಪೂರ್ವಕವಾಗಿ ವರಿಸಿರುವಿರಿ. ಮುಂದೆ ಯಾವ ಕಾರಣಗಳಿಂದಲೂ ನಿಮ್ಮ ಪ್ರೇಮದಲ್ಲಿ ವ್ಯತ್ಯಾಸವಾಗುವಂತೆ ಮಾಡಬಾರದು. ನೀವು ರಾಜರು. ಅರುಣಳು ಸಾಮಾನ್ಯ ಸ್ತ್ರೀಯು. ರಾಜರ ಮನೋವೃತ್ತಿಯು ಇಂತಹ ಸಮಯದಲ್ಲಿಯೇ ಪರಿವರ್ತನ ಹೊಂದುವದೆಂದು ಹೇಳಲಿಕ್ಕೆ ಬರುವಂತಿಲ್ಲ. ನೀವು ಚಿತೋಡ ರಾಜಧಾನಿಗೆ ಹೋದ ಮೇಲೆ ಇವಳನ್ನು ಮರೆತು ಸ್ವಸ್ಥವಾಗಿ ಕುಳಿತುಕೊಳ್ಳಬೇಡಿರಿ. ಇವಳು ನನ್ನ ವಾತ್ಸಲ್ಯದ ಪುತ್ರಿಯು. ಇವಳಿಗೆ ಯಾವ ತರದ ದುಃಖವೊದಗಬಾರದೆಂದು ನನ್ನ ಇಚ್ಛೆಯುಂಟು. ಇವಳಿಗೆ ದುಃಖವಾದರೆ ನನಗೆ ಮರಣಸದೃಶಯಾತನೆಯಾಗುವದು. ಸುಜ್ಞರಾದ ನಿಮಗೆ ಇದಕ್ಕಿಂತ ಹೆಚ್ಚಿಗೆ ಏನು ಹೇಳಲಿ? ನಾನು ನನ್ನ ಕುಮಾರಿಯನ್ನು ನಿಮ್ಮ ಕೈಯಲ್ಲಿ ಕೊಟ್ಟಿರುವೆನು. ಇವಳಿಗೆ ಸುಖವಾಗುವಂತೆ ಯತ್ನಿಸುವ ಭಾರವು ನಿಮ್ಮನ್ನೇ ಕೂಡಿದೆ."

"ಕೃಷ್ಣಲಾಲರೆ!" ಉದಯಸಿಂಗನು ಗಂಭೀರ ವಾಣಿಯಿಂದ—"ನೀವು ಯಾವ ಬಗೆಯ ಯೋಚನೆ ಮಾಡಬೇಡಿರಿ. ನಾನು ಈ ಅರುಣಳನ್ನು ಪುಷ್ಪದಂತೆ ರಕ್ಷಿಸುವೆನು. ಕಾಲತ್ರಯದಲ್ಲಿಯೂ ನನ್ನ ಪ್ರೇಮವು ನ್ಯೂನತೆ ಹೊಂದಲಾರದು. ಜೀವದಾನ ಮಾಡಿದವನು ಎಂದಾದರೂ ಪ್ರಾಣಹಾನಿ ಮಾಡುವನೆ?"

"ಉದಯಸಿಂಗರೆ, ನೀವು ಅರುಣಕುಮಾರಿಗೆ ಜೀವದಾನ ಮಾಡಿರುವಿರಾ?" ಕೃಷ್ಣಲಾಲನು ವಿಸ್ಮಯದಿಂದ ಕೇಳಿದನು.

ಅರುಣಕುಮಾರಿಯು ಸರೋವರದಲ್ಲಿ ಬಿದ್ದಂದಿನಿಂದ ಪ್ರೇಮಮೀಲನದ ವರೆಗೆ ಎಲ್ಲ ಸಂಗತಿಗಳನ್ನು ಉದಯಸಿಂಗನು ಕೃಷ್ಣಲಾಲನಿಗೆ ಹೇಳಿದನು. ಕೃಷ್ಣಲಾಲನಲ್ಲಿ ದುಃಖ-ವಿಸ್ಮಯ-ಆನಂದ ಮೊದಲಾದ ಅನೇಕ ವಿಕಾರಗಳು ಉದಯಿಸಿದವು. ಆಗ ಅವನು ಅರುಣಕುಮಾರಿಯನ್ನು ಕುರಿತು:—ಕುಮಾರಿ! ಈ ನಿನ್ನ ವೃದ್ಧ ತಂದೆಗೆ ಸುಖವಾಗಬೇಕೆಂಬ ಉದ್ದೇಶದಿಂದ ಆತ್ಮಹತ್ಯೆಗೆ ಸಿದ್ಧಳಾಗಿದ್ದೆಯಾ? ನಿನ್ನ ಮರಣದಿಂದ ನನಗೆ ಸುಖವಾಗುತ್ತಿತ್ತೆ? ಉದಯಸಿಂಗರು ವೇಳೆಗೆ ಸರಿಯಾಗಿ ಒದಗದಿದ್ದರೆ ಮಹಾ ಪ್ರಮಾದವು ಘಟಿಸುತ್ತಿತ್ತು. ದೇವರು ದೊಡ್ಡ ಕುತ್ತಿನಿಂದ ಪಾರು ಮಾಡಿದನು. ಅರುಣ, ಸುಜ್ಞಳಾದ ನೀನು ಆತ್ಮಘಾತದಂತಹ ನಿಂದ್ಯವೂ ಪಾತಕಪ್ರದವೂ ಆದ ಕೃತಿಯನ್ನಾಚರಿಸಲು ಮನಸ್ಸು ಮಾಡಬಹುದೆ?"

"ಅಪ್ಪಾ, ಆ ವೇಳೆಯಲ್ಲಿ ನನ್ನ ಮನೋವೃತ್ತಿಯು ವಿಚಿತ್ರತರದ್ದಾಗಿತ್ತು." ಎಂದು ಅರುಣಕುಮಾರಿಯು ಉತ್ತರವಿತ್ತಳು.

"ದೇವರು ಕಲ್ಯಾಣ ಮಾಡಿದನು. ನೀನು ಉದಯಸಿಂಗರ ಅರ್ಧಾಂಗಿಯಾಗಬೇಕೆಂದು ಈಶಸಂಕೇತವಿದ್ದುದರಿಂದ ಅಂದು ಜೀವದಿಂದುಳಿದೆ." ಅಜಿತಾನಂದರು ಅರುಣಕುಮಾರಿಯನ್ನು ಕುರಿತು ನುಡಿದು, ಉದಯಸಿಂಗನಿಗೆ-"ರಾಣಾಜಿ ಸದ್ಯಕ್ಕೆ ನೀವು ಅರುಣಕುಮಾರಿಯ ವ್ಯಾಮೋಹದಲ್ಲಿ ತೊಡಕಿಕೊಳ್ಳದೆ, ಕರ್ತವ್ಯತತ್ಪರರಾಗಿರಿ. ಈ ಸಂಧಿಯಲ್ಲಿ ರಾಜಕಾರಣವನ್ನು ದುರ್ಲಕ್ಷಿಸಿದರೆ ನಿಮ್ಮ ಹಾನಿಯಾಗುವದು. ನೀವು ಬೇಗನೆ ನಿಮ್ಮ ಸರದಾರರನ್ನು ಕೂಡಿಕೊಂಡು ಚಿತೋಡದ ಮೇಲೆ ದಂಡೆತ್ತಿ ಹೋಗಿರಿ. ರಾಜ್ಯಭಾರವನ್ನು ವಹಿಸುವವರಾದ ನೀವು ಅತಿಯಾಗಿ ವಿಷಯಾಸಕ್ತರಾದರೆ, ನೀವು ನಾಶಹೊಂದುವದಲ್ಲದೆ, ರಾಷ್ಟ್ರದ ಹಾನಿಯನ್ನು ಸಹ ಮಾಡುವಿರಿ."

"ಸ್ವಾಮಿಮಹಾರಾಜರೆ, ನಿಮ್ಮ ಸೂಚನೆಗಳು ಯೋಗ್ಯವಾದವುಗಳಿರುವವು. ನಾನು ನಿಮ್ಮ ಆಜ್ಞೆಯ ಮೇರೆಗೆ ಬೇಗನೆ ದಂಡಯಾತ್ರೆಗೆ ತೆರಳುವೆನು. ಗುಪ್ತಪುರಿಯಲ್ಲಿದ್ದ ಸೈನ್ಯವನ್ನು ಬೇಗನೆ ಕಳುಹಿಸಬೇಕು."

ಉದಯಸಿಂಗನು ಹೀಗೆ ನುಡಿಯಲು, ಕೃಷ್ಣಲಾಲನು—"ನಾನು ಇಂದೇ ಗುಪ್ತಪುರಿಗೆ ಹೊರಡುವೆನು. ನೀವು ಚಿತೋಡವನ್ನು ತಲುಪುವದರೊಳಗೆ ಆ ಸೈನ್ಯವು ಅಲ್ಲಿಗೆ ಬರುವದೆಂದು ನಂಬಿರಿ."

ಉದಯಸಿಂಗನು ಅಜಿತಾನಂದರಿಗೂ ಕೃಷ್ಣಲಾಲನಿಗೂ ನಮಿಸಿ, ಅವರ ಹಾಗು ಅರುಣಕುಮಾರಿಯ ನಿರೋಪಹೊಂದಿ ಅಲ್ಲಿಂದ ಹೊರಡಲನುವಾದನು. ಆಗ ಅರುಣಕುಮಾರಿಯು ಉದಯಸಿಂಗನನ್ನು ಪ್ರೇಮಳ ದೃಷ್ಟಿಯಿಂದ ನೋಡುತ್ತ "ಈ ಕಿಂಕರಿಯನ್ನು ಮರೆಯಬೇಡಿರಿ!" ಎಂದು ನಮ್ರಳಾಗಿ ನುಡಿದಳು.

"ಅರುಣಾ, ಈ ಜನ್ಮದಲ್ಲಿ ನಿನ್ನನ್ನು ಮರೆಯುವದು ಸಾಧ್ಯವಿಲ್ಲ. ನೀನು ನಿಶ್ಚಿಂತಳಾಗಿರು."

ಉದಯಸಿಂಗನು ಹೀಗೆ ಆಶ್ವಾಸನೆಯಿತ್ತು ಅಲ್ಲಿಂದ ಹೊರಟು ತನ್ನ ಅರಮನೆಯನ್ನು ತಲುಪಿದನು.

---

## ಹಗಲು ಸುಲಿಗೆಯ ವೈಚಿತ್ರ್ಯ.

"ಲಾವಣ್ಯವತಿ!"

"ಯಾಕೆ ಮಹಾದೇವಿ?"

"ಮಹಾರಾಣಾಜಿಯವರ ಮನೋವೃತ್ತಿಯಲ್ಲಿ ಇತ್ತೀಚೆಗೆ ವಿಲಕ್ಷಣವಾದಂತೆ ತೋರುತ್ತಿರುವದಲ್ಲವೆ?"

"ಅದು ಹೇಗೆ?"

"ಅವರು ಈಗ ರಾಜಕಾರಣವನ್ನು ಪೂರಾ ದುರ್ಲಕ್ಷ್ಯಿಸುತ್ತಿರುವರು. ಚಿತೋಡದ ಮೇಲೆ ಬೇಗನೆ ದಂಡೆತ್ತಿ ಬರಬೇಕೆಂದು ಚೋಂಡಾ ಸಾಹಿದಾಸರು ಹೇಳಿದ್ದರೂ, ಅವರು ದಂಡಯಾತ್ರೆಯ ಸಿದ್ಧತೆಯಲ್ಲಿ ತೊಡಗಿಲ್ಲ. ಚಿತೋಡದ ರಾಜ್ಯಲಕ್ಷ್ಮಿಯು ಸ್ವಾಧೀನವಾಗುವಂತಹ ಅಮೃತೋಪಮ ಸಂಧಿಯಲ್ಲಿ ಈ ಬಗೆಯಾಗಿ ಕರ್ತವ್ಯಪರಾಙ್ಮುಖರಾದರೆ ಮುಂದೆ ಗತಿಯೇನು?"

"ಮಹಾದೇವಿ, ರಾಣಾಜಿಯವರು ಮೊದಲೆ ಆಲಸಿಗಳು. ಅವರನ್ನು ಮತ್ತಿಷ್ಟು ಕರ್ತವ್ಯಪರಾಙ್ಮುಖರನ್ನು ಮಾಡುವಂತಹ ಯಾವ ಕಾರಣವು ಘಟಿಸಿರುವುದೋ ಏನೋ! ನೀವು ಅವರಿಗೆ ಉಪದೇಶಿಸಿ ಕರ್ತವ್ಯದಲ್ಲಿ ತೊಡಗಿಸಿರಿ."

"ಇತ್ತೀಚಿಗೆ ನನ್ನೊಡನೆ ಸಹ ಅವರು ಅಷ್ಟೊಂದು ಸರಳತನದಿಂದ ನಡೆಯುದಾಗಿರುವರು."

"ದೇವಿ, ಮಹಾರಾಣಾಜಿಯವರು ನಿಮ್ಮನ್ನು ಉಪೇಕ್ಷಿಸುತ್ತಿರುವರೆ?"

"ಲಾವಣ್ಯವತಿ, ನಾನು ಸುಳ್ಳಾಡುವೆನೆಂದು ನೀನು ತಿಳಿಯಬೇಡ. ಅವರ ಮನೋವೃತ್ತಿಯು ನಿಜವಾಗಿ ವಿಚಿತ್ರವಾಗಿರುವದು. ಹೀಗಾಗಲಿಕ್ಕೆ ಕಾರಣವೇನಿರಬಹುದೆ?"

"ಅವರ ಮನೋವೃತ್ತಿಯಲ್ಲಿ ಸ್ಥಿತ್ಯಂತರವಾಗಿರುವದೆಂಬದನ್ನೇ ನಾನು ಗುರುತಿಸಿಲ್ಲ. ಹೀಗಿದ್ದ ಮೇಲೆ ಅವರ ಚಿತ್ತವೈಚಿತ್ರ್ಯದ ಕಾರಣವನ್ನು ಹೇಗೆ ಹೇಳಲಿ?" ಲಾವಣ್ಯವತಿಯು ನಗುತ್ತ ನುಡಿದಳು.

"ಆ ಕಾರಣವನ್ನು ಅನುಮಾನದಿಂದ ತಿಳಿಯಲಿಕ್ಕೆ ಬರುವಂತಿಲ್ಲವೆ?"

"ಮನಬಂದಂತೆ ತರ್ಕಿಸುತ್ತ ಹೋದರೆ ಮನೋವ್ಯಥೆಯಾಗುವದು."

"ಯಾರಿಗೆ?"

"ನಿಮಗೆ."

"ಅದೇಕೆ?"

"ಮಹಾರಾಜ್ಞಿಯವರೆ, ಯುವಕರ ಅದರಲ್ಲಿ ಮಹಾರಾಣಾಜಿಯವರಂತಹ ವಿಲಾಸಿಗಳ ಮನೋವೃತ್ತಿಯಲ್ಲಿ ಅಭ್ಯಂತರವುಂಟಾಗಲಿಕ್ಕೆ ಒಂದೇ ಒಂದು ವಿಶಿಷ್ಟ ಪ್ರಕಾರದ ಕಾರಣವಿರಲಿಕ್ಕೆ ಬೇಕೆಂದು ನನ್ನ ಅನುಮಾನವು."

" ನಿನ್ನ ಅಭಿಪ್ರಾಯವು ತಿಳಿಯಿತು. ಚಾಣಾಕ್ಷಳೆಂದು ಅಭಿಪ್ರಾಯ ಕೇಳಿದರೆ ಹೀಗೆ ಏನಾದರೊಂದು ಹೇಳುತ್ತಿರುವೆ. ತಮ್ಮ ಪಂಚಪ್ರಾಣಗಳೆಂದು ತಿಳಿದಿರುವ ನನ್ನನ್ನು ಅವರು ಎಂದೂ ಉಪೇಕ್ಷಿಸಲಾರರು."

"ಮಹಾದೇವಿ, ನಿಮ್ಮನ್ನು ರಾಣಾಜಿಯವರು ಪಂಚಪ್ರಾಣಗಳೆಂದು ತಿಳಿದಿರಬಹುದು; ನಿಮ್ಮ ಮೇಲೆ ಪ್ರೇಮವುಳ್ಳವರಿರಬಹುದು. ಅವರು ನಿಮ್ಮನ್ನುಪೇಕ್ಷಿಸುತ್ತಿರಲಿಕ್ಕಿಲ್ಲ; ಆದರೆ ಅವರ ಪ್ರೇಮವನ್ನು ಬಲದಿಂದ ಎಳಕೊಳ್ಳುವ ಮತ್ತೊಬ್ಬ ಲಾವಣ್ಯಲತಿಕೆಯು ಗಂಟುಬಿದ್ದಿದ್ದರೆ?"

"ಛೀ! ಲಾವಣ್ಯವತಿ, ಇದೇನು ಮಾತಾಡುವೆ? ಎಂತಹರಲ್ಲಿ ದೋಷಾರೋಪಣ ಮಾಡುವೆ? ಯಾವದೊಂದು ಮನೋವ್ಯಥೆಯಿಂದ ಅವರು ಉದಾಸೀನರಾಗಿರಬಹುದೆಂದು ನಾನು ಊಹಿಸುವೆನು."

"ಅವರ ಮನೋವ್ಯಥೆಯು ಎಂತಹದಿರಬಹುದೆಂಬದನ್ನು ಊಹಿಸಬಲ್ಲಿರಾ?"

"ಅದು ನನಗೆ ಚನ್ನಾಗಿ ತಿಳಿಯದು."

"ಹಾಗಾದರೆ ಅಲ್ಪ ಮಟ್ಟಿಗಾದರೂ ತಿಳಿದಿರಬಹುದು. ನಿಮಗೆ ತಿಳಿದ ಸಂಗತಿ ಹೇಳಿರಿ."

"ಮಹಾರಾಣಾಜಿಯವರು ಸಾಹಸಿಗರಲ್ಲ. ಚಿತೋಡದ ರಾಜಸಿಂಹಾಸನವು ಒಳಿತಾಗಿ ಪ್ರಯತ್ನ ಮಾಡದೆ ಸ್ವಾಧೀನವಾಗುವಂತಿಲ್ಲೆಂದು ತಿಳಿದುಕೊಂಡದ್ದರಿಂದ ಅವರು ಚಿಂತಾಗ್ರಸ್ತರಾಗಿರಬಹುದು."

"ಚಿತೋಡದ ರಾಜಸಿಂಹಾಸನದ ಮೇಲೆ ಸ್ಥಾನಾಪನ್ನರಾಗುವದಕ್ಕಿಂತ, ಯಾವಳೊಬ್ಬ ರಮಣಿಯ ಹೃದಯಸಿಂಹಾಸನದಲ್ಲಿ ವಿರಾಜಮಾನರಾಗಬೇಕೆಂದು ಅವರ ಸಾಹಸವಿರಬಹುದು. ಆ ಕಾರ್ಯವನ್ನು ಈಡೇರಿಸುವ ಹವಣಿಕೆಯಲ್ಲಿ ತೊಡಗಿರುವದರಿಂದಲೆ, ಮಹಾರಾಣಾಜಿಯವರು ರಾಜಕಾರಣದಂತಹ ಮಹತ್ವದ ವಿಷಯವನ್ನು ದುರ್ಲಕ್ಷ್ಯಿಸಿರುವರು; ಮಿಕ್ಕ ವಿಷಯಗಳಲ್ಲಿ ಉದಾಸೀನತೆ ಹೊಂದಿರುವರು. ನನ್ನ ಅಲ್ಪಮತಿಗಂತು ಇದೇ ಮೇರೆಗೆ ತೋಚುವದು. ಮಹಾರಾಜ್ಞಿಯವರು ತಮ್ಮ ವಿಶಾಲಬುದ್ಧಿಗೆ ತಿಳಿದಂತೆ ಅನುಮಾನ ಮಾಡಬಹುದು."

'ಲಾವಣ್ಯ!'

'ಯಾಕೆ, ಮಹಾದೇವಿ?'

'ನೀನು ದಾರೀಬಿಟ್ಟಿ!'

'ನಾನು ದಾರಿಯಲ್ಲಿರುವೆನು ಮಹಾರಾಜ್ಞಿ!'

'ವಿನೋದದ ಪರಮಾವಧಿಯಾಯಿತು.'

"ದೇವಿ, ತಮ್ಮಂತಹರೊಡನೆ ವಿನೋದವೇತರದು? ನನಗೆ ತಿಳಿದಮಟ್ಟಿಗೆ ಮಾತಾಡಿದೆನು. ಈ ದಾಸಿಯಿಂದ ಪ್ರಮಾದವುಂಟಾಗಿದ್ದರೆ ಕ್ಷಮಿಸಿರಿ."

"ಸಖಿ, ಮಹಾರಾಣಾಜಿಯವರ ಹೃದಯವನ್ನು-ನನ್ನ ಹೃದಯರತ್ನವನ್ನು-ಸೆಳೆದುಕೊಳ್ಳುವ ಸಾಹಸದ ಕೃತಿಯು ಯಾವ ರಮಣಿಯಿಂದಲಾದರೂ ಘಟಿಸಿರಬಹುದೆಂದು ನಿನ್ನ ಅನುಮಾನವಿರುವದೇನು? ಅಂಜದೆ ನಿಜಸ್ಥಿತಿಯನ್ನರುಹು."

"ನನಗೆ ಯಾವ ಸಂಗತಿಯೂ ತಿಳಿದಿಲ್ಲ. ನನ್ನ ಅನುಮಾನವನ್ನು ಮುಂಚಿತವಾಗಿ ಹೇಳಿಬಿಟ್ಟಿರುವೆನು. ನನ್ನ ಅಭಿಪ್ರಾಯವನ್ನು ಕೇಳಿ ನೀವು ಸಿಟ್ಟಾದಿರಿ. ನಿಮ್ಮಂತಹರೊಡನೆ ನಾನು ಹೇಗೆ ಮಾತಾಡಬೇಕು?"

ಮಹಾರಾಣಾ ಉದಯಸಿಂಗನ ಹಿರಿಯ ಹೆಂಡತಿಯಾದ ಸರೋಜಸುಂದರಿ ದೇವಿಯು ತನ್ನ ಸಹಚರಿಯೊಡನೆ ಸೌಧಾಗ್ರದಲ್ಲಿ ಕುಳಿತಿದ್ದಳು. ಮೇಲೆ ಬರೆದಂತೆ

ಅವರೊಳಗೆ ಸಂಭಾಷಣ ನಡೆದಾಗ ಆಕಸ್ಮಾತ್ತಾಗಿ ಉದಯಸಿಂಗನು ಅಲ್ಲಿಗೆ ಬಂದನು. ಕೂಡಲೆ ಅವರ ಮಾತುಗಳು ಅಷ್ಟಕ್ಕೇ ನಿಂತವು. ಲಾವಣ್ಯಾವತಿಯು ಅಲ್ಲಿಂದೆದ್ದು ಹೊರಗೆ ಬಂದಳು. ಸರೋಜಸುಂದರಿಯು ಮಂಚದಿಂದೆದ್ದು ಕೆಳಗೆ ನಿಂತಳು. ಉದಯಸಿಂಗನು ಅವಳ ಕೈ ಹಿಡಿದು ಮಂಚದ ಮೇಲೆ ಕುಳ್ಳಿರಿಸಿ ತಾನೂ ಕುಳಿತನು. ಅನಂತರದಲ್ಲಿ ಅವನು ಪತ್ನಿಯನ್ನು ಕುರಿತು:"ಸರೋಜ, ನಿನ್ನ ಮುಖವು ಮ್ಲಾನವಾಗಿರುವ ಕಾರಣವೇನು? ನಾಲ್ಕಾರು ದಿನಗಳಿಂದ ನಿನ್ನ ಮುಖದ ಮೇಲಿನ ಕಾಂತಿಯು ಅಡಗಿದಂತಾಗಿದೆ. ನಿನ್ನ ವಿಷಾದದ ಕಾರಣವನ್ನು ಕೇಳಬೇಕೆಂದು ಆಗನಿಂದಲೆ ಯೋಚಿಸಿಕೊಂಡಿದ್ದೆನು; ಆದರೆ ನನಗೆ ಅನುವು ದೊರೆತಿದ್ದಿಲ್ಲ."

"ನನ್ನ ಮನಸ್ಸಿನೊಳಗಿನ ವಿಷಾದದ ಕಾರಣವನ್ನು ವಿಚಾರಿಸಲಿಕ್ಕೆ ನಾಲ್ಕಾರು ದಿನಗಳ ಮೇಲಾದರೂ ನಿಮಗೆ ಅನುವು ದೊರೆತದ್ದನ್ನು ನೋಡಿಯೆ ನನಗೆ ಆನಂದ ವಾಯಿತು." ಸರೋಜಸುಂದರಿಯು ವ್ಯಂಗೋಕ್ತಿಯಿಂದ ನುಡಿದಳು.

"ಪ್ರಿಯೆ!" ಸರೋಜಸುಂದರಿಯ ಒಂದೇ ಮಾತಿನಿಂದ ಉದಯಸಿಂಗನು ಮರ್ಮಾಹತನಾಗಿ—"ನಾನು ನಿನ್ನನ್ನು ಎಂದಾದರೂ ಉಪೇಕ್ಷಿಸಿರುವೆನೆ? ವ್ಯರ್ಥ ವಾಗಿ ಚುಚ್ಚಿ ಮಾತಾಡಬೇಡ."

"ವಿಷಾದದ ಕಾರಣವನ್ನು ಕೇಳಲಿಕ್ಕೆ ಇಷ್ಟು ಅವಧಿಯು ತಗಲಿದ ಮೇಲೆ ದುಃಖನಿವಾರಣೆಗಾಗಿ ಉಪಾಯಗಳನ್ನು ಕೈಕೊಳ್ಳಬೇಕಾದರೆ ಎಷ್ಟು ದಿನಗಳು ಹಿಡಿ ಯುವವೋ ಎಂದು ಮನಸ್ಸು ಮತ್ತಿಷ್ಟು ಉದ್ವಿಗ್ನವಾಗುತ್ತಿರುವದು."

"ಸರೋಜ, ನಿನ್ನ ಮಾತಿನ ಅರ್ಥವಾಗಲೊಲ್ಲದು.

"ಅರ್ಥವಾಗದಿರಲಿಕ್ಕೆ ನಾನೇನು ಅಂತಹ ಗಡಚಾದ ಭಾಷೆಯನ್ನುಪ ಯೋಗಿಸಿಲ್ಲ."

"ನಿನ್ನ ವೃತ್ತಿಯೇ ವಿಲಕ್ಷಣವಾಗಿದೆ."

ವಿಲಕ್ಷಣವಾದ ದೃಷ್ಟಿಗೆ ಎಲ್ಲವೂ ವಿಲಕ್ಷಣವೇ ತೋರುವದರಲ್ಲಿ ಸೋಜಿಗವಿಲ್ಲ.

"ಸರೋಜ!"

"ನಾಥ!"

"ನೀನು ನನ್ನೊಡನೆ ಸರಳತನದಿಂದ ಮಾತಾಡವೆಯೊ ಇಲ್ಲವೊ?"

"ವಕ್ರಮಾರ್ಗದವರಿಗೆ ಸರಳತನವು ಸಹ ವಕ್ರವಾಗಿ ತೋರುತ್ತಿದ್ದರೆ ನನ್ನ ದೋಷವೇನು?"

"ಪ್ರಿಯೆ, ವಿನೋದವು ಸಾಕು. ನೀನು ಈ ಪರಿಯಾಗಿ ಕ್ಷೋಭೆಗೊಂಡ ಕಾರಣವನ್ನು ನಾನು ಅರಿಯದಿಲ್ಲ."

"ಮಾಡಿದ ಪಾಪಕ್ಕೆ ಮನವೇ ಸಾಕ್ಷಿ."

"ನಾಳೆಯೇ ದಂಡಯಾತ್ರೆಗೆ ಹೊರಡುವೆನು. ನೀನು ನಿಶ್ಚಿಂತಳಾಗು

"ನಾಥರೆ, ಕೇವಲ ವಿಲಾಸವೃತ್ತಿಯಲ್ಲಿ ಲೀನರಾಗಿ ಮಹತ್ವದ ಕರ್ತವ್ಯಗಳನ್ನು

ಮರೆತು ಕುಳಿತುಕೊಳ್ಳುವದೆಂದರೆ ಅದೊಂದು ಬಗೆಯ ಆತ್ಮಘಾತಕ ಕೃತ್ಯವಲ್ಲವೆ? ಬನಬೀರ ಮಾಲೋಜಿ ಮೊದಲಾದ ಅತ್ಯಾಚಾರಿಗಳ ಆಳಿಕೆಯಿಂದ ಮೇವಾಡರಾಷ್ಟ್ರವು ತ್ರಸ್ತವಾಗಿರುವದು. ಅವರು ಸುರಾಜ್ಯ ಸ್ಥಾಪನೆ ಮಾಡಬೇಕೆಂಬ ಉದ್ದೇಶದಿಂದ ಚಿತೋಡದ ರಾಣಾರ ವಂಶಸಂಭೂತರಾದ ನಿಮ್ಮ ಪಕ್ಷಹಿಡಿದು ಸಾಹಸ ಮಾಡುತ್ತಿರುವರು. 'ಪ್ರಥಮಗ್ರಾಸೆ ಮಕ್ಷಿಕಾಪಾತಃ' ಎಂಬಂತೆ ನೀವು ಮೊದಲಿಗೇ ನಿಮ್ಮ ದಿವ್ಯ ವೃತ್ತಿಯನ್ನು ಬೈಲಿಗೆಳೆದಿರಿ. ಪಟ್ಟಬಾಧ್ಯರಿಗೆ ರಾಜಸಿಂಹಾಸನವನ್ನರ್ಪಿಸಿ ರಾಷ್ಟ್ರದಲ್ಲಿ ಸುಖಶಾಂತಿಗಳು ನೆಲೆಗೊಳ್ಳುವಂತೆ ಮಾಡಬೇಕೆಂದು ಹಗಲು-ರಾತ್ರಿ ಕಣ್ಣಲ್ಲಿ ಎಣ್ಣೆಹಾಕಿಕೊಂಡು ಕುಳಿತಿರುವ ಚಿತೋಡದ ಏಕನಿಷ್ಠರಾದ ಮಂತ್ರಿ ಸೇನಾಪತಿಗಳೂ, ಸರದಾರರೂ, ಮಾಂಡಲಿಕರೂ ನಿಮ್ಮ ವಿಚಿತ್ರ ವರ್ತನವನ್ನು ನೋಡಿ ಎಷ್ಟು ನೊಂದುಕೊಳ್ಳಬಹುದೆಂಬದರ ಪರಿವೆಯು ನಿಮಗಿಲ್ಲದ ಮೇಲೆ, ಮೇವಾಡ ರಾಷ್ಟ್ರವು ಸುಖಸಾಮ್ರಾಜ್ಯದಲ್ಲಿ ಬಾಳಬೇಕೆಂದು ಹಗಲಿರುಳು ಕುದಿಯುತ್ತಿರುವ ನನಗೆ ಹೇಗೆ ಆನಂದವು ಲಭಿಸಬೇಕು? ಮಹಾರಾಣಾಜೀ, ನಿಮ್ಮ ಪೂರ್ವಜರು ಎಂತಹ ಕರ್ತವ್ಯನಿಷ್ಠರೂ ಸಾಹಸಿಗಳೂ ಇದ್ದರೆಂಬದನ್ನು ನೆನೆದಾದರೂ ಜಾಗ್ರತರಾಗಿರಿ. ನಾನಾವಿಧದ ವಿಲಾಸೋಪಭೋಗಗಳಲ್ಲಿ ಕಾಲಹರಣ ಮಾಡಲಿಚ್ಛಿಸುವವರಿಗೆ ರಾಜಕಾರಣವು ಮೈಗೆ ಮುಳ್ಳು ಹಚ್ಚಿದಂತಾಗುವದು. ಕೇವಲ ವೈಷಯಿಕ ವ್ಯಾಮೋಹದಲ್ಲಿರುವದೇ ಅರಸರ ಇತಿ ಕರ್ತವ್ಯವಲ್ಲ. ಅದರಲ್ಲಿ ಚಿತೋಡದ ರಾಜಸಿಂಹಾಸನಕ್ಕೆ ನೀವು ಇನ್ನೂ ಅಧಿಪತಿಗಳಾಗಿಲ್ಲ. ನಿಮ್ಮ ಹಾಗು ರಾಜನಿಷ್ಠ ಸರದಾರರ ದೀರ್ಘಸಾಹಸದಿಂದ ಅದು ಲಭಿಸಬಹುದಾಗಿದೆ. ಇಂತಹ ಆಯಕಟ್ಟಿನ ವೇಳೆಯಲ್ಲಿ ಅಜಾಗ್ರತರಾಗಿ ಕುಳಿತುಕೊಂಡಿರುವಿರಿ. ಪ್ರಿಯರೆ, ಇಂತಹ ಮಹತ್ವದ ಪ್ರಸಂಗವನ್ನು ಮರೆಯಿಸಿ, ಬೇರೆ ಕಡೆಗೆ ಮನಸ್ಸನ್ನೆಳೆಸುವ ಘನತರವಾದ ಘಟನೆಯೊಂದು ಒದಗಿರಲಿಕ್ಕೆಬೇಕೆಂದು ನನ್ನ ಮನೋದೇವತೆಯು ಹೇಳುತ್ತಿರುವದು.''

ಸರೋಜಸುಂದರಿಯ ಮಾತುಗಳಿಂದ ರಾಣಾನು ಜರ್ಜರಿತನಾದನು ಅವನು ಎಂತಹ ಆಲಸಿಗನೂ ವಿಲಾಸಿಯೂ ಆಗಿದ್ದರೂ, ಯಥಾಸ್ಥಿತವಾದ ಅಭಿಪ್ರಾಯಕ್ಕೆ ಮೆಚ್ಚುತ್ತಿದ್ದನು. ರಾಜಕಾರಣದಲ್ಲಿ ತನ್ನಿಂದ ಅಲಕ್ಷ್ಯವಾದ ಸಂಗತಿಯು ಅವನ ಮನಸ್ಸಿನಲ್ಲ ಕಟಿಯುತ್ತಲಿತ್ತು. ತನ್ನ ಮನಸ್ಸನ್ನು ಆಕರ್ಷಿಸಿ, ಮನೋಮಯ ಸಾಮ್ರಾಜ್ಯದ ಅಧಿದೇವತೆಯಾಗಿದ್ದ ಮೋಹಿನಿಯ ಮಾಯೆಯು ಅಲಂಘನೀಯವಾಗಿತ್ತು. ಸ್ವಾಮಿ ಅಜಿತಾನಂದರ ಉಪದೇಶವು ಅಂದು ಅವನ ಮನಸ್ಸಿನ ಮೇಲೆ ಒಳ್ಳೆಯ ಪರಿಣಾಮವನ್ನುಂಟು ಮಾಡಿತ್ತು. ಅಂತೆಯೇ ಬೇಗನೆ ದಂಡಯಾತ್ರೆಗೆ ಹೊರಡಬೇಕೆಂದು ಸಂಕಲ್ಪ ಮಾಡಿಕೊಂಡು ಅರಮನೆಗೆ ಬಂದಿದ್ದನು. ಇಂತಹ ಮನಃಸ್ಥಿತಿಯಲ್ಲಿ ಪತ್ನಿಯಾದ ಸರೋಜಸುಂದರಿಯ ಮರ್ಮಭೇದಕ ಮಾತುಗಳಿಂದ ಅವನು ಮತ್ತಿಷ್ಟು ಮೆತ್ತಗಾದನು. ತನ್ನಿಂದ ಬಹು ದೊಡ್ಡ ಪ್ರಮಾದವು ಘಟ

ಸಿರುವದೆಂಬುದು ಅವನಿಗೆ ನಿಶ್ಚಯುವಾಗಿ ತಿಳಿಯಿತು. ಇದಲ್ಲದೆ ಇನ್ನೊಂದು ಸಂಗತಿಯು ಅವನ ಮನಸ್ಸನ್ನು ತಿನ್ನತೊಡಗಿತ್ತು. ತಾನು ಅತ್ಯಂತ ಗುಪ್ತವೆಂದು ತಿಳಿದಿದ್ದ ಸಂಗತಿಯ ರಹಸ್ಯ ಸ್ಫೋಟವಾಗಿರುವದೋ ಏನೋ ಎಂಬ ಭಯವು ಅವನನ್ನು ಬಾಧಿಸತೊಡಗಿತು. ಉದಯಸಿಂಗನು ನೀತಿವಿಶಾರದಳೂ ಗುಣಮಣಿಯೂ ಮಹಾಸತಿಯೂ ಆದ ಸರೋಜಸುಂದರಿಗೆ ನೈತಿಕ ವಿಷಯಗಳಲ್ಲಿ ಅಂಜುತ್ತಿದ್ದನು. ಅವಳ ಕಿವಿಯ ಮೇಲೆ ಹಾಕದೆ ಅರುಣಕುಮಾರಿಯನ್ನು ವರಿಸಲೊಪ್ಪಿದ್ದು ಒಂದು ಬಗೆಯ ನೈತಿಕ ಪ್ರಮಾದವಾಯಿತೆಂದು ಅವನಿಗೆ ಆಗ ತಿಳಿಯಿತು. ಅವನ ಮನಸ್ಸು ನಾನಾವಿಧದ ವಿಚಾರಗಳ ತಾಕಲಾಟದಲ್ಲಿ ಸಿಲುಕಿ ತತ್ತರಿಸತೊಡಗಿತು.

ಪತಿಯು ತನ್ನ ಮಾತಿಗೆ ಉತ್ತರವೀಯದೆ ಸುಮ್ಮನೆ ಕುಳಿತದ್ದರಿಂದ ಸರೋಜಸುಂದರಿಯ ಮನಸ್ಸು ಮತ್ತಿಷ್ಟು ಸಂಶಯಗ್ರಸ್ತವಾಯಿತು. ಅವಳು ಆ ವಿಷಯವನ್ನು ಅಷ್ಟಕ್ಕೆ ನಿಲ್ಲಿಸಿ ಶಾಂತಸ್ವರದಿಂದ—"ನಾಥರೆ, ನೀವು ಎಂದು ದಂಡಯಾತ್ರೆಗೆ ತೆರಳುವಿರಿ?"

"ನಾಳೆಗೇ!" ಎಂದು ಉದಯಸಿಂಗನು ಗಾಂಭೀರ್ಯದಿಂದ ನುಡಿದು—"ಸ್ತ್ರೀ ಪರಿವಾರವನ್ನು ಕುಮುಳಮೇರಕ್ಕೆ ಕಳುಹಿಸಿ ಚಿತೋಡಕ್ಕೆ ತೆರಳುವೆನು."

"ನಾನೂ ಕುಮುಳಮೇರಕ್ಕೆ ಹೋಗಬೇಕೇನು?"

"ಹೌದು."

"ತಮ್ಮ ಇಚ್ಛೆಗೆ ಹೊರತಿಲ್ಲ." ಎಂದು ಸರೋಜಸುಂದರಿಯು ನುಡಿದು, ಮಂದಹಾಸದಿಂದ—"ನನ್ನ ಕಟುಭಾಷಣಗಳು ನಿಮಗೆ ಒಳ್ಳೆಯ ಕಹಿಯಾಗಿಯೆ ಪರಿಣಮಿಸಿರಬಹುದು."

"ಪ್ರಿಯೆ, ಸಹಧರ್ಮಿಣಿ ಯೆನಿಸಿಕೊಳ್ಳುವವಳು ಪತಿಗೆ ಮಾರ್ಗದರ್ಶಕಳಾಗಿರಲಿಕ್ಕೆಬೇಕು" ಎಂದು ಉದಯಸಿಂಗನು ಸರೋಜಳ ಸ್ಕಂಧ ಪ್ರದೇಶದ ಮೇಲೆ ಕೈ ಹಾಕಿ—"ನಿನ್ನಂತಹ ರಾಜಕಾರಣತಜ್ಞಳೂ, ಕರ್ತವ್ಯತತ್ಪರಳೂ, ಪತಿನಿಷ್ಠಳೂ ಪ್ರಸಂಗದಲ್ಲಿ ಯೋಗ್ಯವಾದ ಅಭಿಪ್ರಾಯವನ್ನು ವ್ಯಕ್ತಪಡಿಸದಿದ್ದರೆ ಅದೊಂದು ದೊಡ್ಡ ಪ್ರಮಾದವೇ ಆಗುವದು."

"ವರ್ಣನಾತೀತವಾದ ವರ್ಣನೆಯಿದು!" ನಗುತ್ತಲೆ ಸರೋಜಸುಂದರಿಯು ನುಡಿದಳು. ಅನಂತರದಲ್ಲಿ ಅವರು ಪತಿಯ ಕೊರಳೊಳಗಿನ ರತ್ನಹಾರವು ಇಲ್ಲದಂತಾದದ್ದನ್ನು ನೋಡಿ ವಿಸ್ಮಯದಿಂದ—"ನಾಥರೆ, ಕೊರಳಲ್ಲಿ ರತ್ನಹಾರವು ಕಾಣುವದಿಲ್ಲವಲ್ಲ?"

ಉದಯಸಿಂಗನು ಬೆಚ್ಚಿಬಿದ್ದನು. ಅವನು ತನ್ನ ಉರಪ್ರದೇಶವನ್ನು ನೋಡಿಕೊಂಡು ಅರಿಯದವನಂತೆ—"ಸರೋಜ! ನನಗೆ ತಿಳಿಯದಹಾಗೆ ರತ್ನಹಾರವನ್ನು ಯಾರೋ ಸೆಳೆದುಕೊಂಡಿರುವರು! ಹಗಲುಹಾಡು ಈ ಬಗೆಯ ಸುಲಿಗೆ ಮಾಡಿದ ಸುಲಿಗೆಗಾರರು ನಿಜವಾಗಿ ಚಾಣಾಕ್ಷರಿರಬಹುದು."

"ಅವರು ಚಾಣಾಕ್ಷರೂ ಇರಬಹುದು; ಅತುಲನೀಯರೂ ಇರಬಹುದು. ಹಾಗಿಲ್ಲದಿದ್ದರೆ ರತ್ನಹಾರವನ್ನು ಸೆಳೆದುಕೊಳ್ಳುವದು ಅವರಿಂದಾಗುತ್ತಿದ್ದಿಲ್ಲ. ರತ್ನ ಹಾರದೊಡನೆ ನನ್ನ ಹೃದಯರತ್ನವನ್ನೂ ಸೆಳೆದೊಯ್ಯುವ ಸಾಹಸವು ಆ ಸುಲಿಗೆ ಗಾರರಿಂದ ನಡೆಯಿಸಲ್ಪಟ್ಟಿರುವದೋ ಏನೋ!"

"ಪ್ರಿಯೆ!" ಉದಯಸಿಂಗನು ಸರೋಜಸುಂದರಿಯ ಮನದೊಳಗೆ ಹುಟ್ಟಿದ ಸಂದೇಹವನ್ನು ಗುರುತಿಸಿ—"ನೀನು ಇಲ್ಲದ ಆಕ್ಷೇಪಣೆ ತರ್ಕೈಸಬೇಡ."

ಉದಯಸಿಂಗನು ಹೀಗೆ ನುಡಿಯುವಷ್ಟರಲ್ಲಿ ಲಾವಣ್ಯಾವತಿಯು ಅಲ್ಲಿಗೆ ಬಂದು- "ಮಹಾರಾಣಾಜಿಯವರೆ, ಚಿತೋಡದ ಮಹಾಮಂತ್ರಿಗಳು ದೂತನನ್ನು ಕಳುಹಿಸಿರುವರು."

ಉದಯಸಿಂಗನು ಚಿತೋಡದ ದೂತನನ್ನು ಕಳುಹಿಸುವದಕ್ಕಾಗಿ ಲಾವಣ್ಯಾವತಿಗೆ ಆಜ್ಞೆ ಮಾಡಿದನು. ಮುಂದೆ ಸ್ವಲ್ಪ ವೇಳೆಯಲ್ಲಿಯೆ ಆ ದೂತನು ಅಲ್ಲಿಗೆ ಬಂದು ರಾಣಾನಿಗೆ ಮೂರು ಸಾರೆ ಅಭಿವಂದಿಸಿ, ಒಂದು ಪತ್ರವನ್ನು ಅವನ ಕೈಯಲ್ಲಿ ಕೊಟ್ಟನು. ರಾಣಾನು ಒಳ್ಳೆಯ ಆತುರತೆಯಿಂದ ಪತ್ರವನ್ನೋದಿದನು. ಚಿತೋಡದ ಸೈನ್ಯದ ವಾತಾವರಣವು ತಮಗೆ ಪೂರ್ಣವಾಗಿ ಅನುಕೂಲವಿರುವದರಿಂದ ವಿಲಂಬ ಮಾಡದೆ ದಂಡೆತ್ತಿ ಬರಬೇಕೆಂದು ಮಹಾಮಂತ್ರಿಯು ಪತ್ರದಲ್ಲಿ ಬರೆದಿದ್ದನು ಪತ್ರದ ಸಂಗತಿಯನ್ನು ನೋಡಿ ಉದಯಸಿಂಗನಿಗೂ ಸರೋಜಸುಂದರಿಗೂ ಪರಮಾನಂದವಾಯಿತು. ಉದಯಸಿಂಗನು ಆ ಪತ್ರಕ್ಕೆ ಉತ್ತರ ಬರೆಯಿಸಿ ದೂತನ ಕೈಯಲ್ಲಿ ಕೊಟ್ಟು—"ನಾಳೆ ಪ್ರಾತಃಕಾಲದಲ್ಲಿಯೆ ನಾನು ಇಲ್ಲಿಂದ ಹೊರಡುವೆನು. ಯಾವ ವಿಧದ ಯೋಚನೆ ಮಾಡುವ ಕಾರಣವಿಲ್ಲೆಂದು ಮಹಾಮಂತ್ರಿಗಳಿಗೆ ತಿಳಿಸು."

ದೂತನು ಉದಯಸಿಂಗನಿಗೆ ಮತ್ತೊಮ್ಮೆ ನಮಸ್ಕರಿಸಿ ಅಲ್ಲಿಂದ ಹೊರಟನು. ಉದಯಸಿಂಗನಾದರೂ ಪ್ರಯಾಣದ ಸಿದ್ಧತೆ ಮಾಡಿಕೊಳ್ಳುವದಕ್ಕಾಗಿ ಸೌಧಾಗ್ರದಿಂದ ಕೆಳಗಿಳಿದನು. ಅನಂತರದಲ್ಲಿ ಲಾವಣ್ಯಾವತಿಯು ಅಲ್ಲಿಗೆ ಬಂದು—"ಮಹಾದೇವಿ, ದೂತನು ಯಾವ ವಾರ್ತೆಯನ್ನು ತಂದಿದ್ದನು?"

ಚಿತೋಡದ ಮೇಲೆ ದಂಡೆತ್ತಿ ಬರಬೇಕೆಂದು ಮಹಾಮಂತ್ರಿಗಳು ಪತ್ರ ಬರೆದಿರುವರು. ನಾಳೆಗೆ ಇಲ್ಲಿಂದ ಹೊರಡಬೇಕೆಂದು ರಾಣಾಜಿಯವರು ಹೇಳಿ, ಪ್ರಯಾಣದ ಸಿದ್ಧತೆಗಾಗಿ ಹೋದರು." ಎಂದು ಸರೋಜಸುಂದರಿಯು ನುಡಿದು,— "ಲಾವಣ್ಯಾ! ಮಹಾರಾಣಾಜಿಯವರ ಕೊರಳೊಳಗಿನ ರತ್ನಹಾರವು ಇಲ್ಲದಂತಾಗಿದೆ. ತಮಗೆ ತಿಳಿಯದಂತೆ ಯಾರೋ ಸೆಳೆದುಕೊಂಡಿರುವರೆಂದು ಅವರು ಹೇಳಿದರು. ರತ್ನಹಾರವನ್ನು ಸೆಳೆದುಕೊಳ್ಳುವಂತಹ ತುಡುಗರು ಎಂತಹರಿರುವರೆಂಬದರ ಕಲ್ಪನೆಯಾಗುವದೇನು?"

"ಮಹಾದೇವಿ, ಕಲ್ಪನೆಯಾಗದೇನು ಮಾಡೀತು? ನನ್ನ ಅಭಿಪ್ರಾಯವು ನಿಜ

ವಾದದ್ದಿರುವದೆಂದು ಈಗಾದರೂ ಮನವರಿಕೆಯೂಯಿತೆ?"

"ಒಟ್ಟಿನ ಮೇಲೆ ರತ್ನಹಾರ ಸೆಳೆದವರು ನನ್ನ ಹೃದಯರತ್ನವನ್ನು ಸೆಳೆಯುವ ಸಾಹಸದಲ್ಲಿರುವರೆಂದ ಹಾಗಾಯಿತು."

"ದೇವಿ, ಈ ಮಾತಿನಲ್ಲಿ ಸಂಶಯವಿಲ್ಲ. ಒಂದು ವೇಳೆ ಇಷ್ಟರಲ್ಲಿ ಸೆಳೆದಿದ್ದರೂ ಸೆಳೆದಿರಬಹುದು. ಹಗಲು ಸುಲಿಗೆಯ ವೈಚಿತ್ರ್ಯವು ಹೇಗಿರುವದು ನೋಡಿರಿ!"

ಸರೋಜಸುಂದರಿಯು ಯೋಚನೆಗೊಳಗಾದಳು. ಆಗ ಲಾವಣ್ಯವತಿಯು- "ಮಹಾದೇವಿ, ಇಷ್ಟೇಕೆ ಯೋಚಿಸುವಿರಿ? ಮಹಾರಾಣಾಜಿಯವರು ಕಳೆದ ರತ್ನ ಹಾರವು ನಿಮ್ಮದೇನು?"

"ಹೌದು."

"ಅಂತಹ ಎಷ್ಟಾದರೂ ರತ್ನ ಹಾರಗಳನ್ನು ಅವರು ಕೊಡುವರು. ಚಿಂತಿಸ ಬೇಡಿರಿ."

"ನಾನು ರತ್ನಹಾರಕ್ಕಾಗಿ ಚಿಂತಿಸುವದಿಲ್ಲ. ರತ್ನಹಾರದ ತುಡುಗರು ಮಹಾ ರಾಣಾಜಿಯವರ ಪ್ರೇಮವನ್ನಾದರೂ ಸೆಳೆದುಕೊಳ್ಳದಿರಲಾರರೆಂದು ಯೋಚನೆ ಯಾಗಿದೆ."

"ಇಷ್ಟರಲ್ಲಿಯೆ ಸೆಳೆದಿದ್ದರೆ?" ನಗುತ್ತ ಲಾವಣ್ಯವತಿಯು ಕೇಳಿದಳು.

"ಉಪಾಯವಿಲ್ಲ!" ಸರೋಜಸುಂದರಿಯು ನಿಟ್ಟುಸಿರುಬಿಟ್ಟಳು.

---

## ಪಟ್ಟಾಭಿಷೇಕ.

ಮಹಾರಾಣಾ ಉದಯಸಿಂಗನು ಪ್ರಯಾಗದಿಂದ ಹೊರಟು ಕುಮಳಮೇರಕ್ಕೆ ಬಂದನು. ಅಲ್ಲಿ ಅವನು ಸ್ತ್ರೀಪರಿವಾರವನ್ನು ಬಿಟ್ಟು, ಸಾಕಷ್ಟು ಸೈನ್ಯದೊಡನೆ ಚಿತೋಡವನ್ನು ಮುತ್ತುವದಕ್ಕಾಗಿ ತೆರಳಿದನು. ಅವನು ತನ್ನ ಸೈನ್ಯದೊಡನೆ ಪಾಂಡೌಲಿ ಎಂಬಲ್ಲಿ ಬೀಡು ಬಿಟ್ಟನು. ಸಾಹಿದಾಸ ಚೋಂಡಾ, ಸೋನೀಗಡದ ಠಾಕೂರನಾದ ಆಖಿರಾಜ, ಇಸರೀದಾಸ ರಾಠೋಡ, ಕುಮಳಮೇರದ ಅಸಾಸಾಹ ಮೊದಲಾದ ಸರದಾರರೂ ಮಂಡಲೇಶ್ವರರೂ ಅವನನ್ನು ಕೂಡಿದರು. ಕೃಷ್ಣಲಾ ಲನು ಗುಪ್ತಪುರಿಯಲ್ಲಿಯ ತನ್ನ ಸೈನ್ಯವನ್ನು ತೆಗೆದುಕೊಂಡು ಬಂದನು.

ಎಲ್ಲ ಸರದಾರರೂ ಸೇನಾಪತಿಗಳೂ ಕೂಡಿದ ಕೂಡಲೆ, ಚಿತೋಡದ ಮೇಲೆ ಯಾವಯಾವ ರೀತಿಯಿಂದ ದಾಳಿಮಾಡತಕ್ಕದು, ಸ್ವಾಮಿದ್ರೋಹಿಗಳಾದ ಸೋಳಂಖಿ ಮಾಲೋಜಿಯರ ಹಾಗು ಬನಬೀರನ ಪಾರಿಪತ್ಯವನ್ನು ಯಾವಯಾವ ಬಗೆಯಿಂದ ಮಾಡತಕ್ಕದ್ದು ಮೊದಲಾದವುಗಳ ವಿಷಯವಾಗಿ ವಾದವಿವಾದವು ನಡೆಯಿತು. ಮಾಹೋಲಿಯ ಸೋಳಂಖಿ ಹಾಗು ಮಾಲೋಜಿಯರ ಸಮಾಚಾರವನ್ನು ತೆಗೆದು

ಕೊಳ್ಳತಕ್ಕದ್ದೆಂದೂ, ಅವರ ಪಾರಿಪತ್ಯವಾದ ಮೇಲೆ ಬನಬೀರನು ತಾನಾಗಿ ಶರಣು ಬರುವನೆಂದೂ ಬಹುಜನರು ಅಭಿಪ್ರಾಯ ಕೊಟ್ಟರು. ಚಿತೋಡದುರ್ಗದ ಮೇಲೆ ಅಮೋಘವಾದ ಸೈನ್ಯದ ದಾಳಿ ಬಂದದ್ದು ನೋಡಿ ಬನಬೀರನೂ ಅವನ ಅನುಯಾಯಿಗಳೂ ಎದೆಯೊಡೆದಿರಬಹುದೆಂದೂ, ಮೊದಲು ಪ್ರತಿನಿಧಿಯನ್ನು ಕಳುಹಿಸಿ ಅವರ ಅಭಿಪ್ರಾಯ ತಿಳಿದುಕೊಳ್ಳಬೇಕೆಂದೂ ಚೋಂಡಾಸಾಹಿದಾಸನು ಹೇಳಿದನು. ಅವನ ಅಭಿಪ್ರಾಯವು ಉದಯಸಿಂಗನಿಗೆ ಸರಿದೋರಿತು. ಕೂಡಲೆ ಕರಣಿಕನು ಉದಯಸಿಂಗನ ಹೇಳಿಕೆಯ ಮೇರೆಗೆ ಪತ್ರ ಬರೆದು ಸಾಹಿದಾಸನ ಕೈಯಲ್ಲಿ ಕೊಟ್ಟನು. ಅದರೊಳಗಿನ ಸಂಗತಿಯು ಎಲ್ಲರಿಗೂ ತಿಳಿಯಬೇಕೆಂಬ ಉದ್ದೇಶದಿಂದ ಸಾಹಿದಾಸನು ಪತ್ರವನ್ನೋದತೊಡಗಿದನು.

"ಚಿತೋಡದ ಪ್ರಜಾನಿಯುಕ್ತ ಪ್ರತಿನಿಧಿಗಳಾದ ಬನಬೀರಸಿಂಗರಿಗೆ ಮಹಾ ಉದಯಸಿಂಗ ಚಿತೋಡ ಬೀಡುಪಾಂಡೌಲಿ ಇವರ ಆಜ್ಞೆಯೇನಂದರೆ;—

ದೈವದ ಪ್ರತಿಕೂಲತೆಯ ಮೂಲಕ ಇಷ್ಟು ದಿನಗಳ ವರೆಗೆ ನಾವು ಚಿತೋಡದ ರಾಜಸಿಂಹಾಸನಕ್ಕೆ ಹೊರತಾಗಿದ್ದೆವು. ಮೇವಾಡದ ಸ್ವಾಮಿನಿಷ್ಠ ಪ್ರಜಾವರ್ಗವು ಪಟ್ಟಬಾಧ್ಯರಾದ ನಮ್ಮ ವಶದಲ್ಲಿ ಸಿಂಹಾಸನವನ್ನು ಕೊಡಬೇಕೆಂದು ಇಚ್ಛಿಸುತ್ತಿರುವದು. ನಾವು ಪ್ರಜಾಮತದಂತೆ ನಿಮ್ಮ ಮೇಲೆ ದಂಡೆತ್ತಿ ಬಂದಿರುವೆವು. ನಿಮ್ಮಲ್ಲಿಯ ನಿಸ್ಪೃಹವೃತ್ತಿ, ಸತ್ಪಕ್ಷಪಾತ, ಸ್ವಾಮಿನಿಷ್ಠೆ ಮೊದಲಾದ ಗುಣಗಳನ್ನು ಇನ್ನೊಮ್ಮೆ ಪರೀಕ್ಷಿಸಿ, ಮುಂದಿನ ಕಾರ್ಯ ಕೈಕೊಳ್ಳಬೇಕೆಂಬ ಉದ್ದೇಶದಿಂದ ನಿಮ್ಮ ಕಡೆಗೆ ಪ್ರತಿನಿಧಿಯನ್ನು ಕಳುಹಿಸಿರುವೆವು.

ಜಗತ್ತಿನಲ್ಲಿ ಸತ್ಯಕ್ಕೆ ಜಯವುಂಟು. ಅಸತ್ಯವು ಮಾರಕವಲ್ಲದೆ, ಕಾಲತ್ರಯದಲ್ಲಿಯೂ ತಾರಕವಾಗಲಾರದು. ರಾಜ್ಯವೈಭವವು ಯಾರಿಗೂ ಬೇಡವೆನಿಸುವದಿಲ್ಲ. ಅನೀತಿಯಿಂದ ಪರಕೀಯರ ಸ್ವತ್ತನ್ನು ತೆಗೆದುಕೊಳ್ಳಹೋದರೆ ಅದು ಎಂದೂ ದೊರೆಯಲಾರದು; ದೊರೆತರೂ ಸ್ಥಿರವಾಗಿ ಉಳಿಯುವದಿಲ್ಲ. ಪರಕೀಯರ ಭಾಧ್ಯತೆಯನ್ನು ನಷ್ಟಪಡಿಸಿ ಸ್ವಾರ್ಥಸಾಧಿಸಲಿಕ್ಕೆ ಸಾಹಸ ಮಾಡುವದು ತೀರ ಅನುಚಿತವು.

ಪ್ರಜಾಮತದಂತೆ ನಡೆದು, ಪ್ರಜಾಜನರಿಗೆ ಹಿತವಾಗುವಂತೆ ಯತ್ನಿಸುವದು ಅರಸನ ಧರ್ಮವಾಗಿರುವದು. ಪ್ರಜಾಕ್ಷೋಭೆಯಿಂದ ಅರಸನ ಅರಸೊತ್ತಿಗೆಯು ನಷ್ಟವಾಗುವದು. ಪಟ್ಟಬಾಧ್ಯನಾದ ಅರಸನ ಕೊಲೆಯಾಗಿ ಅವನ ಸಿಂಹಾಸನವು ನಿಮ್ಮ ಸ್ವಾಧೀನಕ್ಕೆ ಬರಬೇಕಾದರೆ ಪ್ರಜಾಕ್ಷೋಭೆಯೇ ಕಾರಣವಾಯಿತೆಂಬದು ಎಲ್ಲರ ನಿದರ್ಶನಕ್ಕೆ ಬಂದಮಾತು. ನಿಮ್ಮ ಆಳಿಕೆಯು ರಾಷ್ಟ್ರದಲ್ಲಿ ಅಸಂತೋಷವನ್ನು ಉತ್ಪನ್ನಮಾಡಿದೆ. ಅದರಲ್ಲಿ ನೀವು ಪಟ್ಟಬಾಧ್ಯರಲ್ಲ. ರಾಷ್ಟ್ರಕ್ಕೂ ಅರಸೊತ್ತಿಗೆಗೂ ನೀವು ಯಾವ ಬಗೆಯ ಸಂಬಂಧಿಕರಲ್ಲ. ಹೀಗಿದ್ದಮೇಲೆ ಚಿತೋಡದ ಸಿಂಹಾಸನವು ನಿಮ್ಮ ವಶದಲ್ಲಿ ಹೇಗೆ ಸ್ಥಿರವಾಗಿ ಉಳಿಯಬೇಕು? ಉಳಿಯುವದೆಂದು

ನೀವು ಏಕೆ ಆಶೆಮಾಡಬೇಕು?

ಚಿತೋಡದ ರಾಜಸಿಂಹಾಸನಕ್ಕೆ ನಿಮ್ಮ ಸಂಬಂಧವೇನು? ನೀವು ಯಾವ ವಿಧದ ಬಾಧ್ಯತೆಯಿಂದ ರಾಜ್ಯಸೂತ್ರಗಳನ್ನು ಕೈಯಲ್ಲಿ ತೆಗೆದುಕೊಂಡಿರುವಿರಿ? ಕಡೆ ತನಕ ರಾಜ್ಯಸೂತ್ರಗಳನ್ನು ಕೈಯಲ್ಲಿಟ್ಟುಕೊಳ್ಳಬೇಕೆಂಬ ದುರಾಕಾಂಕ್ಷೆಯು ನಿಮ್ಮಲ್ಲಿ ಏಕೆ ಹುಟ್ಟಬೇಕು?

ಕ್ರೂರ ಕರ್ಮಿಗಳಾದ ನೀವು ವಿಕ್ರಮಜಿತುಗಳ ಕೊಲೆ ಮಾಡಿ, ನಮ್ಮನ್ನೂ ಅದೇ ಪಥಕ್ಕೆ ಹಚ್ಚಬೇಕೆಂಬ ಸಾಹಸದಲ್ಲಿದ್ದಿರಿ; ಆದರೆ ಒಬ್ಬ ಸ್ವಾಮಿನಿಷ್ಠ ದಾಸಿಯ ಅತುಲನೀಯ ಸ್ವಾರ್ಥತ್ಯಾಗದಿಂದಲೂ, ಪರಮಾತ್ಮನ ಅನುಗ್ರಹದಿಂದಲೂ ನಾವು ಬದುಕಿದೆವು. ನಮ್ಮ ಜನ್ಮಸಿದ್ಧವಾದ ಬಾಧ್ಯತೆಯನ್ನು ಯಾವ ಬಗೆಯ ಎಡರು ತೊಡರುಗಳಿಲ್ಲದೆ ನಮಗೆ ಬಿಟ್ಟು ಕೊಡುವದು ನಿಮ್ಮ ಶೀಲಕ್ಕೆ ಶೋಭಿಸುವದು.

ಕೆಲವು ರಾಜದ್ರೋಹಿಗಳಾದ ಅನುಯಾಯಿಗಳ ದುರ್ಬೋಧಕ್ಕೆ ಮನವೆಳಸಿ ನೀವು ನಮ್ಮೊಡನೆ ಸಂಗ್ರಾಮಕ್ಕೆ ಅಣಿಯಾಗಿರುವಿರೆಂಬದೇನೋ ನಿಜವು. ಪರಿಣಾಮವು ಮಾತ್ರ ನಿಮ್ಮ ಇಚ್ಛೆಯಂತೆ ಅನುಕೂಲ ಪರಿಸ್ಥಿತಿಯಲ್ಲಿ ಒದಗುವದಿಲ್ಲ.

ಇಷ್ಟಾಗಿಯೂ ದೈವಪರೀಕ್ಷೆ ಸತ್ವಪರೀಕ್ಷೆ ಮಾಡಬೇಕಾಗಿದ್ದರೆ, ಅದಕ್ಕೆ ನಮ್ಮ ಸಿದ್ಧತೆಯಿರುವದು.

ಇದಕ್ಕಿಂತ ಹೆಚ್ಚಾಗಿ ಇನ್ನೇನು ಬರೆಯಬೇಕು?

ನಿಮ್ಮ ಹಿತಚಿಂತಕ,

ಮಹಾರಾಣಾ ಉದಯಸಿಂಗ, ಚಿತೋಡ.

ಕೃಷ್ಣಲಾಲನೊಡನೆ ಪತ್ರವು ಚಿತೋಡದ ಓಲಗಕ್ಕೆ ಕಳುಹಿಸಲ್ಪಟ್ಟಿತು. ಬನಬೀರನು ಪತ್ರವನ್ನೋದಿ ಉರಿದೆದ್ದನು. ಮಾಲೋಜಿ ಸೋಳಂಖಿಯರಂತು ಸಿಟ್ಟಿನಿಂದ ಹುಚ್ಚರಾದರು, ಕೃಷ್ಣಲಾಲನ ಶಿಷ್ಟಾಯಿಯು ಫಲದ್ರೂಪವಾಗಲಿಲ್ಲ. ಅವನು ಬಂದದಾರಿಗೆ ಸುಂಕವಿಲ್ಲವೆಂಬಂತೆ ತಿರುಗಿ ಹೋದನು. ಮಹಾಮಂತ್ರಿಯು ಬನಬೀರನಿಗೆ ಬಹುಪರಿಯಾಗಿ ಉಪದೇಶ ಮಾಡಿ ಭಗ್ನಮನೋರಥನಾದನು. ಕಡೆಗೆ ಯುದ್ಧದ ಕೊಂಬುಗಳು ಊದಲ್ಪಟ್ಟವು. ಉದಯಸಿಂಗನ ಸೇನಾಸಾಗರವು ಚಿತೋಡದುರ್ಗವನ್ನು ಸಂದುಬಿಡದಂತೆ ಮುತ್ತಿತು. ಎರಡೂ ಪಕ್ಷಗಳ ನಡುವೆ ಘನವಾದ ಕಾಳಗವು ಪ್ರಾರಂಭವಾಯಿತು. ಹೆಣಗಳು ರಾಶಿರಾಶಿಯಾಗಿ ಬೀಳತೊಡಗಿದವು. ನೆತ್ತರವು ಕಾಲುವೆಗಟ್ಟಿ ಹರಿಯಹತ್ತಿತು.

ಬನಬೀರನಿಗೆ ಸ್ವಪರಾಕ್ರಮದ ಗರ್ವವು ಬಹಳವಿತ್ತು. ತನ್ನ ಸರದಾರರಾದ ಮಾಲೋಜಿ ಸೋಳಂಖಿಯರ ಸಹಾಯದಿಂದ ಶತ್ರುಸೈನ್ಯವನ್ನು ಅಲ್ಪಾವಕಾಶದಲ್ಲಿ ಪರಾಭವಗೊಳಿಸುವೆನೆಂದು ಅವನು ತಿಳಿದಿದ್ದನು. ಪರಿಣಾಮಾಂತ್ಯದಲ್ಲಿ ಅವನ ಕಲ್ಪನೆಯು ಸುಳ್ಳಾಯಿತು. ಚಿತೋಡಸಿಂಹಾಸನಕ್ಕಾಗಿ ದಂಡೆತ್ತಿ ಬಂದ ಜನರು ಸಾಮಾನ್ಯರಿರುವದಿಲ್ಲವೆಂಬ ಕಲ್ಪನೆಯು ಅವನಲ್ಲಿ ಹುಟ್ಟಿತು. ವಿಜಯ ಲಕ್ಷ್ಮಿ

ಯನ್ನು ಸ್ವಾಧೀನಪಡಿಸಿಕೊಳ್ಳುವೆನೆಂಬ ದೃಢನಿಶ್ಚಯವು ಬರಬರುತ್ತ ಶಿಥಿಲವಾಗ ತೊಡಗಿತು. ಕೊನೆಗೆ ದೈವದ ಮೇಲೆ ಹೊರೆ ಹಾಕಿ, ತುಮುಲವಾದ ಯುದ್ಧವನ್ನು ಪ್ರಾರಂಭಿಸಿದನು.

ಸೋಳಂಖಿ ಮಾಲೋಜಿಯುಳು ಬನಬೀರನಷ್ಟು ಅದೂರದರ್ಶಿಗಳಿಲ್ಲದಿದ್ದರೂ ಪರಮಾವಧಿ ಹೇಪಕ್ಕೆ ಬಿದ್ದಿದ್ದರು. ಹೇವದಿಂದ ದುಷ್ಪರಿಣಾಮವಾಗುವದೆಂಬದನ್ನು ಅವರು ತಿಳಿದಿದ್ದರೂ ಅಭಿಮಾನಕ್ಕಾಗಿ ಕಾದಬೇಕಾಗಿತ್ತು. ಅವರು ಜೀವದ ಹಂಗು ದೊರೆದು ಕಾಳಗವನ್ನು ಪ್ರಾರಂಭಿಸಿದರು. ಬರಬರುತ್ತ ಕೋಟೆಯೊಳಗಿನ ಸೈನ್ಯವು ಕರಗಹತ್ತಿತು; ಉದಯಸಿಂಗನ ಸೈನ್ಯವು ದಿನದಿನಕ್ಕೆ ಬಲಿಯತೊಡಗಿತು. ರಾಜ ನಿಷ್ಠರೂ, ಚಿತೋಡದ ಸಿಂಹಾಸನವಲ್ಲಿ ಪೂಜ್ಯಬುದ್ಧಿಯುಳ್ಳವರೂ, ಸತ್ಪಕ್ಷಪಾತಿ ಗಳೂ ಆದ ಸರದಾರರು ಉದಯಸಿಂಗನನ್ನು ಕೂಡಿಕೊಳ್ಳತೊಡಗಿದರು. ಹೀಗಾಗಿ ಬನಬೀರನ ಸೈನ್ಯವು ದಿನದಿನಕ್ಕೆ ಹತಾಶವಾಗಹತ್ತಿತು. ಮಾಲೋಜಿ ಮೊದಲಾದ ಅವನ ಪಕ್ಷಪಾತಿಗಳುಸಮರಭೂಮಿಯಿಂದ ಕಾಲ್ತೆಗೆಯುವ ಸಾಹಸ ಮಾಡಿದರು. ಚಿತೋಡದೊಳಗಿನ ಒಂದು ನೊಣವು ಕೂಡ ಮುತ್ತಿಗೆಯೊಳಗಿಂದ ಪಾರಾಗದಂತಿರು ವಾಗ ಅವರ ಸಾಹಸಕ್ಕೆ ಫಲವು ಹೇಗೆ ಲಭಿಸಬೇಕು?

ಝೋಂಡಾ ಸಾಹಿದಾಸನೂ ಕೃಷ್ಣಲಾಲನೂ ಉಳಿದ ಸರದಾರ ಸೇನಾಪತಿ ಗಳೂ ಒಳ್ಳೆಯ ಶೌರ್ಯದಿಂದ ಕಾದಿ ಶತ್ರುಸೈನ್ಯವನ್ನು ಹಣ್ಣುಮಾಡಿದರು. ಅವರ ಪರಾಕ್ರಮಕ್ಕೆ ಬನಬೀರನ ಹಾಗು ಮಾಲೋಜಿ ಸೋಳಂಖಿಯರ ಸೈನ್ಯವು ಬಹಳ ವಾಗಿ ನಾಶವಾಯಿತು. ಕಡುತರವಾದ ಕದನದಲ್ಲಿ ಸೋಳಂಖಿಯೂ ಮಾಲೋ ಜಿಯೂ ಮೃತರಾದರು. ಕೂಡಲೆ ಬನಬೀರನು ಧೈರ್ಯಗುಂದಿದನು. ಕೃಷ್ಣಲಾ ಲನು ಭೀಮಪರಾಕ್ರಮದಿಂದ ಕಾದಿ ಅವನನ್ನು ಸೆರೆಹಿಡಿದನು. ಕೂಡಲೆ ಯುದ್ಧದ ಪರಿಸಮಾಪ್ತಿಯಾಯಿತು. ಉದಯಸಿಂಗನ ಸೈನ್ಯವು ವಿಜಯಾನಂದದಿಂದ ಕೋಟೆ ಯನ್ನು ಪ್ರವೇಶಿಸಿತು. ಸತ್ಪಕ್ಷಕ್ಕೆ ವಿಜಯವಾದ್ದರಿಂದ ಚಿತೋಡದ ಪ್ರಜಾಜನರಿಗೆ ಮನದಾನಂದವಾಯಿತು. ಅವರು ಉದಯಸಿಂಗನನ್ನು ಸನ್ಮಾನಪೂರ್ವಕವಾಗಿ ಎದುಗೊಂಡು ಕರೆದೊಯ್ದರು.

ಬನಬೀರನು ಉದಯಸಿಂಗನ ಸೆರೆಯಲ್ಲಿ ಸಿಲುಕಿದ್ದನು. ಅವನಿಗೆ ಯಾವ ವಿಧದ ಶಾಸನವನ್ನು ವಿಧಿಸಬೇಕೆಂದು ಅವನು ತನ್ನ ಸರದಾರರನ್ನು ವಿಚಾರಿಸಿದನು. ಅಪಜಯ ಹೊಂದಿ ಕೈಯಲ್ಲಿ ಸಿಲುಕಿದ ವೈರಿಯನ್ನು ದಂಡಿಸದೆ ಬಿಟ್ಟುಕೊಡಬೇ ಕೆಂದು ಬಹುಜನರು ಅವನಿಗೆ ಅಭಿಪ್ರಾಯವಿತ್ತರು. ವಿಜಯಶ್ರೀ ಲಾಭದ ಆನಂದ ದಾಯಕ ಪ್ರಸಂಗದಲ್ಲಿ ಚಿತೋಡದ ಪದಭ್ರಷ್ಟ ರಾಜಪ್ರತಿನಿಧಿಯನ್ನು ದಂಡಿಸು ವದೂ, ಅವನ ಅಪಮಾನ ಮಾಡುವದೂ, ರಜಪುತರ ಶೀಲಕ್ಕೆ ಶೋಭಿಸುವಂತಹ ಸಂಗತಿಯಲ್ಲವೆಂಬದು ಉದಯಸಿಂಗನಿಗೆ ತಿಳಿಯಿತು. ಆದ್ದರಿಂದ ಅವನು ಬನಬೀರ ನನ್ನು ಬಂಧಮುಕ್ತ ಮಾಡಿದನು. ಉದಯಸಿಂಗನ ಈ ಘನವಂತಿಕೆಯನ್ನು ನೋಡಿ

ಬನಬೀರನಿಗೆ ಪರಮಾನಂದವಾಯಿತು. ಅವನು ತನ್ನ ಪರಿವಾರದೊಡನೆ ಚಿತೋಡ ರಾಜಧಾನಿಯನ್ನು ಬಿಟ್ಟು, ದಕ್ಷಿಣಕ್ಕೆ ಪ್ರಯಾಣಮಾಡಿದನು.

ಚಿತೋಡವು ಕೈವಶವಾದ ಮೇಲೆ ಉದಯಸಿಂಗನು ಕುಮಳಮೇರದಿಂದ ತನ್ನ ಪರಿವಾರವನ್ನು ಕರೆಯಿಸಿದನು. ಅನಂತರದಲ್ಲಿ ಪಟ್ಟಾಭಿಷೇಕ ಸಮಾರಂಭವು ನಡೆಯಿತು. ಸಿಂಹಾಸನಾರೋಹಣ ಸಮಾರಂಭದಲ್ಲ ಸರದಾರ ಸೇನಾಪತಿಗಳಿಗೂ ಸೈನಿಕರಿಗೂ ರಾಜನಿಷ್ಠ ಸೇವಕರಿಗೂ ಪಾರಿತೋಷಕವು ಕೊಡಲ್ಪಟ್ಟಿತು. ಕೃಷ್ಣಲಾಲನು ಮಾತ್ರ ಯಾವ ಬಗೆಯ ಸಂಭಾವನೆಯನ್ನು ಸ್ವೀಕರಿಸಲಿಲ್ಲ. ಚಿತೋಡದ ಪವಿತ್ರ ಸಿಂಹಾಸನವು ಮಹಾರಾಣಾರ ವಂಶಜನಿಗೇ ದೊರೆತದ್ದರಿಂದ ಮೇವಾಡದ ಎಲ್ಲ ಪ್ರಜೆಗಳು ಸ್ವಾನಂದ ಸಾಮ್ರಾಜ್ಯದಲ್ಲಿ ಮುಳುಗಿದರು.

ಪಟ್ಟಾಭಿಷೇಕ ಸಮಾರಂಭವು ಮುಗಿದ ಮೇಲೆ ಎಲ್ಲ ಸರದಾರರೂ ಮಂತ್ರಿ ಸೇನಾಪತಿಗಳೂ ಮಂಡಲೇಶ್ವರರೂ ಸಭೆಯನ್ನು ಕೂಡಿಸಿ, ಮೇವಾಡದ ಗೌರವವು ಸ್ಥಿರವಾಗಿ ಉಳಿಯ ಎವಂತೆ ಜಾಗೃತಿಯಿಂದ ರಾಜ್ಯವಾಳಬೇಕೆಂದು ಉದಯಸಿಂಗನಿಗೆ ವಿನಂತಿ ಮಾಡಿಕೊಂಡರು. ರಾಜಧರ್ಮ ಪ್ರಜಾಧರ್ಮ ಮೊದಲಾದವುಗಳ ವಿಷಯವಾಗಿ ಸಾಹಿದಾಸ ಚೋಂಡಾನು ಸರ್ವೋತ್ಕೃಷ್ಟವಾದ ಭಾಷಣ ಮಾಡಿದನು. ರಾಜನ ಕರ್ತವ್ಯದ ವಿಷಯವಾಗಿ ಕೃಷ್ಣಲಾಲನು ನಾಲ್ಕು ಮಾತು ಹೇಳಿದನು. ಒಟ್ಟಿನ ಮೇಲೆ ಅಂದಿನ ಸಭೆಯು ಉದಯಸಿಂಗನ ಮನಸ್ಸಿನ ಮೇಲೆ ಸುಪರಿಣಾಮವನ್ನುಂಟುಮಾಡಿತು. ಪ್ರಜಾಜನರ ಹಿತಕ್ಕಾಗಿ ಅವಿಶ್ರಾಂತ ಶ್ರಮ ಮಾಡುವೆನೆಂದು ಅವನು ಎಲ್ಲರಿಗೂ ಆಶ್ವಾಸನೆಯಿತ್ತನು.

ಸಭಾ ವಿಸರ್ಜನೆಯಾದ ಮೇಲೆ, ಕೃಷ್ಣಲಾಲನು ಅರಮನೆಗೆ ಹೋಗಿ ಉದಯಸಿಂಗನಿಗೆ ಭೆಟ್ಟಿಯಾದನು. ಆಗ ಅವನು—"ಮಹಾರಾಣಾಜೀ, ನೀವು ನನ್ನ ಪುತ್ರಿಯಾದ ಅರುಣಕುಮಾರಿಯನ್ನು ಪ್ರೇಮಪೂರ್ವಕವಾಗಿ ಪರಿಗ್ರಹಿಸಲೊಪ್ಪಿರುವಿರಿ. ಅವಳು ಒಳ್ಳೆಯ ಕೋಮಲ ಹೃದಯದವಳು; ಸದ್ಗುಣಿಯು; ಸುವಿಚಾರಿಯು; ಸುಶೀಲೆಯು. ನಾನು ಅವಳನ್ನು ಹೂವಿನಂತೆ ರಕ್ಷಿಸಿರುವೆನು. ನೀವಾದರೂ ಅವಳಿಗೆ ದುಃಖವೀಯದೆ ರಕ್ಷಣೆ ಮಾಡುವಿರೆಂದು ಪೂರಾ ನಂಬಿರುವೆನು. ಅರುಣಳನ್ನು ಸಹಜಪ್ರೇಮದಿಂದ ಪಾಣಿಗ್ರಹಣ ಮಾಡಿದವರಾದ ನಿಮಗೆ ಹೆಚ್ಚಿಗೆ ಹೇಳಬೇಕೆನ್ನುವಂತಿಲ್ಲ. ನಾನು ಅವಳನ್ನು ಪ್ರಯಾಗದಲ್ಲಿರಿಸಿರುವೆನು. ಸಾಧ್ಯವಾದಷ್ಟು ಬೇಗನೆ ಅವಳನ್ನು ಕರೆಯಿಸಿಕೊಂಡು ವಿಧ್ಯುಕ್ತವಾಗಿ ಪಾಣಿಗ್ರಹಣ ಮಾಡಿರಿ. ನಾನು ಇನ್ನು ಮೇಲೆ ಚಿತೋಡದಲ್ಲಾಗಲಿ ಪ್ರಯಾಗದಲ್ಲಾಗಲಿ ಇರುವದಿಲ್ಲ ಸದ್ಯಕ್ಕೆ ಗುಪ್ತಪುರಿಯಲ್ಲಿರುವೆನು. ಮುಂದಿನ ಕಾರ್ಯಕ್ರಮವನ್ನು ಈಗಲೇ ಹೇಳಲಿಕ್ಕೆ ಬರುವಂತಿಲ್ಲ. ಪ್ರಸಂಗವಶದಿಂದ ನಿಮಗೆ ನನ್ನ ನೆರವು ಬೇಕಾದರೆ ತಿಳಿಸಬೇಕು. ನಿಮ್ಮ ಪತ್ರವು ಕೈಸೇರಿದ ಕೂಡಲೆ ಹೊರಟು ಬರುವೆನು."

ಕೃಷ್ಣಲಾಲನು ಹೀಗೆ ನುಡಿದ ಕೂಡಲೆ ಉದಯಸಿಂಗನು—"ಕೃಷ್ಣಲಾಲರೆ,

ನೀವು ಅರುಣಕುಮಾರಿಯ ವಿಷಯವಾಗಿ ನಿಶ್ಚಿಂತರಾಗಿರಿ. ನಾನು ಅವಳನ್ನು ಬೇಗನೆ ಕರೆಯಿಸಿ, ಧಾರ್ಮಿಕ ವಿಧಿಯಿಂದ ವರಿಸುವೆನು ನಾನು ಸ್ವಲ್ಪ ದಿನಗಳ ಸಹವಾಸದಿಂದ ಅವಳ ಗುಣಗಳನ್ನು ಅರಿತಿರುವೆನು. ನೀವು ಚಿತೋಡದಲ್ಲಿರ ಬೇಕೆಂದು ನನ್ನ ಇಚ್ಛೆಯಿತ್ತು. ಸದ್ಯಕ್ಕೆ ಗುಪ್ತಪುರಿಯಲ್ಲಿರಬೇಕೆಂದು ನಿಮ್ಮ ಮನಸ್ಸಿರುವದರಿಂದ ನಾನು ನಿರುಪಾಯನಾಗಬೇಕಾಗಿದೆ. ಸಂಗ್ರಾಮದಲ್ಲ ನೀವು ಬಹಳೇ ವಿಕ್ರಮತನವನ್ನು ತೋರಿಸಿದಿರಿ ನಾನು ನಿಮಗೆ ತುಂಬ ಋಣಿಯಾಗಿ ರುವೆನು. ಮತ್ತೆ ಅವಶ್ಯವೆನಿಸಿದಾಗ ನಿಮ್ಮನ್ನು ಕರೆಯಿಸುವೆನು. ನೀವು ಅರುಣ ಕುಮಾರಿಯ ವಿಷಯದಲ್ಲಿ ತಿಲಾಂಶವಾದರೂ ಯೋಚನೆ ಮಾಡಬಾರದು.

ಕೃಷ್ಣಲಾಲಸಿಗೆ ಆನಂದವಾಯಿತು. ಅವನು ಉದಯಸಿಂಗನ ನಿರೂಪ ಪಡೆದು ತನ್ನ ಸೈನಿಕರೊಡನೆ ಚಿತೋಡದಿಂದ ಪ್ರಯಾಣಮಾಡಿದನು.

---

## ತಳಮಳಿಸುವ ಹೃದಯ.



ಮಹಾರಾಣಾ ಉದಯಸಿಂಗನು ಮೇವಾಡದ ರಾಜ್ಯ ಸೂತ್ರಗಳನ್ನು ಕೈಯಲ್ಲ ತೆಗೆದುಕೊಂಡನು. ರಾಷ್ಟ್ರದಲ್ಲ ಸುಖ-ಶಾಂತಿಗಳು ನೆಲೆಗೊಂಡವು. ಪ್ರಜಾಪರಿ ವಾರವು ಆಗಿನ ಪರಿಸ್ಥಿತಿಯಲ್ಲಿ ಪ್ರಸನ್ನವಾಗಿತ್ತು. ದಿನದ ಹಿಂದೆ ದಿನಗಳು ಹೋಗ ತೊಡಗಿದವು. ಎಷ್ಟೋ ದಿನಗಳು ಗತಿಸಿದರೂ ಅವನು ತನ್ನ ವಾಗ್ದತ್ತ ವಧುವಾದ ಅರುಣಕುಮಾರಿಯನ್ನು ಕರೆಯಿಸಲಿಲ್ಲ. ಅವಳು ಸುಖರೂಪವಾಗಿರುವಳೋ ಇಲ್ಲವೋ ಎಂಬದನ್ನಾದರೂ ವಿಚಾರಿಸಲಿಲ್ಲ. ಅರುಣಕುಮಾರಿಯು ಚಾತಕಪಕ್ಷಿ ಯಂತೆ ಮಾರ್ಗ ಪರೀಕ್ಷಣೆ ಮಾಡುತಲಿದ್ದಳು. ಇಂದು ಬರಬಹುದು; ನಾಳೆ ಬರ ಬಹುದು ಎಂದು ಅವಳು ಮೂರು ನಾಲ್ಕು ತಿಂಗಳುಗಳ ವರೆಗೆ ಉದಯಸಿಂಗನ ಪತ್ರದ ದಾರೀ ನೋಡ ಬೇಸತ್ತಳು. ಮಹಾರಾಣಾನು ಪಟ್ಟಾಭಿಷಿಕ್ತನಾದ ಕೂಡಲೆ ತನ್ನನ್ನು ಒಳ್ಳೆಯ ಸನ್ಮಾನದಿಂದಲೂ ಸಡಗರದಿಂದಲೂ ಬರಮಾಡಿಕೊಳ್ಳು ವನೆಂದು ಅರುಣಳ ಕಲ್ಪನೆಯಿತ್ತು; ಆದರೆ ಈಗ ಮಾತ್ರ ಅವಳ ಭ್ರಮೆಯು ಬಯ ಲಾಯಿತು. ರಾಜ್ಯವೈಭವದಲ್ಲಿ ರಾಣಾನು ತನ್ನನ್ನು ಮರೆತು ಬಿಟ್ಟಿರುವನೆಂದು ಅವಳು ದುಃಖ-ನೈರಾಶ್ಯಗಳಿಂದ ಬಸವಳಿಯ ತೊಡಗಿದಳು.

ಅರುಣಕುಮಾರಿಯ ಮನಸ್ಸಿನಲ್ಲಿ ನಾನಾಪ್ರಕಾರದ ವಿಚಾರಗಳು ಹುಟ್ಟಿದ್ದವು. “ನಾನು ಒಬ್ಬ ಸಾಮಾನ್ಯ ಸ್ತ್ರೀಯೆಂದು ಉಪೇಕ್ಷೆ ಮಾಡಿಂಬಹುದೆ? ಹೀನಕುಲೋ ತ್ಪನ್ನಳೆಂಬ ಉದ್ದೇಶದಿಂದ ಬುದ್ಧಿಪೂರ್ವಕವಾಗಿ ಸುಮ್ಮನೆ ಕುಳಿತು ಬಿಟ್ಟಿರಬಹುದೆ? ಇಲ್ಲವೆ ರಾಣಿಯರ ಮನಸ್ಸು ನೊಂದೀತೆಂಬ ಆಲೋಚನೆಯು ಮನಸ್ಸಿನಲ್ಲಿ ಹುಟ್ಟಿರ ಬಹುದೆ? ಇಷ್ಟೆಲ್ಲ ಎಡರುತೊಡರುಗಳಿದ್ದರೆ ಮುಂಚಿತವಾಗಿ ವಾಗ್ನಿಶ್ಚಯಮಾಡಿಕೊಳ್ಳಬೇಕಾ

ಗಿತ್ತು. ಆತ್ಮ ಘಾತಮಾಡಿಕೊಳ್ಳಲುದ್ಯುಕ್ತಳಾದ ನನ್ನನ್ನು ಕರ್ತವ್ಯಪರಾಙ್ಮುಖಿಳನ್ನು ಮಾಡಿ, ದುಃಖಾಗ್ನಿಯಲ್ಲಿ ಹುರುಪಳಿಸಿ ಹೋಗುವಂತೆ ಮಾಡುವದು ಇದೆಲ್ಲಿಯ ಧರ್ಮವು? ಇದೆಲ್ಲಿಯ ಘನವಂತಿಕೆಯು? ನನ್ನ ಹೃದಯವು ಸಹಜವಾಗಿ ವಿಕಾರವಶವಾಗುವಂತಹದೆ? ನಿಶ್ಚಲ ಚಿತ್ತಳೂ ನಿರ್ಮಲಳೂ ಆದ ನನ್ನನ್ನು ಈ ಬಗೆಯಾಗಿ ಮೋಸಗೊಳಿಸುವದು ಉಚಿತವೆ? ಮಹಾರಾಣಾಜೀ, ನೀವು ನನ್ನನ್ನು ಹೀಗೆಯೆ ನಡುನೀರಲ್ಲಿ ಕೈ ಬಿಡುವಿರಾ? ನಾನು ರಾಜನ ರಾಣಿಯಾಗಿ ರಾಜವೈಭವಗಳನ್ನನುಭವಿಸುತ್ತ ವಿಲಾಸದಲ್ಲಿ ಕಾಲಕಳೆಯಬೇಕೆಂಬ ಇಚ್ಛೆಯುಳ್ಳವಳಾಗಿಲ್ಲ. ನಿಮ್ಮ ಸಂಪತ್ತೂ, ರಾಜ್ಞೀಪದವೂ ನನಗೆ ಬೇಕಾಗಿಲ್ಲ. ಯಾವ ವಿಧದ ಸಾಂಸಾರಿಕ ಭೋಗ-ವಿಲಾಸಗಳ ವಾಸನೆಯೂ ನನ್ನಲ್ಲಿ ಉದಯಿಸಿಲ್ಲ. ನನ್ನ ಹೃದಯದೇವತೆಗಳಾದ ನಿಮ್ಮ ಚರಣಗಳ ದರ್ಶನದಿಂದ ನಾನು ಕೃತಾರ್ಥಳಾಗುವೆನು ನಿಮ್ಮ ಪಾದಸೇವೆಯಿಂದ ಧನ್ಯಳಾಗುವೆನು. ಉದಯಸಿಂಗ ಮಹಾರಾಣಾಜಿಯವರ ಧರ್ಮಪತ್ನಿಯೆಂಬ ಅಭಿಧಾನವನ್ನು ಹೊಂದಿದರೆ ಕೃತಕೃತ್ಯಳಾದೇನು. ರಾಣಾಜಿ, ನನ್ನ ಈ ಅಲ್ಪವಾದ ಇಚ್ಛೆಯನ್ನು ನೀವು ಪೂರ್ಣ ಮಾಡಲಾರಿರಾ? ಇಷ್ಟು ಅಲ್ಪವಾದ ಮನಕಾಮನೆಗಳನ್ನು ಪೂರ್ಣಮಾಡಿಕೊಳ್ಳುವಂತಹ ಭಾಗ್ಯವು ನನ್ನದಿಲ್ಲವೆ? ನಾನು ಅಂತಹ ಅಪಾತ್ರಳೂ ಅಸಮರ್ಥಳೂ ಇರುವೆನೆ? ಇಷ್ಟು ದಿನಗಳಲ್ಲಿ ನಿಮ್ಮ ಚರಣ ದರ್ಶನವಾಗುವದೊತ್ತಟ್ಟಿಗಿರಲಿ, ಕುಶಲವಾರ್ತೆಯು ಸಹ ತಿಳಿಯಲಿಲ್ಲ. ನಾನು ಅಂತಹ ಅಭಾಗಿನಿಯಿರುವೆನೇ ಹೇಗೆ?"

"ರಾಣಾಜಿ, ಅಜಿತಾನಂದರ ಹಾಗು ನನ್ನ ತಂದೆಯವರ ಸಮಕ್ಷ ಹೇಳಿದ ಎಲ್ಲ ಸಂಗತಿಗಳನ್ನು ನೀವು ಪೂರ್ಣವಾಗಿ ಮರೆತು ಬಿಟ್ಟದ್ದನ್ನು ನೋಡಿ ನನಗೆ ಅತಿಯಾಗಿ ದುಃಖವಾಗುವದು. ನಿಮ್ಮ ಮನಸ್ಸು ಈ ಬಗೆಯ ಕ್ಷುದ್ರವೃತ್ತಿಯದಿರುವದೆಂಬದು ನನಗೆ ಆಗ ತಿಳಿಯಲಿಲ್ಲ. ನಾನಂತು ನಿಮ್ಮನ್ನು ನನ್ನ ಹೃದಯಸಿಂಹಾಸನದಲ್ಲಿರಿಸಿ ಪೂಜಿಸುತ್ತಿರುವೆನು. ನನ್ನ ಪಂಚಪ್ರಾಣಗಳನ್ನು ನಿಮ್ಮ ಚರಣಗಳಿಗೆ ಸಮರ್ಪಿಸಿರುವೆನು ನನ್ನನ್ನು ಹಾಲಲ್ಲೆದ್ದಿರಿ; ಇಲ್ಲವೆ ನೀರಲ್ಲೆದ್ದಿರಿ!"

ಅರುಣಕುಮಾರಿಯು ಮೈ ಮೇಲೆ ಪ್ರಜ್ಞೆಯಿಲ್ಲದವರಂತೆ ಈ ಬಗೆಯಾಗಿ ಬಡಬಡಿಸತೊಡಗಿದ್ದಳು. ಅತಿಶಯವಾದ ದುಃಖದಿಂದಲೂ ನಾನಾಬಗೆಯ ವಿಚಾರಗಳಿಂದಲೂ ಅವಳು ಈಗ ತೀರ ಭ್ರಮಿಷ್ಟಳಂತಾಗಿದ್ದಳು. ಉನ್ಮಾದಿನಿಯಂತೆ ಬಡಬಡಿಸತೊಡಗಿದ ಅವಳು ಬಳಿಯಲ್ಲಿ ಬಂದು ನಿಂತ ತನ್ನ ಸಖಿಯಾದ ಮಾಲತಿಯನ್ನು ನೋಡಿರಲಿಲ್ಲ. ಅರುಣಕುಮಾರಿಯ ಬಡಬಡಿಕೆಯನ್ನು ಕೇಳಿ ಮಾಲತಿಯು ಖೊಳ್ಳನೆ ನಕ್ಕಳು. ಅರುಣಳು ಬೆಚ್ಚಿಬಿದ್ದು ತಿರುಗಿ ನೋಡಿದಳು; ಮಾಲತಿಯು ಬಾಯಿಗೆ ಸೆರಗು ಮುಚ್ಚಿಕೊಂಡು ನಗತೊಡಗಿದಳು. ಆಗ ಅರುಣಳು ಅಚ್ಚರಿಯಿಂದಲೂ ಅಲ್ಪಸ್ವಲ್ಪ ನಾಚಿಕೆಯಿಂದಲೂ ಕೂಡಿದವಳಾಗಿ ಒಂದೆರಡು ಕ್ಷಣ ಸುಮ್ಮನೆ ಕುಳಿತಳು. ಅನಂತರದಲ್ಲಿ ಅವಳು—"ಮಾಲತೀ"

"ಯಾಕೆ ರಾಣಿ?"

"ನಾನು ಎಲ್ಲಿಯ ರಾಣಿಯು? ತತ್ರಾಣಿಯೇ!"

"ಚಿತೋಡದ ರಾಣಿಯು. ತತ್ರಾಣಿಯಾಗಲಿಕ್ಕೆ ಈಗೇನಾಗಿದೆ?"

"ಅದು ಏನೇ ಇರಲಿ; ನನ್ನ ಆಜ್ಞೆಯಿಲ್ಲದೆ ಒಳಗೆ ಬರಲಿಕ್ಕೆ ನಿನಗೆ ಯಾರು ಹೇಳಿದರು?"

"ನೋಡಿದಿಯಾ? ಈಗಲೆ ರಾಜಸತ್ತೆಯ ಭಾಷಣಗಳು ಹೇಗೆ ಹೊರಡತೊಡಗಿರುವವು! ರಾಣೀ, ಒಳಗೆ ಬರಲಿಕ್ಕೆ ಆಜ್ಞೆ ಪಡೆಯಬೇಕೆಂದೇ ನಾನು ನಿನ್ನ ಬಳಿಗೆ ಬಂದೆನು. ನಿನ್ನ ಜಲ್ಪನವು ಮುಗಿಯುವ ವರೆಗೆ ನನಗೆ ಅವಕಾಶವೆಲ್ಲಿ? ಸಂದು ಬಿಡದಂತೆ ನಿನ್ನ ಮಾತುಗಳ ಸುರಿಮಳೆಯೇ ಸುರಿಯುತ್ತಿತ್ತು. ಆದ್ದರಿಂದ ಉಪಾಯಗಾಣದೆ ಸುಮ್ಮನೆ ನಿಂತೆನು. ಈಗಾದರೂ ಅವಕಾಶವಿದೆ. ಒಳಗೆ ಬರಲಿಕ್ಕೆ ಆಜ್ಞೆ ಕೊಟ್ಟುಬಿಡಿರಿ. ಮತ್ತೆ ಸುರಿಮಳೆಗೆ ಪ್ರಾರಂಭವಾದರೆ ಇನ್ನೂ ಒಂದೆರಡು ಗಳಿಗೆ ಸುಮ್ಮನೆ ನಿಲ್ಲಬೇಕಾದೀತು!"

ಅರುಣಳು ಮಾಲತಿಯ ಮಾತಿಗೆ ನಾಚಿದಳು. ಅವಳು ಕೆಲವು ವೇಳೆ ಮುಖವನ್ನು ಕೆಳಗೆ ಮಾಡಿ ಕುಳಿತುಕೊಂಡಳು. ಅನಂತರದಲ್ಲಿ ದೀರ್ಘನಿಶ್ವಾಸಬಿಟ್ಟು:- "ಸಖಿ, ರಾಣಾಜಿಯವರು ನನ್ನನ್ನು ಪೂರಾ ಮರೆತಿರುವರೆಂಬ ಚಿಹ್ನವು ತೋರತೊಡಗಿದ್ದರಿಂದ ಕ್ಲೇಶಗೊಂಡಿರುವೆನು. ದುಃಖಾವೇಗದ ಭರದಲ್ಲಿ ನನ್ನ ಮುಖದಿಂದ ಉಚಿತಾನುಚಿತವಾದ ವಾಣಿಯು ಹೊರಟಿತು. ಸದ್ಯದ ಸ್ಥಿತಿಯಲ್ಲಿ ನಾನು ಭ್ರಮಿಷ್ಟಳಾಗಿರುವೆನು. ಮುಂದೆ ಏನು ಮಾಡಬೇಕೆಂಬ ವಿಚಾರವು ತೋಚದಾಗಿದೆ. ಮಾಲತಿ, ನೀನು ನನ್ನ ಜೀವದ ಗೆಳತಿಯಲ್ಲವೆ? ಚಿಂತಾವಿದಗ್ಧಳಾಗಿ ಮುಂದುಗಾಣದಾದ ನನಗೆ ಮಾರ್ಗದರ್ಶಕರೆನ್ನುವವರು ನಿನ್ನ ಹೊರತು ಮತ್ತಾರಿರುವರು?"

"ರಾಣಿ!—"

"ನಾನು ಆಡ್ಡ ಹೆಸರಿನ ರಾಣಿಯಾಗಿರುವೆನು. ನಿಜವಾದ ಹೆಸರು ಬಿಟ್ಟು, ರಾಣಿಯೆಂದು ಸಂಬೋಧಿಸುವದರಿಂದ ನನಗೆ ಆನಂದವಾಗದೆ ದುಃಖವು ಮಾತ್ರ ಆಗುವದು."

"ಅರುಣದೇವಿ, ಎದೆಗುಂದಬೇಡ. ನೀನು ಬೇಗನೆ ಸುದಿನಗಳನ್ನು ಕಾಣಬಹುದು. ಸ್ವಾಮಿ ಅಜಿತಾನಂದರ ಭವಿಷ್ಯವಾಣಿಯನ್ನು ಚನ್ನಾಗಿ ನಂಬು. ಸಖಿ, ನೀನು ಮುಂದೆ ಏನು ಮಾಡಬೇಕೆನ್ನುವೆ? ಉದಯಸಿಂಗ ರಾಣಾಜಿಯನ್ನು ಜಾಗ್ರತಗೊಳಿಸಲಿಕ್ಕೆ ನೀನು ಯಾವ ಹಂಚಿಕೆ ತೆಗೆದಿರುವೆ? ಅವರು ನಿನ್ನನ್ನು ಮರೆತಿಲ್ಲವೆಂದು ನನ್ನ ಅಭಿಪ್ರಾಯವುಂಟು. ಪಟ್ಟದ ರಾಣಿಯಾದ ಸರೋಜಸುಂದರಿಯ ವರ್ಚಸ್ವವು ರಾಣಾಜಿಯವರ ಮೇಲೆ ಹೆಚ್ಚಾಗಿರುವದರಿಂದ ಅವರು ನಿನ್ನನ್ನು ಕರೆಯಿಸಿಕೊಳ್ಳಲಿಕ್ಕೆ ಸಿದ್ಧರಾಗಲೊಲ್ಲರೆಂಬಂತೆ ತೋರುವದು. ನೀನು ಹೀನ ಕುಲೋತ್ಪನ್ನಳೆಂದು ಜನರ ತಿಳುವಳಿಕೆಯಾಗಿದೆ. ಪವಿತ್ರ ಕುಲದ ರಜಪೂತರು ಚಾರಿತ್ರ್ಯದೋಷವನ್ನು

ಸಹಿಸರು. ನಿನ್ನನ್ನು ಧರ್ಮಪತ್ನಿಯೆಂದು ಸ್ವೀಕರಿಸಬಾರದೆಂಬದಾಗಿ ರಾಜಪರಿವಾರವೂ ಹಾಗು ಸರ್ದಾರಾಧಿಪತಿಗಳ ಮತವಿರಬಹುದು. ಚಿತೋಡದ ಪ್ರಜಾಪರಿವಾರವಾದರೂ ಇದೇ ಬಗೆಯ ಅಭಿಪ್ರಾಯವನ್ನು ಪ್ರದರ್ಶಿಸಿರಬಹುದು. ಅಂತೆಯೆ ಮಹಾರಾಣಾಜಿಯವರು ಉಪಾಯಗಾಣದೆ ಸುಮ್ಮನೆ ಕುಳಿತಂತೆ ತೋರುವದು. ಅವರು ಈಗ ತಟಸ್ಥರಾಗಿ ಕುಳಿತಿದ್ದರೂ, ಸ್ವಲ್ಪಾವಧಿಯಲ್ಲಿಯೆ ನಿನ್ನನ್ನು ಕರೆಯಿಸಿಕೊಳ್ಳುವದರಲ್ಲಿ ಸಂದೇಹವಿಲ್ಲ. ಅವರು ನಿನ್ನಲ್ಲಿ ಅಪ್ರತಿಮ ಪ್ರೇಮವುಳ್ಳವರಾಗಿರುವರು. ನೀನು ಒಂದು ಪತ್ರ ಬರೆದು ಉದಯಸಿಂಗರ ಅಭಿಪ್ರಾಯವನ್ನು ತಿಳಿದುಕೊಳ್ಳಬೇಕು.”

“ಮಾಲತಿ, ಪತ್ರವು ಮಹಾರಾಣಾಜಿಯವರ ಕೈಯಲ್ಲಿ ಗುಪ್ತವಾಗಿ ಸೇರುವಂತೆ ಮಾಡತಕ್ಕದ್ದು. ಪತ್ರದ ವಾರ್ತೆಯು ಪಟ್ಟದ ರಾಣಿಯಾದ ಸರೋಜಸುಂದರಿ ದೇವಿಗೆ ತಿಳಿಯದಂತೆ ವ್ಯವಸ್ಥೆಯಾಗತಕ್ಕದ್ದು.”

“ಅರುಣದೇವಿ, ಸರೋಜಸುಂದರಿ ದೇವಿಯವರಿಗೆ ತಿಳಿಯದ ಹಾಗೆ ಎಷ್ಟು ದಿನಗಳ ವರೆಗೆ ನೀವು ವ್ಯವಹಾರ ಮಾಡುವಿರಿ?”

“ಗುಪ್ತವಾಗಿಡಲಿಕ್ಕೆ ಎಲ್ಲಿಯ ವರೆಗೆ ಸಾಧ್ಯವಿದೆಯೊ ಅಲ್ಲಿಯ ವರೆಗೆ.”

“ಹಾಗಾದರೆ ಪತ್ರ ಬರೆಯಿರಿ. ನಾನು ಗುಪ್ತವಾಗಿಯೆ ಉದಯಸಿಂಗ ರಾಣಾಜಿಯವರಿಗೆ ಪತ್ರಕೊಟ್ಟು, ನಿಮ್ಮ ಮನಃಸ್ಥಿತಿಯನ್ನು ಅವರಿಗೆ ತಿಳಿಸುವೆನು. ನಾನು ನಿಮ್ಮ ಕಾರ್ಯವನ್ನು ಸಿದ್ಧಿಯುವಾಗಿ ಮಾಡಿಸಿಕೊಂಡು ಬರುವೆನು. ನೀವು ಈ ವಿಷಯದಲ್ಲಿ ಯೋಚಿಸಲಾಗದು.”

ಅರುಣಕುಮಾರಿಯು ಲೇಖನ ಸಾಮಗ್ರಿಗಳನ್ನು ತೆಗೆದುಕೊಂಡು ಪತ್ರ ಬರೆಯತೊಡಗಿದಳು. ಸ್ವಲ್ಪ ಭಾಗ ಬರೆಯುವದಾದ ಕೂಡಲೆ ಅದನ್ನು ಓದಿ ಹರಿದೊಗೆದು, ಮತ್ತೊಂದು ಬರೆಯುತ್ತಿದ್ದಳು. ಹೀಗೆ ನಾಲ್ಕೈದು ಪತ್ರಗಳ ವ್ಯವಸ್ಥೆಯಾದ ಮೇಲೆ ಕಡೆಗೆ ಒಂದು ಪತ್ರವು ಅವಳ ಮನಸ್ಸಿನಂತೆ ಸಿದ್ಧವಾಯಿತು. ಅದನ್ನು ಎರಡೆರಡು ಸಾರೆ ಓದಿ ನೋಡಿ ಮಾಲತಿಯ ಕಡೆಗೆ ಕೊಟ್ಟಳು. ಮಾಲತಿಯು ಅದನ್ನು ಓದಿ—“ಅರುಣದೇವಿ, ಈ ಪತ್ರದಲ್ಲಿ ನಿನ್ನ ಅಂತಃಕರಣವೇ ಪ್ರತಿಬಿಂಬಿತವಾಗಿದೆ. ಉದಯಸಿಂಗರಾಣಾರು ಎಂಥಹ ಕಠೋರ ಹೃದಯಿಗಳಿದ್ದರೂ, ಈ ಪತ್ರವು ಅವರ ಮನಸ್ಸನ್ನು ಕರಗಿಸುವದು.”

ಅರುಣಕುಮಾರಿಯ ಮನಸ್ಸು ಬೇರೆ ವಿಧದ ವಿಚಾರದಲ್ಲಿ ಲೀನವಾಗಿತ್ತು. ಪತ್ರವನ್ನೋದಿದ ಮೇಲಾದರೂ ಉದಯಸಿಂಗನು ತನ್ನನ್ನು ಕರೆಯಿಸದಿದ್ದರೆ ಏನು ಮಾಡಬೇಕು? ಪತ್ರದೊಳಗಿನ ಸಂಗತಿಗಳನ್ನು ನೋಡಿ, ಭಾವೀ ಪತಿಯು ತನ್ನನ್ನು ಅವಿಧೇಯಳೂ ನಿರ್ಲಜ್ಜಳೂ ಎಂದು ತಿಳಿದುಕೊಂಡರೆ ಹೇಗೆ? ಮೊದಲಾದ ವಿಚಾರಗಳು ಅವಳನ್ನು ಬಹಳವಾಗಿ ಬಾಧಿಸತೊಡಗಿದವು. ಆಗ ಅವಳು ಮಾಲತಿಯನ್ನು ಕುರಿತು—“ಆ ಪತ್ರವನ್ನು ತಾ.”

"ರಾಣಿ, ಅದೇಕೆ?"

"ಮಹಾರಾಣಾಜಿಯುವರ ಕಡೆಗೆ ಪತ್ರ ಕಳುಹಿಸಬಾರದೆಂದು ಯೋಚಿಸಿ ರುವೆನು."

"ಅರುಣದೇವಿ, ಈ ಬಗೆಯ ಆಲೋಚನೆಯು ಈಗ ಹುಟ್ಟಿತೇಕೆ?"

"ಅವರು ನನ್ನನ್ನು ಬುದ್ಧಿಪೂರ್ವಕನಾಗಿ ಉಪೇಕ್ಷಿಸಿದ್ದರೆ ಪತ್ರದ ಪ್ರಯೋಜನ ವೇನಾಗುವದು?"

"ಒಮ್ಮೆಲೆ ಹಾಗೆ ತರ್ಕಿಸಲಿಕ್ಕೆ ಬರುವದಿಲ್ಲ. ಚನ್ನಾಗಿ ಪರೀಕ್ಷಿಸದೆ ಹೆಸರಿಡ ಬಾರದು. ಸಮಕ್ಷ ಭೆಟ್ಟಿಯಾದಾಗ ಎಲ್ಲ ವಿಷಯಗಳೂ ಗೊತ್ತಾಗುವವು. ಅರುಣ ದೇವಿ, ನೀನು ಪತ್ರ ಕಳಿಸಲಿಕ್ಕೆ ಅನುಮಾನಿಸಬೇಡ."

"ಮಾಲತಿ, ಈ ಪತ್ರವನ್ನೋದಿ ಅವರು ನನಗೆ ನಿರ್ಲಜ್ಜಳೆಂದು ಹೆಸರಿಡಲಿಕ್ಕಿ ಲ್ಲವೆ? ಸಖಿ ನನ್ನ ತಳಮಳಿಸುವ ಹೃದಯವು ಯಾವ ಆಲೋಚನೆಗಳಿಂದಲೂ ಸಮಾ ಧಾನ ಹೊಂದಲೊಲ್ಲದು."

"ಅರುಣ, ನೀನು ನಿನ್ನ ಅಂತಃಕರಣದೊಳಗಿನ ಸಂಗತಿಯನ್ನು ತಿಳಿಸಿದರೆ ಹೇಗೆ ನಿರ್ಲಜ್ಜಳಾಗುವೆ? ರಾಣಾಜಿಯುವರು ನಿನ್ನನ್ನು ನಿರ್ಲಜ್ಜಳೆಂದು ತಿಳಿದುಕೊಳ್ಳ ಲಾರರು ಈ ಪತ್ರವನ್ನೋದಿದೊಡನೆಯೆ ಅವರಲ್ಲಿ ದಯೆಯು ಉತ್ಪನ್ನವಾಗದಿರದು. ನೀನು ವ್ಯರ್ಥಾ ತಳಮಳಿಸಬೇಡ."

"ರಾಜ ಜನರ ಅಂತಃಕರಣವು ಈ ಬಗೆಯಾಗಿ ಕಠೋರವಿರುತ್ತಿರಬಹು ದೇನು? ರಾಣಾಜಿಯುವರಾಡಿದ ಮಾತುಗಳಿಗೂ ಅವರ ವರ್ತನಕ್ಕೂ ಬಹಳೇ ಅಭ್ಯಂತರವಾಯಿತು."

"ಅರುಣದೇವಿ, ನೀನು ಈಗ ಯಾವ ವಿಧವಾದ ತರ್ಕ-ವಿತರ್ಕ ಮಾಡಬೇಡ. ರಾಣಾಜಿಯುವರ ಕೈಯಲ್ಲಿ ರಾಜ್ಯ ಸೂತ್ರಗಳು ಬಂದು ಬಹಳ ದಿನಗಳಾಗಿಲ್ಲ. ಹೊಸ ದಾಗಿ ರಾಜಕಾರಣದಲ್ಲಿ ತೊಡಗಿದವರಾದ ಅವರು ಸದ್ಯದ ಪ್ರಸಂಗದಲ್ಲಿ ನಿನ್ನನ್ನು ಮರೆತಿರಬಹುದು. ಒಂದುವೇಳೆ ನೆನಪಿದ್ದರೂ, ಅನೇಕ ಕಾರಣಗಳ ಮೂಲಕ ಕರೆಯಿಸಲಿಕ್ಕೆ ಅನುವು ದೊರೆತಿರಲಿಕ್ಕಿಲ್ಲ."

"ಮಾಲತಿ, ನೀನು ಚಿತೋಡ ರಾಜಧಾನಿಗೆ ಹೋಗಿ ಅವರನ್ನು ಕಂಡು, ನನ್ನ ಅವಸ್ಥೆಯನ್ನು ಒಳಿತಾಗಿ ಅರುಹು. ಕಾರ್ಯಬಾಹುಲ್ಯದ ಮೂಲಕ ಅವರು ನನ್ನನ್ನು ಕರೆಯುಸುವ ವಿಷಯುದಲ್ಲಿ ವಿಲಂಬ ಮಾಡಿರಬಹುದೆಂದು ನೀನು ಹೇಳುತ್ತಿರುವೆ. ಈ ಸಂಗತಿಯು ನಿಜವಿದ್ದರೆ ನಿನ್ನ ಜೊತೆಯಲ್ಲೇ ಅನುಚರರನ್ನು ಕಳುಹಿಸುವರು."

"ನೀನು ನಿಶ್ಚಿಂತಳಾಗಿರು. ನಾನು ನಿನ್ನ ಮನಸ್ಸಿನಂತೆ ಕಾರ್ಯವನ್ನು ಈಡೇರಿಸಿಕೊಂಡು ಬರುವೆನು. ನನಗೆ ಅಪ್ಪಣೆ ಕೊಡು."

ಮಾಲತಿಯು ಮಾರನೆಯ ದಿನ ಉಷಃಕಾಲಕ್ಕೆ ಪ್ರಯಾಗವನ್ನು ಬಿಟ್ಟು ಚಿತೋಡಕ್ಕೆ ಪ್ರಯಾಣ ಬೆಳೆಯಿಸಿದಳು.

---

## ಅರುಣಕುಮಾರಿಯ ಪತ್ರ.

ಉದಯಸಿಂಗನು ವಿಮನಸ್ಕನಾಗಿದ್ದನು. ಅವನು ಅರುಣಕುಮಾರಿಯನ್ನು ಧಾರ್ಮಿಕವಿಧಿಯಿಂದ ವರಿಸಬೇಕೆಂದು ಮೊದಲು ನಿರ್ಧರಿಸಿದ್ದನೇನೋ ನಿಜವು; ಆದರೆ ಜಾತಿಭ್ರಷ್ಟಳಾದ ಸ್ತ್ರೀಯನ್ನು ಪರಿಗ್ರಹಿಸುವದು 'ಚಿತೋಡದ ಪವಿತ್ರ ರಾಜ ಮನೆತನದ ಗೌರವಕ್ಕೆ ಕುಂದು ತರುವಂತಹ ಸಂಗತಿಯೆಂದು, ಮಂತ್ರಿಮಂಡಲವೂ ರಾಜಪುರೋಹಿತರೂ ಅಭಿಪ್ರಾಯ ಪಟ್ಟಿದ್ದರಿಂದ ಅವನು ಖಿನ್ನನಾಗಿದ್ದನು. ಧರ್ಮದ ಕಟ್ಟಾಭಿಮಾನಿಗಳಾದ ರಜಪೂತರ ಮುಂದೆ ಅವನ ಆಟವೇನೂ ನಡೆಯು ದಾಯಿತು. ರಾಜಶಕ್ತಿಯ ಬಲದಿಂದ ಅರುಣಕುಮಾರಿಯನ್ನು ವರಿಸಿದರೆ ತನ್ನ ಅಪಕೀರ್ತಿಯು ಬೆಳೆದು, ಎಲ್ಲರೂ ತನ್ನನ್ನು ತಿರಸ್ಕರಿಸ ತೊಡಗುವರೆಂಬ ಅಂಜಿಕೆಯು ಅವನನ್ನು ಬಾಧಿಸತೊಡಗಿತು. ಕೋಮಲ ಮನಸ್ಕಳೂ, ಸುವ್ರತೆಯೂ, ಗುಣ ಮಣಿಯೂ ಆದ ಅರುಣಕುಮಾರಿಯನ್ನು ಮೋಸಗೊಳಿಸುವ ವ್ಯವಹಾರವು ತನ್ನಿಂದ ಘಟಿಸಿತೆಂದು ಅವನು ಒಂದೇಸವನೆ ಕುದಿಯಲಾರಂಭಿಸಿದನು. ಅರುಣಳು ಪವಿತ್ರ ರಜಪೂತ ಕುಲದವಳೆಂಬದನ್ನು ಸಿದ್ಧಪಡಿಸಲಿಕ್ಕೆ ಅವನು ಬಹು ಪರಿಯಾಗಿ ಹೆಣಗಿ ದನು. ಅಜಿತಾನಂದ ಸ್ವಾಮಿಗಳನ್ನು ಕರೆಯಿಸಿ ಧರ್ಮಾಂಧರಾದ ಜನರಿಗೆ ನಿಜ ವಾದ ಧರ್ಮ ತತ್ವಗಳನ್ನು ಉಪದೇಶ ಮಾಡಹಚ್ಚಿ, ಅವರ ಮನಸ್ಸು ತಿರುಗಿಸಲಿಕ್ಕೆ ಯತ್ನಿಸಿದನು; ಆದರೆ ಸನಾತನ ಧರ್ಮ ಪಂಡಿತರಾದ ರಾಜಪುರೋಹಿತರು ಕುಲ ಭ್ರಷ್ಟಳಾದ ಅರುಣಕುಮಾರಿಯ ಪಾಣಿಗ್ರಹಣ ಮಾಡುವದು ಅನುಚಿತವೆಂದು ನಿಷ್ಠುರತೆಯಿಂದ ಹೇಳಿದರು. ಧಾರ್ಮಿಕ ವಿಧಿಯಿಂದ ಪಾಣಿಗ್ರಹಣ ಮಾಡುವೆ ನೆಂದು ಉದಯಸಿಂಗನು ಅರುಣಕುಮಾರಿಗೆ ಆಶ್ವಾಸನೆ ಕೊಟ್ಟಿದ್ದನು; ಆದರೆ ಜನಾಂಗದ ಮನಸ್ಸಿನ ವಿರುದ್ಧವಾಗಿ ಕಾರ್ಯ ಮಾಡುವ ಧೈರ್ಯವು ಅವನಲ್ಲಿ ಹುಟ್ಟದಾಯಿತು. ಅರುಣಕುಮಾರಿಯು ಎದುರಿಗೆ ದೊಡ್ಡ ದೊಡ್ಡ ಮಾತುಗಳ ನ್ನಾಡಿದ್ದು ವ್ಯರ್ಥವಾಯಿತೆಂದು ಅವನು ತಿಳಿದನು. ಮನೋಭಂಗ ಹೊಂದಿದ ಆ ಕೋಮಲ ಹೃದಯಿಯು ತನಗೆ ವಂಚಕನೂ ನೀಚನೂ ಎಂದು ಹೆಸರಿಟ್ಟಿರಬಹು ದೆಂದು ಅವನು ಒಂದೇಸವನೆ ಚಡಪಡಿಸತೊಡಗಿದನು.

ಉದಯಸಿಂಗನು ಮಂಚದ ಮೇಲೆ ಒರಗಿಕೊಂಡಿದ್ದನು. ಅವನ ಮನಸ್ಸು ಅರುಣಕುಮಾರಿಯಲ್ಲಿ ಲೀನವಾಗಿತ್ತು. ಇತ್ತೀಚೆಗಂತು ಅವನಿಗೆ ಬೇರೆ ವಿಷಯ ಗಳು ಬೇಸರಾಗಿದ್ದವು. ಜನಾಂಗದ ಧರ್ಮದ ಅಂಧಶ್ರದ್ಧೆಯಿಂದ ಕರ್ತೃತ್ವಶಾಲಿ ನಿಯೂ, ಸದ್ಗುಣಗಳ ಖಣಿಯೂ, ಸದ್ಧರ್ಮದ ಮೂರ್ತಿಮಂತ ದೇವತೆಯೂ ಆದ ಒಬ್ಬ ದೀನ ಅಬಲೆಯ ಜೀವನವು ವ್ಯರ್ಥವಾಗತೊಡಗಿದ್ದನ್ನು ನೋಡಿ ಅವನಿಗೆ ಒಳ್ಳೇ ಹಳಹಳಿಯಾಗಿತ್ತು. ಅರುಣಕುಮಾರಿಯ ಆಯುಷ್ಯವು ಹೇಗೆ ಸುಖ

ಮಯವಾಗಬಹುದೆಂದು ಅವನು ನಾನಾರೀತಿಯಿಂದ ವಿಚಾರಿಸಿದನು. ದಿಙ್ಮೂಢ ನಾದ ಅವನಿಗೆ ಯಾವ ಉಪಾಯವೂ ತೋಚದಾಯಿತು. ತನ್ನಲ್ಲಿ ದಾಸಿಯಾಗಿರ ಲಿಕ್ಕೆ ಅರುಣಕುಮಾರಿಯು ಒಪ್ಪುವದಿಲ್ಲವೆಂದು ಅವನಿಗೆ ಖಂಡಿತವಾಗಿ ತಿಳಿದಿತ್ತು. ಧಾರ್ಮಿಕವಿಧಿಯಿಂದ ಪಾಣಿಗ್ರಹಣ ಮಾಡಲಿಕ್ಕೆ ಜನಾಂಗದ ಪ್ರಬಲವಾದ ಅಡ್ಡಿ ಬರುವದೆಂಬದಾದರೂ ಅಷ್ಟೇ, ಕಿಂಬಹುನಾ ಅದಕ್ಕಿಂತ ಹೆಚ್ಚಾಗಿ ಗೊತ್ತಾಗಿತ್ತು. ಹೀಗಿದ್ದ ಮೇಲೆ ಅರುಣಕುಮಾರಿಯ ಜೀವಿತವು ಹೇಗೆ ಸುಖಮಯವಾಗಬೇಕು? ಉದಯಸಿಂಗನು ಅನೇಕ ಬಗೆಯಿಂದ ವಿಚಾರಿಸುತ್ತ ಬಹಳ ವೇಳೆಯ ವರೆಗೆ ಮಲ ಗಿಯೇ ಇದ್ದನು. ಆಗ ಪ್ರತಿಹಾರಿಯು ಅಲ್ಲಿಗೆ ಬಂದು--"ಮಹಾರಾಜರೇ, ಪ್ರಯಾಗ ದಿಂದ ಒಬ್ಬ ತರುಣಿಯು ಬಂದಿರುವಳು. ಅವಳು ನಿಮ್ಮನ್ನು ಕಾಣುವದಕ್ಕಾಗಿ ಆತುರಗೊಂಡಿರುವಳು."

ಪ್ರತಿಹಾರಿಯು ಹೀಗೆ ನುಡಿಯಲು, ಅರುಣಕುಮಾರಿಯೇ ತನ್ನ ಭೆಟ್ಟಿಗೆ ಬಂದಿರುವಳೆಂದು ಅವನ ಗ್ರಹಿಕೆಯಾಯಿತು. ಬಹಳ ದಿನಗಳ ವರೆಗೆ ಮಾರ್ಗ ಪ್ರತೀಕ್ಷೆ ಮಾಡಿ ಬೇಸತ್ತು, ಕಡೆಗೆ ಅವಳು ಹೊರಟು ಬಂದಳೆಂದು ಉದಯಸಿಂಗನು ತಿಳಿದನು. ಸಿಟ್ಟಿಗೆದ್ದು ಬಂದ ಅರುಣಕುಮಾರಿಗೆ ಹೇಗೆ ಮುಖವನ್ನು ತೋರಿಸಬೇ ಕೆಂದು ಅವನು ಆಲೋಚನೆಗೊಳಗಾದನು. ಕಡೆಗೆ ಗಟ್ಟಿಮನಸ್ಸು ಮಾಡಿ ಪ್ರತಿ ಹಾರಿಯನ್ನು ಕುರಿತು—"ಆ ಸ್ತ್ರೀಯನ್ನು ಒಳಗೆ ಕಳುಹಿಸು"

ಕೆಲವು ನಿಮಿಷಗಳ ಮೇಲೆ ಸುಮಾರು ಹದಿನೆಂಟು ವರ್ಷದ ವಯಸ್ಸಿನ ಒಬ್ಬ ತರುಣಿಯು ಒಳಗೆ ಬಂದು ರಾಣಾಜಿಗೆ ನಮಸ್ಕರಿಸಿ ನಿಂತುಕೊಂಡಳು. ಆಗ ಉದಯಸಿಂಗನಿಗೆ ಜೀವದಲ್ಲಿ ಜೀವವು ಬಂದಿತು. ಯಾಕಂದರೆ ಅವನು ಯಾರಿಗೆ ಅಷ್ಟು ಅಂಜಿಕೊಂಡಿದ್ದನೋ, ಆ ಸ್ತ್ರೀಯು ಅವಳಾಗಿರದೆ ಮತ್ತೊಬ್ಬಳಾಗಿದ್ದಳು. ಆ ಯುವತಿಯನ್ನು ನೋಡಿ ಅವನು ಗಂಭೀರತೆಯಿಂದ-"ಅಮ್ಮಾ, ನೀನು ಯಾರು? ಇಲ್ಲಿಗೆ ಬಂದ ಉದ್ದೇಶವೇನು?"

"ಮಹಾರಾಣಾಜೀ," ಆ ಯುವತಿಯು—"ನಾನು ಪ್ರಯಾಗದೊಳಗಿನ ಒಬ್ಬ ಸಾಮಾನ್ಯ ರಜಪುತನ ಕುಮಾರಿಯು. ನನಗೆ ಮಾಲತಿಯನ್ನುವರು. ನನ್ನ ಸಖಿಯ ಆಜ್ಞೆಯ ಮೇರೆಗೆ ಇಲ್ಲಿಗೆ ಬಂದಿರುವೆನು."

"ನಿನ್ನ ಸಖಿಯು ಯಾರು?"

"ನಿಮ್ಮ ಸಖಿಯೇ ನನ್ನ ಸಖಿಯು."

"ಹೀಗಂದರೇನು? ನಿನ್ನ ಸಖಿಯಾರೆಂಬದನ್ನು ಹೇಳಬಾರದೆ?"

"ರಾಣೀ ಅರುಣಕುಮಾರಿಯು."

"ಅವಳು ನಿನ್ನನ್ನು ಇಲ್ಲಿಗೆ ಕಳುಹಿಸಿದ ಕಾರಣವೇನು?"

"ರಾಜವೈಭವದಲ್ಲಿ ಮುಳುಗಿ ಮೈ ಮರೆತ ನಿಮ್ಮನ್ನು ಎಚ್ಚರಿಸುವದಕ್ಕಾಗಿ!"

"ನೀನು ನನ್ನನ್ನು ಎಚ್ಚರಿಸಬಂದೆಯಾ?"

"ಮಹಾರಾಣಾಜೀ, ನಿಮ್ಮನ್ನು ಎಚ್ಚರಿಸಲಿಕ್ಕೆ ನಾನೆಷ್ಟರವಳು? ಅವಳ ಪತ್ರವೇ ನಿಮ್ಮನ್ನು ಎಚ್ಚರಿಸುವದು."

"ಪತ್ರವೆಲ್ಲಿದೆ?"

"ನನ್ನ ಬಳಿಯಲ್ಲಿ"

"ಅದನ್ನು ಕೊಡುವದಿಲ್ಲವೇನು?"

"ಕೊಡಲಿಕ್ಕೆ ಬಂದಿರುವೆನು ರಾಣಾಜೀ!" ಎಂದು ಮಾಲತಿಯು ನುಡಿದು, ಅರುಣಕುಮಾರಿಯ ಪತ್ರವನ್ನು ಅವನ ಸ್ವಾಧೀನಕ್ಕೆ ಕೊಟ್ಟಳು. ಉದಯಸಿಂಗನು ಎದ್ದು ಕುಳಿತು ಪತ್ರವನ್ನೋದತೊಡಗಿದನು. ಓದುತ್ತ ಹೋದಂತೆ ಅವನ ಮುಖದಲ್ಲಿ ನಾನಾಬಗೆಯ ವಿಕಾರಗಳು ವ್ಯಕ್ತವಾಗತೊಡಗಿದವು. ನೇತ್ರಗಳು ಸಜಲವಾದವು. ಆ ಪತ್ರದೊಳಗಿನ ಸಂಗತಿಯು ಕೆಳಗೆ ಬರೆದಂತಿತ್ತು:

"ಪ್ರಾಣನಾಥ!

ಮನಸ್ಸು ಬಹಳವಾಗಿ ವ್ಯಾಕುಲಗೊಂಡದ್ದರಿಂದ ತಮ್ಮ ಸನ್ನಿಧಿಗೆ ಪತ್ರ ಕಳುಹಿಸಿರುವೆನು. ಸಾದ್ಯಂತವಾಗಿ ಓದಿ ಈ ದೀನ ದಾಸಿಯ ಮೇಲೆ ಕೃಪೆಮಾಡಬೇಕೆಂದು ಸೆರಗೊಡ್ಡಿ ಬೇಡಿಕೊಳ್ಳುವೆನು.

ತಾವು ರಾಜಾಧಿರಾಜರಿರುವಿರಿ. ಪ್ರಜಾಜನರ ಪಾಲನ ಪೋಷಣೆಯ ಭಾರವು ತಮ್ಮ ಮೇಲಿರುವದು. ತಮ್ಮನ್ನೇ ನಂಬಿದ ಈ ದೀನಳನ್ನು ಉಪೇಕ್ಷಿಸತೊಡಗಿರುವದರ ಇಂಗಿತವೇನು? ಈ ನಿಮ್ಮ ಚರಣದಾಸಿಯಿಂದ ಯಾವ ಮಹತ್ತರವಾದ ಅಪರಾಧವು ಘಟಿಸಿರುವದೆಂದು ಈ ಭಯಂಕರವಾದ ಶಾಸನವನ್ನು ಮಾಡತೊಡಗಿರುವಿರಿ? ಅನಾಥರೂ, ನಿರಪರಾಧಿಗಳೂ, ದೀನರೂ ಆದ ಜನರಿಗೆ ದಂಡನೆಯನ್ನೀಯಬೇಕೆಂದು ನಿಮ್ಮ ರಾಜನೀತಿ ಶಾಸ್ತ್ರದಲ್ಲಿ ಹೇಳಿರುವದಿಲ್ಲವಷ್ಟೆ? ನೀವು ನನ್ನನ್ನು ವರಿಸಲೊಪ್ಪಿರುವಿರಿ. ನಾನಾದರೂ ನನ್ನ ಹೃದಯದಲ್ಲಿ ನಿಮ್ಮ ಮೂರ್ತಿಯನ್ನು ನೆಲೆಗೊಳಿಸಿರುವೆನು. ನಾವಿಬ್ಬರೂ ಪರಸ್ಪರರನ್ನು ಪತಿಪತ್ನಿಯರೆಂದು ಭಾವಿಸಿರುವೆವು. ಧಾರ್ಮಿಕವಿಧಿಯಿಂಧಲ್ಲದಿದ್ದರೂ, ನೀವು ನನ್ನನ್ನು ಮನಸಾ ವರಿಸಿರುವದು ಸತ್ಯವಲ್ಲವೆ? ಮನಸ್ಸಿನಿಂದ ವಿವಾಹವಾದ ಮೇಲೆ ನಾನು ನಿಮ್ಮ ಪತ್ನಿಯಾದೆನು. ಪ್ರಿಯರೆ, ಈ ನಿಮ್ಮ ಪತ್ನಿಯಿಂದ ಯಾವ ಪಾತಕವು ಘಟಿಸಿರುವದೆಂದು ಅವಳ ವಧೆಮಾಡಲುಪಕ್ರಮಿಸಿರುವಿರಿ? ಜೀವದಾನ ಮಾಡಿ ಹಿಂದಿನಿಂದ ಕೊಲೆ ಮಾಡುವ ನಿಮ್ಮ ರಾಜನೀತಿಯೂ ಧರ್ಮವೂ ಉಕ್ತವಾದವುಗಳೆ? ನೀವು ರಾಜರಿರುವಿರಿ; ಸರ್ವತಂತ್ರ ಸ್ವತಂತ್ರರಿರುವಿರಿ; ಧರ್ಮಜ್ಞರಿರುವಿರಿ. ನಿಮ್ಮ ಮನಸ್ಸಿಗೆ ಸರಿಯಾಗಿ ಕಂಡಂತೆ ನಡೆಯತಕ್ಕದ್ದು.

ನಾಥರೆ! ನಾನು ಯಾವಾಗಲೂ ನಿಮ್ಮ ಆರಾಧನೆಯಲ್ಲಿರುವೆನು. ನಿಮ್ಮ ಚರಣದರ್ಶನವಾಗಬೇಕೆಂದು ಅತ್ಯಾತುರಳಾಗಿರುವೆನು. ತಮ್ಮ ಸೇವೆ ಮಾಡಬೇಕೆಂದು ಮನಸ್ಸು ಹಾತೊರೆಯುತ್ತಲಿದೆ. ನಾನು ತಮ್ಮಲ್ಲಿ ಪ್ರೀತಿಯುಳ್ಳವಳಾಗಿರುವಂತೆ

ನೀವಾದರೂ ನನ್ನಲ್ಲಿ ಪ್ರೀತಿಯುಳ್ಳವರಿರುವಿರೆಂದು ನನ್ನ ಗ್ರಹಿಕೆಯುಂಟು. ನೀವು ನನ್ನ ಗ್ರಹಿಕೆಯನ್ನು ಸುಳ್ಳುಮಾಡಿವಿರೋ ಹೇಗೆ?

ನೀವು ನನ್ನನ್ನು ಇಷ್ಟು ದಿನಗಳವರೆಗೆ ಉಪೇಕ್ಷೆ ಮಾಡಿದ ಕಾರಣವನ್ನು ನಾನು ಅರಿತಿರುವೆನು. ನಿಮ್ಮಲ್ಲಿಯ ಧರ್ಮಪಂಡಿತರು ನನ್ನನ್ನು ಜಾತಿಭ್ರಷ್ಟಳೆಂದು ಸಿದ್ಧ ಪಡಿಸಿರಬಹದು. ಹಾಗಿಲ್ಲದಿದ್ದರೆ ನೀವು ಹೀಗೆ ಸ್ವಸ್ಥವಾಗಿ ಕುಳಿತುಕೊಳ್ಳುತ್ತಿದ್ದಿಲ್ಲ. ಅಂಧಶ್ರದ್ಧೆಯ ಜನಾಂಗದ ಮನಸ್ಸು ತಿರುಗಿಸುವದು ಕಠಿಣವೆಂಬದರ ಅನುಭವವು ನಿಮಗಿದ್ದರೆ, ನನ್ನನ್ನು ಪರಿಗ್ರಹಿಸುವ ಹವ್ಯಾಸಕ್ಕೆ ಬೀಳುತ್ತಿದ್ದಿಲ್ಲ. ಹಿಂದಿನ ಸಂಗತಿಗಳನ್ನು ನೆನೆದರೆ ಆಗುವದೇನು? ನಾನಂತು ನಿಮ್ಮನ್ನು ನಂಬಿ ಕುಳಿತಿರುವೆನು. ನಡುನೀರಲ್ಲಿ ಕೈಬಿಡಬಾರದೆಂದು ಪ್ರಾರ್ಥಿಸುತ್ತೇನೆ.

ನನಗೆ ರಾಜ್ಞೀಪದವು ಬೇಡ; ಸಿರಿಸಂಪತ್ತೂ, ರಾಜವೈಭವವೂ, ವಿಲಾಸೋಪಭೋಗಗಳೂ ಬೇಡ; ಮಾನ-ಮರ್ಯಾದೆಗಳುಬೇಡ. ತಮ್ಮ ಚರಣಸೇವೆಯೊಂದು ದೊರೆತರೆ ನಾನು ಕೃತಾರ್ಥಳಾಗುವೆನು. ಅಭಾಗಿನಿಯಾದ ನಾನು ತಮ್ಮ ಚರಣ ದರ್ಶನದಿಂದಲೇ ಭಾಗ್ಯವತಿಯಾಗುವೆನು.

ನಾನು ಅಲ್ಲಿಗೆ ಬಂದರೆ ನಿಮ್ಮ ರಾಜ್ಞೀ ಪರಿವಾರದಿಂದ ಇಲ್ಲವೆ ಧರ್ಮದ ಅಂಧಶ್ರದ್ಧೆಯ ಜನರಿಂದ ನಿಮಗೆ ತೊಂದರೆಯಾಗುವಂತಿದ್ದರೆ, ನನ್ನನ್ನು ಕರೆಯಿಸಿಕೊಳ್ಳುವ ಹವ್ಯಾಸಕ್ಕೆ ಬೀಳಬಾರದು. ನಿಮ್ಮ ಜೀವಕ್ಕೆ ದುಃಖ-ಸಂತಾಪಗಳೊದಗಬಾರದೆಂದು ನನ್ನ ಉತ್ಕಟೇಚ್ಛೆಯುಂಟು. ನಾನು ಅಲ್ಲಿಗೆ ಬರುವದರಿಂದ ನಿಮಗೆ ದುಃಖವಾಗುವ ಸಂಭವವಿದ್ದರೆ, ನೀವು ನನ್ನನ್ನು ಸರ್ವಥಾ ಕರೆಯಿಸಿಕೊಳ್ಳಬೇಡಿರಿ; ನಾನಾದರೂ ಬರುವದಿಲ್ಲ.

ಪ್ರಾಣಪ್ರಿಯರೆ, ಪವಿತ್ರರಜಪುತರ ರಾಜಮನೆತನದವರಾದ ನಿಮಗೂ, ಜಾತಿಭ್ರಷ್ಟಳಾದ ಈ ದೀನ ಸ್ತ್ರೀಗೂ ಎಲ್ಲಿಯ ಸಂಬಂಧವು? ಸುವರ್ಣವಾದರೆ ಮಣಿಯ ಜೊತೆಯನ್ನು ಹೊಂದುವದು. ಕಬ್ಬಿಣಕ್ಕೆ ಅದರ ಸಂಸರ್ಗವಾಗುವ ಬಗೆ ಹೇಗೆ?

ಹೃದಯೇಶ್ವರಾ! ನಾನು ನನ್ನ ಹೃದಯದಲ್ಲಿದ್ದದ್ದನ್ನು ಸ್ಪಷ್ಟವಾಗಿ ಬರೆದಿರುವೆನು. ತಮಗೆ ಯೋಗ್ಯವೆನಿಸುವಂತೆ ನಡೆಯಿರಿ. ನಿಮ್ಮ ಪತ್ರವನ್ನು ನೋಡಿ ಮುಂದೆ ನನ್ನ ಕರ್ತವ್ಯ ಮಾಡುವೆನು. ಈ ದೀನ ದಾಸಿಯ ಮೇಲೆ ಮಮತೆಯಿರಲಿ.

ತಮ್ಮ ಚರಣ ರಜವಾಂಛಿತದಾಸಿ,
ಅರುಣಕುಮಾರಿ."

ಪತ್ರದ ಸಂಗತಿಗಳಿಂದ ಉದಯಸಿಂಗನ ಹೃದಯಕ್ಕೆ ಬರೆಕೊಟ್ಟಂತಾಯಿತು. ತನ್ನಿಂದ ದೊಡ್ಡ ಪ್ರಮಾದವು ಘಟಿಸಿತೆಂದು ಅವನು ಕ್ಲೇಶಪಡತೊಡಗಿದನು. ರಾಣಾನು ಮಾತಾಡದೆ ಸ್ವಸ್ಥವಾಗಿ ಕುಳಿತದ್ದು ನೋಡಿ ಮಾಲತಿಯು ತೊಂದರೆಗೊಳಗಾದಳು. ಎಷ್ಟು ವೇಳೆಯಾದರೂ ಮೌನವು ಮುರಿಯುವದೆಂಬ ಲಕ್ಷಣವು

ತೋರದ್ದರಿಂದ ಅವಳು ಉದಯಸಿಂಗನನ್ನು ಕುರಿತು-"ಮಹಾರಾಣಾಜೀ, ತಮ್ಮ ಹೃದಯೇಶ್ವರಿಗೆ ಯಾವ ಸಂದೇಶವನ್ನರುಹಬೇಕು?"

"ಮಾಲತಿ!" ಉದಯಸಿಂಗನು ದೀರ್ಘ ನಿಶ್ವಾಸಬಿಟ್ಟು—"ನನ್ನ ಅಪರಾಧ ವನ್ನು ಕ್ಷಮಿಸಬೇಕೆಂಬ ವಿನಂತಿಯನ್ನು ತಿಳಿಸು. ನಾನು ನಿನ್ನ ಸಖಿಯ ಮನೋ ಭಂಗ ಮಾಡಿದೆನು. ಅವಳ ಸುಕೋಮಲ ಹೃದಯವು ದುಃಖಾಗ್ನಿಯಿಂದ ಹುರು ಪಳಿಸಿ ಹೋಗುವಂತಹ ಕೃತಿಯು ನನ್ನಿಂದ ಘಟಿಸಿತು. ನಾನು ಪರಮ ನೀಚನು! ಕೃತಘ್ನನಾದ ನನ್ನನು ನಂಬಿ ಅವಳು ಕೆಟ್ಟಳು. ಮಾಲತಿ, ಸದ್ಯದ ಸಾಮಾಜಿಕ ಸ್ಥಿತಿಯನ್ನು ನೋಡಲು, ಧಾರ್ಮಿಕ ವಿಧಿಯಿಂದ ಅವಳ ಪಾಣಿಗ್ರಹಣಮಾಡು ವದು ಸಾಧ್ಯವಿಲ್ಲ. ಪ್ರೇಮಮೀಲನ ಸಮಯದಲ್ಲಿ ಪ್ರಣಯಾಂಧನಾದ ನನಗೆ ಸಾಮಾಜಿಕ ಬಂಧನೆಗಳ ಅರಿವಾಗಲಿಲ್ಲ. ಅಂತೆಯೆ, ಮಹಾ ಸುವ್ರತೆಯೂ ಅರುಣ ಕುಮಾರಿಯ ಪ್ರಣಯಭಂಗ, ಮನೋಭಂಗಗಳನ್ನು ಮಾಡುವ ಪ್ರಸಂಗವೊದಗಿತು."

"ಮಹಾರಾಣಾಜೀ, ನನ್ನ ಸಖಿಯಾದ ಅರುಣಕುಮಾರಿಯ ಸ್ವಭಾವಪರಿ ಚಯವು ನಿಮಗೆ ಚನ್ನಾಗಿ ಗೊತ್ತಿಲ್ಲವೆಂಬಂತೆ ತೋರುವದು. ಅವಳು ದೃಢಮನ ಸ್ಕಳು. ನಿಮ್ಮಲ್ಲಿ ಅವಳ ಪ್ರೇಮವು ನೆಲೆಗೊಂಡಿರುವದು. ಯಾವ ಕಾಣಗಳಿಂದಲೂ ಅದು ಸ್ಥಿತ್ಯಂತರವಾಗುವಂತಿಲ್ಲ. ನಿಮ್ಮ ಚರಣಗಳ ದರ್ಶನದಿಂದ ಅವಳ ಮನಸ್ಸು ಸಂತುಷ್ಟವಾಗುವಂತಿದೆ. ಅರುಣಕುಮಾರಿಯು ರಾಜ್ಞೀಪದವಿಯನ್ನೂ, ರಾಜ ವೈಭವಗಳನ್ನೂ ವಿಲಾಸೋಪಭೋಗಗಳನ್ನೂ ಹೊಂದಲಿಚ್ಛಿಸಿಲ್ಲ. ನಿಮ್ಮ ಚರಣ ಸೇವೆಯು ದೊರೆತರೆ ಅವಳು ಧನ್ಯಳಾಗುವಳು. ಅರುಣಕುಮಾರಿಯ ಪತ್ರವನ್ನು ಸಾದ್ಯಂತವಾಗಿ ಓದಿದ ನಿಮಗೆ ಅವಳ ಅಭಿಪ್ರಾಯವು ಚನ್ನಾಗಿ ತಿಳಿದಿರಲಿಕ್ಕೆ ಬೇಕು. ಧಾರ್ಮಿಕ ವಿಧಿಯಿಂದ ನಿಮ್ಮನ್ನು ವರಿಸಬೇಕೆಂದು ಮೊದಲು ಅವಳ ಸಂಕಲ್ಪವಿತ್ತು; ಆದರೆ ಸಮಾಜದ ಕಟ್ಟಳೆಗಳ ಮೂಲಕವಾಗಿ ಅದು ಸಾಧ್ಯವಾಗದ್ದರಿಂದ ಅವಳು ನಿರುಪಾಯಳಾಗಿ, ಕೇವಲ ನಿಮ್ಮ ಚರಣ ಸಂದರ್ಶನದಿಂದ ಕೃತಾರ್ಥಳಾಗಬೇಕೆನ್ನು ವಳು. ಆ ದುರ್ಭಾಗಿನಿಯ ಈ ಅಲ್ಪವಾದ ಬೇಡಿಕೆಯನ್ನು ಪೂರೈಸಲಾರಿರಾ?

"ಮಾಲತಿ, ಅರುಣಕುಮಾರಿಯಂತಹ ಸದ್ಗುಣಮಣಿಯೂ, ಸುಶೀಲಳೂ,' ನಿಷ್ಕಲಂಕಳೂ, ತೇಜಸ್ವಿಯೂ ಆದ ರಜಪುತ ತರುಣಿಯನ್ನು ಒಬ್ಬ ಸಾಮಾನ್ಯ ದಾಸಿಯಂತೆ, ಇಲ್ಲವೆ ಒಬ್ಬ ವೇಶ್ಯೆಯಂತೆ ಹೀನ ಪರಿಸ್ಥಿತಿಯಲ್ಲಿ ಹೇಗೆ ಕಾಲಹರಣ ಮಾಡಹಚ್ಚಲಿ? ಅವಳ ಯೋಗ್ಯತೆಯು ಘನವಾದದ್ದಿರುವದು. ಅವಳು ಚಿತೋ ಡದ ಮಹಾರಾಜ್ಞಿಯಾಗುವ ಯೋಗ್ಯತೆಯುವಳಿರುವಳು. ನನ್ನ ಪಟ್ಟಮಹಿಷಿಯಾದ ಸರೋಜಸುಂದರಿಯಲ್ಲಿದ್ದ ಸದ್ಗುಣಗಳೆಲ್ಲವೂ ಅವಳಲ್ಲಿರುವವು ಅವಳು ರಾಜಕಾರಣ ಶೌರ್ಯ-ಧೈರ್ಯ-ಶಸ್ತ್ರಾಸ್ತ್ರ ವಿದ್ಯೆಗಳಲ್ಲಿ ಸರೋಜಸುಂದರಿಯನ್ನು ಮೀರಿರುವಳು. ಸ್ವಾಮಿ ಅಜಿತಾನಂದರ ಮುಖದಿಂದ ಅರುಣಕುಮಾರಿಯ ಚಾರಿತ್ರ್ಯವನ್ನೆಲ್ಲ ಅರಿತಿರುವೆನು; ಆದರೆ ಏನು ಮಾಡಲಿ? ನಾನು ಸಮಾಜದಬಂಧನದಲ್ಲಿ ಸಿಲುಕಿದವನಿ

ರುವೆನು. ಅವಳನ್ನು ಧಾರ್ಮಿಕವಿಧಿಯಿಂದ ಪಾಣಿಗ್ರಹಣಮಾಡುವದು ಸದ್ಯ ದಲ್ಲಂತು ಸಾಧ್ಯವಿಲ್ಲ; ದಾಸಿಯಂತೆ ಇರಿಸಲಿಕ್ಕೂ ಮನವೊಪ್ಪದಾಗಿದೆ. ಅರುಣ ಕುಮಾರಿಯು ಪರಿಶುದ್ಧಳೂ ಸುಚರಿತಳೂ ಎಂಬದನ್ನು ಸಿದ್ಧಪಡಿಸುವದಕ್ಕೆ ನಾನು ಪ್ರಯತ್ನ ನಡೆಯಿಸಿರುವೆನು. ನನ್ನ ಪ್ರಯತ್ನಕ್ಕೆ ಯಶಸ್ಸು ದೊರೆತರೆ ಅವಳನ್ನು ಕರೆಯಿಸುವೆನು.''

''ಒಂದುವೇಳೆ ನಿಮ್ಮ ಪ್ರಯತ್ನಕ್ಕೆ ಯಶಸ್ಸು ದೊರೆಯದಿದ್ದರೆ?''

''ಉಪಾಯವಿಲ್ಲ.''

''ಅರುಣಕುಮಾರಿಯನ್ನು ನಿಮ್ಮ ಚರಣಕಿಂಕರಿಯನ್ನಾಗಿ ಮಾಡಿಕೊಳ್ಳ ಲೊಪ್ಪುವದಿಲ್ಲವೆ?''

ಉದಯಸಿಂಗನು ಸ್ವಲ್ಪ ವಿಚಾರಿಸಿ—''ಆ ಮಾತನ್ನು ಈಗಲೆ ನಿಷ್ಕರ್ಷಿ ಸುವದೇಕೆ?''

''ಅರುಣಕುಮಾರಿಯು ಯಾವ ಆಧಾರದ ಮೇಲೆ ಜೀವಿಸಬೇಕು?''

''ಮತ್ತೆ ಆತ್ಮಹತ್ಯೆಯ ವರೆಗೆ ಪ್ರಸಂಗವೊದಗೀತೇನು?''

''ಅದನ್ನು ಹೇಳಲಿಕ್ಕೆ ಬರುವದಿಲ್ಲ.''

ಉದಯಸಿಂಗನು ಮತ್ತಿಷ್ಟು ಯೋಚನೆಗೊಳಗಾದನು. ತಾನು ಅರುಣ ಕುಮಾರಿಯನ್ನು ತಿರಸ್ಕರಿಸಿದರೆ ಅವಳು ನಿಜವಾಗಿ ಆತ್ಮಹತ್ಯೆ ಮಾಡಿಕೊಳ್ಳುವ ಳೆಂದೂ, ಹಾಗಾದರೆ ಸ್ತ್ರೀಹತ್ಯಾಪಾತಕಕ್ಕೆ ತಾನೇ ಪೂರ್ಣ ಪಾಲುಗಾರನಾದಂತಾಗು ವದೆಂದೂ ಅವನು ತಿಳಿದನು. ಅನಂತರದಲ್ಲಿ ಅವನು ಮಾಲತಿಗೆ—''ಮಾಲತಿ, ನಾನು ಅರುಣಕುಮಾರಿಯನ್ನು ಮನಸಾ ವರಿಸಿರುವೆನು. ಅಜಿತಾನಂದರ ಸಮಕ್ಷ ವಾಗಿ ಅವಳ ಕೊರಳಲ್ಲಿ ರತ್ನಮಾಲೆಹಾಕಿರುವೆನು; ಅವಳ ಪಾಣಿಗ್ರಹಣ ಮಾಡಿರು ವೆನು. ಅವಳು ನನ್ನ ಅರ್ಧಾಂಗಿನಿಯೇ ನಿಜವು. ನಾನು ಅವಳಿಗೆ ರಾಣೀ ಅರು ಣಕುಮಾರಿಯೆಂಬ ಅಭಿಧಾನಕೊಟ್ಟಿರುವೆನು. ಇನ್ನು ಸಾಮಾಜಿಕ ದೃಷ್ಟಿಯಿಂದ ನಾವು ಪತಿ-ಪತ್ನಿಯರಾಗಿ ಕಾಣಲಾರೆವು. ಅಂಧಪರಂಪರೆಯ ಸಮಾಜದ ದೃಷ್ಟಿ ಯನ್ನು ತೆಗೆದುಕೊಂಡು ಮಾಡುವದೇನು? ಆದರೂ ಇನ್ನೊಮ್ಮೆ ಒಳಿತಾಗಿ ಪ್ರಯ ತ್ನಿಸಿನೋಡಿ, ಅವಳನ್ನು ಕರೆಯಿಸಬೇಕೆಂದು ನನ್ನ ನಿರ್ಧಾರವಿದೆ. ಮಾಲತಿ, ಅಧೀರಳಾಗಬೇಡವೆಂದು ನಿನ್ನ ಸಖಿಗೆ ನನ್ನ ದೃಢವಾದ ಆಶ್ವಾಸನೆಯನ್ನರುಹು.''

''ಮಾಹಾರಾಣಾಜಿಯವರೆ, ಸಹಜ ಪ್ರೇಮದಿಂದ ನೀವು ಅರುಣಳನ್ನು ವರಿ ಸಲೊಪ್ಪಿರುವಿರಿ. ಧರ್ಮಪತ್ನಿಯಲ್ಲದಿದ್ದರೂ ದಾಸಿಯೆಂದಾದರೂ ಅವಳನ್ನು ಸ್ವೀಕರಿಸಬೇಕು.''

''ಛೇ! ಅವಳು ನನ್ನ ಧರ್ಮಪತ್ನಿಯು! ಅರ್ಧಾಂಗಿಯು! ರಾಣಿಯು! ಅವ ಳನ್ನು ದಾಸಿಯೆಂದು ನಾನು ಎಂದೂ ತಿಳಿಯೆನು. ಇಷ್ಟೇ ಸಂದೇಶವನ್ನು ನಿನ್ನ ಸಖಿಗೆ ಅರುಹು.''

ಮಾಲತಿಗೆ ಆನಂದವಾಯಿತು. ಅವಳು ಉದಯಸಿಂಗನ ನಿರೋಪಹೊಂದಿ, ಚಿತೋಡದಿಂದ ತೆರಳಿದಳು.

---

## ಜಾಲೀ ಬಿತ್ತುವ ಹಂಚಿಕೆ.

ಸರೋಜ ಸುಂದರಿದೇವಿಯು ಅಟ್ಟಾಲಿಕೆಯಲ್ಲಿ ವಿಚಾರಮಗ್ನಳಾಗಿ ಕುಳಿತಿದ್ದಳು. ರಾಜ್ಯಪ್ರಾಪ್ತಿಯಾದಮೇಲೆ ಪತಿಯು ಔದಾಸೀನ್ಯದಿಂದ ಕಾಲಹರಣ ಮಾಡುತ್ತಿರುವದರ ಇಂಗಿತವು ಅವಳಿಗೆ ಚನ್ನಾಗಿ ತಿಳಿದಿದ್ದಿಲ್ಲ. ವಿಮನಸ್ಕನಾದ ಪತಿಯ ಮನಸ್ಸನ್ನು ಸಂತೋಷಗೊಳಿಸುವದಕ್ಕೆ ಅವಳು ಬಹುಪರಿಯಾಗಿ ಯತ್ನಿದಳು. ಅವಳ ಪ್ರಯತ್ನದಿಂದ ಪ್ರಯೋಜನವಾಗಲಿಲ್ಲ. ಬರಬರುತ್ತ ಉದಯಸಿಂಗನ ಸ್ಥಿತಿಯು ಹುಚ್ಚನಂತಾಯಿತು. ಅವನು ಯಾವಾಗಲೂ ಉದಾಸೀನನಾಗಿರುತ್ತಿದ್ದನು. ಅನ್ನ-ನಿದ್ರೆಗಳು ಕಟ್ಟಾಗುತ್ತ ಬಂದವು. ಇದೆಲ್ಲ ಸ್ಥಿತಿಯನ್ನು ನೋಡಿ, ಮಹಾರಾಣಿಯಾದ ಸರೋಜಸುಂದರಿಯು ವ್ಯಸನಾಕ್ರಾಂತಳಾದಳು. ಪತಿಯು ಪೂರ್ವದಸ್ಥಿತಿಗೆ ಹೇಗೆ ಬಂದಾನೆಂದು ಅವಳು ವಿಚಾರಿಸತೊಡಗಿದಳು. ಆಗ ಅವಳ ದಾಸಿಯಾದ ಲಾವಣ್ಯವತಿಯು ಅಲ್ಲಿಗೆ ಬಂದು—"ಮಹಾರಾಣಿಯವರೆ, ಇಂದು ನಾನು ಒಂದು ವೈಚಿತ್ರ್ಯವನ್ನು ಕಂಡೆನು." ಎಂದು ವಿಸ್ಮಯದಿಂದ ಹೇಳಿದಳು.

"ಲಾವಣ್ಯ, ನೀನು ಕಂಡ ವಿಚಿತ್ರವಾದ ಸಂಗತಿಯೇನು?" ಸರೋಜಸುಂದರಿಯು ಆತುರಗೊಂಡು ಕೇಳಿದಳು.

"ಮಹಾರಾಣಾಜಿಯವರು ಮಂತ್ರಣಾಗಾರದಲ್ಲಿ ಕುಳಿತಿದ್ದರು.—"

"ಕುಳಿತರಬಹುದು; ಇದರಲ್ಲಿ ವೈಚಿತ್ರ್ಯವೇನು?"

"ಮಹಾದೇವಿ, ಪೂರ್ಣವಾಗಿ ಹೇಳುವವರೆಗೆ ತಡೆಯಿರಿ."

"ಒಳ್ಳೇದು, ಹೇಳು."

"ಆಗ ಅವರು ಒಬ್ಬ ಯುವತಿಯೊಡನೆ ಸಂಭಾಷಣ ನಡೆಯಿಸಿದ್ದರು."

"ಆ ಯುವತಿ ಯಾರೆಂಬದು ನಿನಗೆ ಗೊತ್ತಿರುವದೇನು?'

"ನಾನು ಅವಳನ್ನು ಪ್ರಯಾಗದಲ್ಲಿ ಕಂಡಂತೆ ಭಾಸವಾಗುತ್ತದೆ. ಬಹಳ ಮಾಡಿ ಅವಳು ಕೃಷ್ಣಲಾಲನ ಕುಮಾರಿಯಾದ ಅರುಣಕುಮಾರಿಯ ಸಖಿಯಾಗಿರಬಹುದು."

"ಅವಳು ಮಹಾರಾಣಾಜಿಯವರೊಡನೆ ಯಾವ ವಿಷಯವಾಗಿ ಮಾತಾಡತೊಡಗಿದ್ದಳು?"

"ನನಗೆ ಮಾತುಗಳು ಕೇಳಲಿಲ್ಲ. ಆ ಯುವತಿಯು ಒಂದು ಪತ್ರವನ್ನು ಮಹಾರಾಣಾಜಿಯವರ ಕಡೆಗೆ ಕೊಟ್ಟಳು,"

"ಆ ಪತ್ರದೊಳಗಿನ ಸಂಗತಿಯನ್ನು ನೀನು ಅರಿತಿರುವೆಯಾ?"

"ಬಹಳಮಾಡಿ ಅದು ಪ್ರಣಯಪತ್ರಿಕೆಯಿರಬಹುದು."

"ಅದನ್ನು ನೀನು ಹೇಗೆ ಗುರುತಿಸಿದೆ?"

"ಅನುಮಾನದಿಂದ. ಮಹಾರಾಣಾಜಿಯವರು ಪ್ರಯಾಗದೊಳಗಿನ ಒಬ್ಬ ಲಾವಣ್ಯಲತಿಕೆಯಲ್ಲಿ ಅನುರಕ್ತರಾಗಿರಬಹುದೆಂದು ನನ್ನ ಊಹೆಯುಂಟು."

"ಲಾವಣ್ಯ, ಆ ಪತ್ರವು ನಿನಗೆ ದೊರೆಯಬಹುದೇನು.?"

"ಮಹಾರಾಣಾಜಿಯವರು ಓಲಗಕ್ಕೆ ಹೋಗಿರುವರು. ಇದೇ ವೇಳೆಯಲ್ಲಿ ಮಂತ್ರಣಾಗಾರಕ್ಕೆ ಹೋಗಿ ಶೋಧಿಸಿದರೆ ದೊರೆಯಬಹುದು."

ಲಾವಣ್ಯವತಿಯು ಹೀಗೆ ಹೇಳಿದಕೂಡಲೆ, ಸರೋಜಸುಂದರಿಯು ಅವಳನ್ನು ಕೂಡಿಕೊಂಡು ಮಂತ್ರಣಾಗಾರಕ್ಕೆ ಬಂದಳು. ಅವರಿಬ್ಬರೂ ಅಲ್ಲಿಯ ಪೆಟ್ಟಿಗೆಗಳನ್ನು ಶೋಧಿಸಿದರು. ಪುಸ್ತಕಗಳಲ್ಲಿ ನೋಡಿದರು. ಕಡೆಗೆ 'ಮೇವಾಡದ ಇತಿಹಾಸ' ಪುಸ್ತಕದಲ್ಲಿ ಒಂದು ಪತ್ರವು ಇಡಲ್ಪಟಿತ್ತು. ಲಾವಣ್ಯವತಿಯು ಆ ಪತ್ರವನ್ನು ತೆಗೆದುಕೊಂಡು ಓದಿ—"ದೇವಿ, ನನ್ನ ಊಹೆಯು ನಿಜವಾಯಿತು. ನೋಡಿರಿ, ನಿಮ್ಮ ಪತಿದೇವರ ವೈಚಿತ್ರ್ಯವನ್ನು!"

ಸರೋಜಸುಂದರಿಯು ಪತ್ರವನ್ನು ಕೈಯಲ್ಲಿ ತೆಗೆದುಕೊಂಡು ಸಂಪೂರ್ಣವಾಗಿ ಓದಿದಳು. ಓದುವದಾದ ಮೇಲೆ ಅವಳ ಮುಖದಲ್ಲಿ ಉದ್ವೇಗ-ವಿಸ್ಮಯ ದುಃಖಗಳ ಚಿಹ್ನಗಳು ಒಡೆದು ಕಾಣಲಾರಂಭಿಸಿದವು. ಕಣ್ಣುಗಳು ಸಜಲವಾದವು. ಮುಖವು ಮ್ಲಾನವಾಯಿತು. ಅವಳು ಲಾವಣ್ಯವತಿಯನ್ನು ಕುರಿತು ಖಿನ್ನವಾಣಿಯಿಂದ—"ಮಹಾರಾಜರು ಯಾವಾಗಲೂ ಊದಾಸೀನತೆ ಹೊಂದಿರುವ ಕಾರಣವು ಈಗ ಒಳಿತಾಗಿ ತಿಳಿಯಿತು. ಕೃಷ್ಣಲಾಲನ ಪುತ್ರಿಯಾದ ಅರುಣಕುಮಾರಿಯಲ್ಲಿ—ಕುಲಕಲಂಕಿನಿಯೂ ಜಾತಿಭ್ರಷ್ಟಳೂ ಎಂದು ಹೆಸರು ಹೊಂದಿದವಳಲ್ಲಿ—ಅವರು ಅನುರಕ್ತರಾಗಿವರು. ಪವಿತ್ರ ಮನೆತನದ ರಜಪುತರು ಅರುಣಳನ್ನು ವರಿಸುವದು ಅನುಚಿತವಲ್ಲವೆ?"

"ಮಹಾರಾಜ್ಞಿಯವರೆ, ರಾಜರಾದವರು ಜಾತಿ-ನೀತಿಗಳ ಕಟ್ಟಳೆಗಳನ್ನು ಪಾಲಿಸುತ್ತಿರುವದಿಲ್ಲ. ಈ ವಿಷಯದಲ್ಲಿ ನೀವಾದರೂ ವಿಷಾದಗೊಳ್ಳುವದೇಕೆ? ಅರುಣಕುಮಾರಿಯು ಜಾತಿಭ್ರಷ್ಟಳೆಂದು ಪ್ರಸಿದ್ಧಳಾಗಿದ್ದರೂ, ಮಹಾರಾಣಾಜಿಯವರು ಅವಳನ್ನು ವರಿಸಲೊಪ್ಪಿದ್ದು ವಿಸ್ಮಯವು. ಈ ವಿಷಯವನ್ನು ನೀವು ಮಹಾರಾಜರಿಂದ ತಿಳಿದುಕೊಳ್ಳಿರಿ."

"ಲಾವಣ್ಯ, ಅವರು ಬುದ್ಧಿಪೂರ್ವಕವಾಗಿ ಈ ಪ್ರಣಯ ಕಥೆಯನ್ನು ಗೌಪ್ಯವಾಗಿರಿಸಲು, ನಾನು ಆತುರದಿಂದ ಕೇಳುವದು ಉಚಿತವಲ್ಲ."

"ಜಾತಿಭ್ರಷ್ಟತೆಯ ಕಲಂಕವೊಂದಿಲ್ಲದಿದ್ದರೆ ಅರುಣಕುಮಾರಿಯು ರಾಣಿಯಷ್ಟೇ ಏಕೆ, ಮಹಾರಾಣಿಯಾಗುತ್ತಿದ್ದಳು."

"ಅವಳು ಮಹಾರಾಣಿಯಾಗಲಿಕ್ಕೆ ಈಗೇನಾಗಿದೆ? ಜಾತಿಭ್ರಷ್ಟತೆಯ ಕಲಂಕವು ಅವಳು ಮಹಾರಾಣಿಯಾಗುವಾಗ ಅಡ್ಡ ಬರುವಂತಿರುವದೇನು?"

"ಮಹಾದೇವಿ, ಧಾರ್ಮಿಕ ವಿಧಿಯಿಂದ ಅವಳ ಪಾಣಿಗ್ರಹಣವಾಗುವದು ಸಾಧ್ಯವಾಗಲಾರದು."

"ಹಾಗಾದರೆ ಅರುಣಕುಮಾರಿಯು ಒಬ್ಬ ವೇಶ್ಯೆಯಂತೆ ವಾಸವಾಗಿರಲೊಪ್ಪುವಳೆ?"

"ಅದನ್ನು ನಾನು ಹೇಳಲಾರೆನು."

"ಅವಳು ಬರುವವರೆಗೆ ಮಹಾರಾಣಾಜಿಯವರಿಗೆ ಮನಶ್ಶಾಂತಿಯು ಲಭಿಸಲಾರದು."

"ಈ ಮಾತು ನಿಜವು."

"ಮುಂದೆ ಉಪಾಯವೇನು ಲಾವಣ್ಯ?"

"ನಾನಂತು ಉಪಾಯಗಾಣದಾಗಿರುವೆನು."

"ಹೇಗಾದರೂ ಪ್ರಯತ್ನಮಾಡಿ ಮಹಾರಾಣಾಜಿಯವರ ಮನಸ್ಸನ್ನು ಸಂತುಷ್ಟಗೊಳಿಸಬೇಕು."

"ಅರುಣಕುಮಾರಿಯನ್ನು ಕರೆಯಬೇಕೆಂದು ಯೋಚಿಸಿರುವೆಯೇನು?"

"ಯಾವ ಉಪಾಯದಿಂದಲಾದರೂ ಅವಳನ್ನು ಕರೆಯಿಸಬೇಕಾಗಿದೆ."

"ಅವಳನ್ನು ಕರೆತರಲಿಕ್ಕೆ ಹೆಚ್ಚಿನ ಸಾಹಸ ಮಾಡಬೇಕಾಗಿಲ್ಲ. ರಾಣಾಜಿಯವರ ಪತ್ರವು ಹೋದಕೂಡಲೆ ಅವಳು ಬರುವಳು."

"ಮಹಾರಾಜರಿಗೆ ತಿಳಿಯದಂತೆ ಅರುಣಕುಮಾರಿಯನ್ನು ಕರೆಯಿಸಬೇಕು. ಅವರು ನಮ್ಮಿಂದ ಅರುಣಳ ವಿಷಯವನ್ನು ಗುಪ್ತವಾಗಿರಿಸಿರುವರು. ನಾವಾದರೂ ಈಗಲೆ ಅವರ ಮುಂದೆ ಈ ಪ್ರಸ್ತಾಪ ತೆಗೆಯುವ ಕಾರಣವೇನು?"

"ಮಾಹಾದೇವಿ, ಅರುಣಕುಮಾರಿಯನ್ನು ಕರೆಯಿಸಬೇಕೆಂದು ನಿಮ್ಮ ನಿರ್ಧಾರವಿರುವದೇನು?"

"ಹೌದು."

"ಜಾಲೀ ಬಿತ್ತಿ ಕಾಲಿಗೆ—"

"ಏನೂ ಅಡ್ಡಿಯಿಲ್ಲ ಮಹಾರಾಜರಿಗೆ ಸುಖವುಂಟಾಗುವಂತೆ ಯತ್ನಿಸುವದು ನನ್ನ ಧರ್ಮವಾಗಿರುವದು."

"ದೇವಿ, ನೀವು ಅರುಣಕುಮಾರಿಯನ್ನು ಚನ್ನಾಗಿ ನೋಡಿಲ್ಲವೆಂಬಂತೆ ತೋರುವದು."

"ಒಂದೆರಡುವೇಳೆ ನೋಡಿರುವೆನು."

"ಆಗಿನ ದೃಷ್ಟಿಯು ಬೇರೆ ವಿಧವಾದದ್ದಿತ್ತು. ಈಗಿನ ದೃಷ್ಟಿಯಿಂದ ನೋಡಿದರೆ ನಿಮ್ಮ ಮನಸ್ಸು ಒಂದು ವಿಧವಾಗುವದು."

"ಅದೇಕೆ?"

"ಅರುಣಳು ಅಪ್ಸರೆಯರನ್ನು ನಾಚಿಸುವಂತಿರುವಳು."

"ಇರಬಹುದು. ಹಾಗಿದ್ದರೆ ನನ್ನ ಹಾನಿಯೇನು? ಮಹಾರಾಜರು ಅವಳೊಡನೆ ಆನಂದದಿಂದ ಕಾಲಕಳೆಯಲೊಲ್ಲರೇಕೆ? ಹೇಗಾದರೂ ಅವರಿಗೆ ಸುಖವಾದರಾಯಿತು"

"ಅವರಿಗೆ ಸುಖವಾಗುವದು. ನಿಮಗೆ?"

"ನನ್ನ ಸುಖ-ದುಃಖಗಳ ಆಲೋಚನೆಯನ್ನು ನಾನು ಮಾಡುವದಿಲ್ಲ."

"ನನಗೊಂದು ಹಂಚಿಕೆಯು ತೋರುವದು."

"ಅದೇನು?" ಉತ್ಕಂಠೆಯಿಂದ ಸರೋಜಸುಂದರಿಯು ಕೇಳಿದಳು.

"ಆ ಹಂಚಿಕೆಯು ಸಾಧಿಸಿದರೆ ನೀವೂ ಮಹಾರಾಜರೂ ಕೂಡಿಯೆ ಸೌಖ್ಯ ಹೊಂದುವಿರಿ"

"ಆ ಹಂಚಿಕೆಯೇನು ಹೇಳಬಾರದೆ."

"ಅರುಣಕುಮಾರಿಯು ಲಾವಣ್ಯದ ರಾಶಿಯಾಗಿರುವದರಿಂದ ಮಹಾರಾಣಾಜಿಯವರು ಭ್ರಮಿಷ್ಟರಾಗಿರುವರು. ಅವಳ ರೂಪವು ಅಂದಗೆಟ್ಟು ಹೋಗುವಂತಹ ಯಾವ ಉಪಾಯವಾದರೂ ಇದ್ದರೆ ಹುಡುಕಿ ತೆಗೆಯಿರಿ." ಲಾವಣ್ಯವತಿಯು ಹೀಗೆ ನುಡಿದು ನಗತೊಡಗಿದಳು.

"ಲಾವಣ್ಯ, ನಿನಗೆ ಕಾಲಮಾನಗಳೇನೂ ತಿಳಿಯುವದಿಲ್ಲ. ಯಾವಾಗಲೂ ವಿನೋದವನ್ನೇ ಮಾಡುತ್ತ ನೀನು ವೇಳೆಗಳೆಯುವೆ. ಅರುಣಕುಮಾರಿಯು ಕುರೂಪಿಯಾಗಬೇಕೆಂದು ನಾನು ಇಚ್ಛಿಸುವದಿಲ್ಲ. ಅವಳನ್ನು ಇಲ್ಲಿಗೆ ಕರೆಯಿಸಿಕೊಂಡು, ಮಹಾರಾಜರ ಮನಸ್ಸು ಆನಂದದಲ್ಲಿರುವಂತೆ ಮಾಡಬೇಕಾಗಿದೆ. ನೀನು ಅರುಣಳನ್ನು ಕರೆದುಕೊಂಡು ಬರುವೆಯಾ?"

"ನಾನು ಒಳ್ಳೆಯ ಆಶ್ಚರ್ಯವನ್ನು ಕಂಡೆನು. ದೇವಿ, ಸವತಿಯನ್ನು ಮನೆಯಲ್ಲಿ ತರಬೇಕೆನ್ನುವಿರಾ? ಹಾದೀಹಿಡಿದು ಹೋಗುವ ದೆವ್ವವನ್ನು ನಡುಮನೆಯಲ್ಲಿ ಇಳಿಸಿಕೊಂಡಂತೆ--"

"ಲಾವಣ್ಯ, ಮಹಾರಾಜರಿಗೆ ಸೌಖ್ಯವಾದರೆ ನನಗೆ ಸೌಖ್ಯವು ದೊರೆತಂತೆಯೇ ಸರಿ. ಅವರು ವಿಮನಸ್ಕರಾಗಿದ್ದರೆ ನನಗೆ ಹೇಗೆ ಆನಂದವು ದೊರೆಯಬೇಕು?"

"ಮಹಾರಾಣಿ, ಈ ವಿಷಯದಲ್ಲಿ ನನಗೆ ಅಷ್ಟು ಚನ್ನಾಗಿ ತಿಳಿಯದು. ನಾನು ಏನು ಮಾಡಬೇಕು, ಹೇಳಿರಿ.

"ಅರುಣಕುಮಾರಿಯನ್ನು ಯುಕ್ತಿ ಪ್ರಯುಕ್ತಿಗಳಿಂದ ಇಲ್ಲಿಗೆ ತರುವದು ನಿನ್ನಿಂದ ಸಾಧ್ಯವಾಗುವದೆ?"

"ಸಾಧ್ಯವಾಗಬಹುದು. ಈ ಮಾತಿಗೆ ಮಹಾರಾಜರು ಸಮ್ಮತಿಸುವರೆ?"

"ಸಮ್ಮತಿಸದೇನು ಮಾಡಿಯಾರು?"

"ಅವರನ್ನು ವಿಚಾರಿಸಿರಿ."

"ಅವರಿಗೆ ಈ ಮಾತು ತಿಳಿಸುವ ಕಾರಣವಿಲ್ಲ."

"ಹಾಗಾದರೆ ಮಾಹಾರಾಜರ ಆಜ್ಞಾಪತ್ರವಿಲ್ಲದೆ ಅರುಣಕುಮಾರಿಯು ಇಲ್ಲಿಗೆ ಬರುವಳೆ?"

"ನಾನು ಅವಳಿಗೆ ಪತ್ರಕೊಡುವೆನು. ನನ್ನ ಪತ್ರವನ್ನು ನೋಡಿದೊಡನೆಯೇ ಅವಳು ಹೊರಟು ಬರುವಳು."

"ಹಾಗಾದರೆ ಪತ್ರಬರೆಯಿರಿ."

ಲಾವಣ್ಯವತಿಯು ಹೀಗೆ ನುಡಿದು, ಸರೋಜಸುಂದರಿಗೆ ಲೇಖನ ಸಾಮಗ್ರಿಗಳನ್ನು ಕೊಟ್ಟಳು. ಸರೋಜಸುಂದರಿಯು ಪತ್ರಬರೆಯತೊಡಗಿದಳು.

"ಪ್ರಿಯಭಗಿನಿ!

ನಿನ್ನನ್ನು ಕಾಣುವದಕ್ಕಾಗಿ ನಾನು ಅತ್ಯಾತುರಳಾಗಿರುವೆನು. ನಿನ್ನ ಆಗಮನದಿಂದ ನನಗೆ ಶುಭೋದಯವಾಗುವದು; ಆನಂದೋದಯವಾಗುವದು. ನೀನು ಪರಮಭಾಗ್ಯಶಾಲಿನಿಯಿರುವದರಿಂದಲೆ ನಿನ್ನನ್ನು ಕಾಣುವದಕ್ಕೆ ಹಾತೊರೆಯುತ್ತಿರುವೆನು.

ಸುಭಗೆ, ಸಾಮಾನ್ಯ ಮನೆತನದಲ್ಲಿ ನಿನ್ನಂತಹ ಸ್ತ್ರೀರತ್ನವು ಜನಿಸಿದ್ದನ್ನು ನೋಡಿದರೆ ಸೃಷ್ಟಿಕರ್ತನ ಅಗಾಧ ಲೀಲೆಯು ವ್ಯಕ್ತವಾಗುವದು. ನೀನು ಕೇವಲ ರೂಪಸಂಪನ್ನಳಿಲ್ಲ; ಗುಣಸಂಪನ್ನಳೂ ಆಗಿರುವೆ. ಚಿತೋಡದ ಮಹಾರಾಣಾಜಿಯವರ ಮನಸ್ಸನ್ನು ಸೆಳೆಯುವ ಯೋಗ್ಯತೆಯು ನಿನ್ನಲ್ಲಿದ್ದದ್ದನ್ನು ನೋಡಿ ನಾನು ನಿನ್ನ ಗುಣರೂಪಗಳನ್ನು ಒರೆಗೆ ಹಚ್ಚಿರುವೆನು.

ರತ್ನಹಾರವನ್ನು ಸೆಳೆದುಕೊಂಡವರು ಹೃದಯರತ್ನವನ್ನೂ ಸೆಳೆದುಕೊಳ್ಳದೆ ಇರಲಾರರೆಂದು ನನ್ನ ಮನವರಿಕೆಯಾಗಿತ್ತು. ಅದರಂತೆಯೆ ಕೃತಿಯು ಘಟಿಸಿತು.

ಮಹಾರಾಣಾಜಿಯವರ ಮನಸ್ಸನ್ನು ಸೆಳೆದುಕೊಂಡು ಪ್ರಯಾಗದಂತಹ ದೂರಿನ ಪ್ರದೇಶದಲ್ಲಿ ಕುಳಿತುಕೊಂಡರೆ ಹೇಗೆ? ರಾಜ್ಯಪಾಲನೆಯ ಭಾರವನ್ನು ಹೊತ್ತುಕೊಂಡವರು ಕರ್ತವ್ಯಪರಾಙ್ಮುಖರಾಗಬೇಕೆಂದು ನಿನ್ನ ಇಚ್ಛೆಯಿರುವದಿಲ್ಲವಷ್ಟೆ?

ನಿನ್ನ ಆಗಮನವು ನನಗೆ ಸೌಖ್ಯವನ್ನುಂಟುಮಾಡುವದು. ಮಹಾರಾಜರು ನಿನ್ನನ್ನು ಕುರಿತು ಅಘೋರ ತಪಶ್ಚರ್ಯವನ್ನು ಮಾಡತೊಡಗಿರುವರು. ಅವರ ತಪೋಭಂಗ ಮಾಡಬೇಕೆಂದು ನಾನು ಬಹು ವಿಧವಾಗಿ ಯತ್ನಿಸಿದೆನು. ಸಾಕ್ಷಾತ್ಕಾರವಿಲ್ಲದೆ ಅವರು ಕರ್ತವ್ಯಪರಾಙ್ಮುಖರಾಗುವದಿಲ್ಲ. ದೇವಿ, ನಿನ್ನ ದಿವ್ಯರೂಪಸಂದರ್ಶನದಿಂದ ಕೃತಾರ್ಥರಾಗಬೇಕೆಂಬ ಜನರ ಉತ್ಸುಕತೆಯನ್ನು ಭಂಗಪಡಿಸಬಾರದು. ನಿನ್ನ ಆಗಮನವು ಎಲ್ಲರಿಗೂ ಆನಂದದಾಯಿಯಾಗುವದು.

"ಅರುಣದೇವಿ, ಇಲ್ಲಿಗೆ ಹೇಗೆ ಬರಬೇಕೆಂದು ನೀನು ಯೋಚನೆಗೊಳಗಾಗಿರ

ಬಹುದಲ್ಲವೆ? ನಿನ್ನ ಮನೆಗೆ ನೀನು ಬರಲಿಕ್ಕೆ ಅನುಮಾನಿಸಿಬಾರದು. ಮಹಾರಾಜರ ಪತ್ರವಿಲ್ಲೆಂದು ನನ್ನ ವಿನಂತಿಯನ್ನು ಉಪೇಕ್ಷೆಮಾಡಬಾರದು. ಅವರ ಇಚ್ಛೆಯನ್ನು ಅರಿತು ನಾನು ನಿನಗೆ ಪತ್ರಬರೆದಿರುವೆನು. ಮಹಾರಾಜರ ಆನಂದವೂ ಉತ್ಸಾಹವೂ ನಿನ್ನೊಡನೆ ಬರತಕ್ಕವುಗಳಿರುವದರಿಂದ ನೀನು ಕಾಲವಿಲಂಬ ಮಾಡಬಾರದು.

ಚಿತೋಡದ ಭಾಗ್ಯದೇವತೆ! ಸುಜ್ಞಳಾದ ನಿನಗೆ ಇದಕ್ಕಿಂತ ಹೆಚ್ಚಿಗೆ ಇನ್ನೇನು ಬರೆಯಲಿ?

ನಿನ್ನ ಪ್ರೇಮದ ಭಗಿನಿ,
ಮಹಾರಾಣೀ ಸರೋಜಸುಂದರಿದೇವಿ
ರಾಜಧಾನಿ, ಚಿತೋಡ"

ಪತ್ರ ಬರೆಯುವದಾದ ಮೇಲೆ ಸರೋಜಸುಂದರಿಯು ಅದನ್ನು ಓದಿ ನೋಡಿ, ಲಾವಣ್ಯವತಿಯ ಕೈಯಲ್ಲಿ ಕೊಟ್ಟಳು. ಲಾವಣ್ಯಳು ಆ ಪತ್ರವನ್ನು ಓದಿ ನೋಡಿ- "ದೇವಿ, ಈ ಪತ್ರವನ್ನೋದಿದಕೂಡಲೆ ಅರುಣಕುಮಾರಿಯು ನಿಶ್ಚಯವಾಗಿ ಹೊರಟು ಬರುವಳು. ನೀವು ಅವಳನ್ನು ಎದುರ್ಗೊಳ್ಳುವ ಸಿದ್ಧತೆಯಲ್ಲಿ ತೊಡಗಿರಿ." ಲಾವಣ್ಯವತಿಯು ನಗುತ್ತ ನುಡಿದಳು.

"ಕರೆಯಿಸಿದಮೇಲೆ ಎದುರ್ಗೊಳ್ಳದಿದ್ದರೆ ಹೇಗೆ?"

"ಸಾಪತ್ನಿ ಪ್ರೇಮದ ವಿಲಕ್ಷಣವಾದ ಮಾದರಿಯನ್ನು ಇಂದು ಕಂಡೆನು. ಅರುಣಕುಮಾರಿಯನ್ನು ಕರೆಯಿಸುವದರಿಂದ ಮಹಾರಾಜರಿಗೆ ಮನಶ್ಶಾಂತಿ ಲಭಿಸುವದೆಂದು ನಿಮ್ಮ ತಿಳುವಳಿಕೆಯಿದೆ. ನೀವು ಜಾಲೀ ಬಿತ್ತುವ ಹಂಚಿಕೆ ಹುಡುಕಿರುವಿರೆಂದು ನನಗೆ ಹೊಳೆಯುತ್ತದೆ. ನಿಮ್ಮಮನಸ್ಸನ್ನು ಮುರಿಯುವ ಶಕ್ತಿಯು ನನ್ನಲ್ಲಿಲ್ಲ. ಯಃಕಶ್ಚಿತ್‌ದಾಸಿಯಾದ ನಾನು ಒಣ ಉಸಾಬರಿಯನ್ನು ತೆಗೆದುಕೊಂಡು ಮಾಡುವದೇನು?"

"ಲಾವಣ್ಯ, ಅರುಣಕುಮಾರಿಯು ಬಂದರೆ ಜಾಲೀ ಬಿತ್ತಿದಂತಾಗುವದೆ? ನಿನ್ನ ತಿಳುವಳಿಕೆ ತಪ್ಪಾದದ್ದಿರಬಹುದು. ಮಹಾರಾಜರ ಆಯುಷ್ಯವು ಆನಂದಮಯವಾದರೆ ಕೇಡಾಗುವದೇನು?"

"ಅವರು ಮತ್ತಿಷ್ಟು ವಿಲಾಸಿಗಳಾಗವದಕ್ಕೆ ನೀವು ಸಾಧನ ಸಾಹಿತ್ಯಗಳನ್ನೊದಗಿಸಿ ಕೊಟ್ಟಂತಾಗುವದು."

"ನಿನ್ನ ಊಹೆಯು ತಪ್ಪಾದದ್ದಿರುವದು. ಮಹಾರಾಜರು ಅರುಣಕುಮಾರಿಯ ಧ್ಯಾನದಲ್ಲಿ ತೊಡಗಿ ಭ್ರಮಿಷ್ಟರಾದಂತಾಗಿರುವರು. ನಾವು ಅವರ ಮನಸ್ಸನ್ನು ಸಂತುಷ್ಟಗೊಳಿಸಿದರೆ, ತಾವಾಗಿ ಕರ್ತವ್ಯದಲ್ಲಿ ತೊಡಗುವರು. ಅರುಣಕುಮಾರಿಯ ಆಗಮನವು ಎಲ್ಲ ರೀತಿಯಿಂದಲೂ ಹಿತಾವಹವಾಗುವಂತಿದೆ"

"ಪರಿಣಾಮಾಂತ್ಯದಲ್ಲಿ ಎಲ್ಲ ಸಂಗತಿಗಳು ತಿಳಿಯುವವು" ಎಂದು ಲಾವಣ್ಯವತಿಯು ನುಡಿದು-"ದೇವಿ, ನಾನು ನಾಳೆ ಮುಂಜಾನೆ ಪ್ರಯಾಗಕ್ಕೆ ಹೊರಡುವೆನು.

ನಾಲ್ಕು ಜನ ಅಂಗರಕ್ಷಕರು ದೊರೆತರೆ ಒಳಿತಾಗುವದು."

"ನಿನ್ನ ಸಂಗಡ ನಾಲ್ಕೆಂಟುಜನ ಸೈನಿಕರನ್ನು ಕಳುಹಿಸುವದಕ್ಕಾಗಿ ಸೇನಾಪತಿಗೆ ಆಜ್ಞಾಪತ್ರ ಕಳುಹಿಸುವೆನು."

ಲಾವಣ್ಯವತಿಯು ಸರೋಜಸುಂದರಿಯ ಆಜ್ಞೆಹೊಂದಿ ಅರಮನೆಯಿಂದ ಹೊರಟಳು. ಅವಳು ಹೋದ ಮೇಲೆ ಮಹಾರಾಣಿಯು ನಾನಾ ವಿಧವಾದ ಆಲೋಚನೆಗೊಳಗಾದಳು. 'ಅರುಣಕುಮಾರಿಯು ಬಂದ ಮೇಲೆ ಮಹಾರಾಜರ ಮನಸ್ಸು ಸಂತುಷ್ಟವಾಗಬಹುದೇನು? ಅವರು ಮೊದಲಿನಂತೆ ರಾಜಕಾರಣದಲ್ಲಿ ಮನಸ್ಸು ಹಾಕಬಹುದೇನು? ಅರುಣಕುಮಾರಿಯು ಗುಣಾಢ್ಯಳಿರಬಹುದೆ? ಅವಳು ಮಹಾರಾಜರನ್ನು ಕರ್ತವ್ಯನಿರತರನ್ನಾಗ ಮಾಡಬಹುದೆ? ಲಾವಣ್ಯವತಿಯು ಹೇಳಿದಂತೆ ಅರುಣಕುಮಾರಿಯನ್ನು ಕರೆಯಿಸುವದೆಂದರೆ, ಜಾಲೀ ಬಿತ್ತುವ ಹಂಚಿಕೆಯಾದಂತಾಗಬಹುದೇನು? ರೂಪಾಂಧರಾದ ಮಹಾರಾಜರು ಅರುಣಕುಮಾರಿಯು ಬಂದ ಮೇಲೆ ಮತ್ತಿಷ್ಟು ವಿಷಯಪಂಕದಲ್ಲಿ ಸಿಲುಕಿಕೊಳ್ಳಬಹುದೇನು? ಆದದ್ದಾಗಲಿ! ನಾನಂತು ಸದ್ಭಾವನೆಯಿಂದಲೆ ಅರುಣಳನ್ನು ಕರೆಯಿಸುವ ಸಾಹಸ ಮಾಡಿರುವೆನು' ಮೊದಲಾದ ವಿಚಾರಗಳನ್ನು ಮಾಡುತ್ತ ಮಹಾರಾಣಿಯು ಮಂತ್ರಣಾಗಾರದಿಂದ ಹೊರಬಿದ್ದು ತನ್ನ ಪ್ರಮೋದಭುವನಕ್ಕೆ ಬಂದಳು.

---

## ಸಂಕಟ ನಿವಾರಣೆ.

ಲಾವಣ್ಯವತಿಯು ಮಹಾರಾಣೀ ಸರೋಜಸುಂದರಿಯ ಅಪ್ಪಣೆ ಹೊಂದಿ, ಅಂಗರಕ್ಷಕರೊಡನೆ ಚಿತೋಡ ರಾಜಧಾನಿಯಿಂದ ಪ್ರಯಾಗಕ್ಕೆ ತೆರಳಿದಳು. ವಸತಿಯ ಮೇಲೆ ವಸತಿ ಮಾಡುತ್ತ ಅವಳು ಯಮುನಾ ತೀರವನ್ನು ತಲುಪಿದಳು. ಅಲ್ಲಿಗೆ ಪ್ರಯಾಗವು ಒಂದು ದಿನದ ದಾರಿಯಲ್ಲಿತ್ತು.

ಲಾವಣ್ಯವತಿಯು ಇಳಿದುಕೊಂಡ ಸ್ಥಳವೆಂದರೆ ಅದು ನಿಬಿಡವಾದ ಕಾನನವೇ ಆಗಿತ್ತು. ಅಲ್ಲಿಂದ ಬಹು: ದೂರದವರೆಗೆ ಅರಣ್ಯದಲ್ಲಿಯೇ ಹೋಗಬೇಕಾಗುತ್ತಿತ್ತು. ಅಲ್ಲಿ ಎರಡು ದಾರಿಗಳು ಒಡೆದಿದ್ದು, ಪ್ರಯಾಗಕ್ಕೆ ಹೋಗುವ ದಾರಿಯು ಯಾವದೆಂಬದು ಅವಳ ಅನುಚರರಿಗೆ ಗೊತ್ತಿರಲ್ಲಿಲ್ಲ. ಯಾರಾದರೂ ಬರ-ಹೋಗುವ ಜನರನ್ನು ನೋಡುತ್ತ ಆ ಸೇವಕರು ಕುಳಿತಿದ್ದಳು. ಲಾವಣ್ಯವತಿಯು ತಾನು ಕುಳಿತ ಮೇಣೆಯ ತೆರೆಯನ್ನು ಓರೆ ಮಾಡಿ ಆಗಂತುಕರಾರಾದರೂ ಬರಬಹುದೆಂದು ನಿರೀಕ್ಷಿಸ ತೊಡಗಿದ್ದಳು. ಅಷ್ಟರಲ್ಲಿ ಒಬ್ಬ ಮನುಷ್ಯನು ಅಲ್ಲಿಗೆ ಬಂದನು. ಅವನು ಪ್ರಾಯದವನಿದ್ದು, ಸುಂದರನೂ ಬಲವಂತನೂ ಆಗಿದ್ದನು. ಅವನು ಭಗವೀವಸ್ತ್ರ ಪರಿಧಾನ ಮಾಡಿದ್ದರಿಂದ ಅವನನ್ನು ಸಾಧುಪುರುಷನೆಂದು ಯಾರಾದರೂ ಗ್ರಹಿಸುತ್ತಿ

ದ್ದರು. ಯತಿಯು ಬಂದದ್ದು ನೋಡಿ ಲಾವಣ್ಯವತಿಯ ಅನುಚರರಿಗೆ ಸಂತೋಷವಾಯಿತು. ಅವನಿಂದ ಪ್ರಯಾಗದ ಮಾರ್ಗವು ತಿಳಿಯಬಹುದೆಂದು ಒಬ್ಬ ಅನುಚರನು ಅವನನ್ನು ಕುರಿತು—"ಸಾಧುಮಹಾರಾಜರೇ, ತಾವು ಯಾವ ಊರಿಂದ ಬಂದಿರಿ?"

"ಮಥುರೆಯಿಂದ." ಎಂದು ಸಾಧುವು ಹೇಳಿದನು.

"ಮುಂದೆ ಯಾವ ಊರಿಗೆ ಹೋಗುವಿರಿ?"

"ವೃಂದಾವನಕ್ಕೆ."

"ಮಾರ್ಗದಲ್ಲಿ ಹೊತ್ತು ಮುಳುಗಿದರೆ ಹೇಗೆ ಮಾಡುವಿರಿ?"

"ಸಾಧು-ಸಂತರಾದ ನಾವು ಎಲ್ಲಿ ಬೇಕಾದಲ್ಲಿ ಇಳಿಯುವೆವು."

'ಅರಣ್ಯದಲ್ಲಿ ಸಿಂಹ-ಶಾರ್ದೂಲಗಳ ಭಕ್ಷ್ಯಸ್ಥಾನಕ್ಕೆ ನೀವು ಈಡಾದರೆ ಹೇಗೆ?'

'ನನ್ನ ಸಲುವಾಗಿ ಅಳುವವರು ಯಾರೂ ಇಲ್ಲ. ಈ ದೇಹವು ಸಿಂಹ-ವ್ಯಾಘ್ರಾದಿಗಳ ಭಕ್ಷ್ಯಸ್ಥಾನಕ್ಕೆ ಈಡಾದರೆ ಒಂದು ಬಗೆಯ ಸಾರ್ಥಕವೇ ಆದಂತಾಗುವುದು.'

ಸೇವಕನು ತನಗೆ ಸಂಬಂಧಿಸಿದ ಗೊತ್ತುವಳಿ ಹೊಂದುವದನ್ನು ಬಿಟ್ಟು ಇಲ್ಲದ ಸುದ್ದಿಯನ್ನು ಕೇಳುತ್ತ ನಿಂತದ್ದು ನೋಡಿ ಲಾವಣ್ಯವತಿಗೆ ಸಿಟ್ಟು ಬಂದಿತು. ಆಗ ಅವಳು ಸೇವಕನನ್ನು ಕುರಿತು—"ನೀನು ಒಣ ಉಸಾಬರಿ ತೆಗೆದುಕೊಂಡು ಮಾಡುವದೇನು?" ಎಂದು ನುಡಿದು, ಮೇಣೆ ಬಿಟ್ಟು ಹೊರಗೆ ಬಂದು ಸಾಧುವಿಗೆ ಅಭಿವಂದಿಸಿ—

"ಮಹಾಶಯರೇ, ನಾವು ಪ್ರಯಾಗಕ್ಕೆ ಹೋಗಬೇಕಾಗಿದೆ ಇಲ್ಲಿಂದ ಆ ಪಟ್ಟಣವು ಎಷ್ಟು ದೂರವಿರುವದು? ಅಲ್ಲಿಗೆ ಹೋಗುವ ಹಾದಿ ಯಾವದು? ಈ ಅರಣ್ಯವು ಇನ್ನು ಎಷ್ಟುದೂರವಿರುವದು? ಈ ವಿಷಯವಾಗಿ ಗೊತ್ತುವಳಿ ಹೇಳಿದರೆ ನಾನು ತಮಗೆ ಋಣಿಯಾಗುವೆನು."

ಕೋಕಿಲೆಗಿಂತಲೂ ಮೃದುವಾದ ಧ್ವನಿಯಿಂದ ಮಾತಾಡಿ, ಮರ್ಯಾದೆಯಿಂದ ಅವನತ ಮುಖಿಯಾಗಿ ನಿಂತ ಲಾವಣ್ಯವಲ್ಲರಿಯಾದ ಲಾವಣ್ಯವತಿಯನ್ನು ನೋಡಿ, ಸಾಧುವು ಪ್ರಸನ್ನಮನಸ್ಕನಾದನು. ಅವಳು ರಾಜಮನೆತನದ ಒಬ್ಬ ಯುವತಿಯಿರಬಹುದೆಂದು ಅವನ ಭಾವನೆಯಾಯಿತು. ಆಗ ಅವನು—"ಪ್ರಯಾಗವು ಇಲ್ಲಿಂದ ಹತ್ತುಕ್ರೋಶದ ಮೇಲಿರುವದು. ಬಲಗಡೆಯ ಮಾರ್ಗವನ್ನು ಹಿಡಿದು ಹೋದರೆ ಆ ಪಟ್ಟಣವು ಸ್ವಲ್ಪ ಸಮೀಪವಾಗುತ್ತಿದ್ದರೂ, ಅದು ಬಹಳ ಕೆಟ್ಟ ದಾರಿಯು. ಈ ಹಾದಿಗೆ ಸುಲಿಗಾರರ ಉಪದ್ರವ ಬಹಳ. ನೀವು ಎಡಗಡೆಯ ಹಾದಿಯನ್ನು ಹಿಡಿದುಹೋಗಿರಿ. ನಾಲ್ಕೈದು ಕ್ರೋಶಹೋದ ಮೇಲೆ ನಿಮಗೆ ಬೈಲು ನಾಡು ಹತ್ತುವದು. ನೀವು ವಸತಿ ಮಾಡಬೇಕಾದರೆ ಅಡವಿಯನ್ನು ದಾಟಿದಕೂಡಲೆ ಹತ್ತುವ ಹಳ್ಳಿಯಲ್ಲಿ ಇಳಿಯಿರಿ. ಅಲ್ಲಿ ಒಂದು ಛತ್ರವಿರುವದು. ಅಲ್ಲಿ ನಿಮಗೆ ಎಲ್ಲ ಬಗೆಯ ಸೌಕರ್ಯಗಳೊದಗುವವು."

"ಮಹಾಶಯರೆ, ತಮ್ಮಿಂದ ಬಹಳೇ ಉಪಕಾರವಾಯಿತು. ಈ ವೇಳೆಯಲ್ಲಿ ನಿಮ್ಮ ಆಗಮನವಾಗದಿದ್ದರೆ ಬಹಳೇ ತೊಂದರೆಯಲ್ಲಿ ಬೀಳುತ್ತಿದ್ದೆವು."

"ಯುವತಿ, ಇದರಲ್ಲಿ ಉಪಕಾರವೇನು? ತಿಳಿದಮಟ್ಟಿಗೆ ಗೊತ್ತ್ತುವಳಿ ಕೊಟ್ಟರೆ ನನಗೆ ಆದ ಶ್ರಮವೇನು?"

"ತಾವು ವೃಂದಾವನಕ್ಕೆ ಪ್ರಯಾಣ ಮಾಡುವವರಿರುವಿರೇನು?

"ಹೌದು."

"ಮಹಾತ್ಮರೆ, ಅಡ್ಡಿಯಿಲ್ಲದಿದ್ದರೆ ನಿಮ್ಮನ್ನು ಒಂದು ಸಂಗತಿಯ ಬಗ್ಗೆ ಕೇಳಬೇಕೆಂದು ಮನಸ್ಸಿನಲ್ಲಿ ಬಂದಿದೆ."

"ಅವಶ್ಯವಾಗಿ ಕೇಳಬಹುದು."

"ನೀವು ಇಂತಹ ಏರಿಕೆಯ ತಾರುಣ್ಯದಲ್ಲಿ ಸಂಸಾರ ಪರಿತ್ಯಾಗ ಮಾಡಿದ ಉದ್ದೇಶವೇನು?"

"ತರುಣಿ, ಈ ವಿಷಯವನ್ನು ತೆಗೆದುಕೊಂಡು ನೀನು ಮಾಡುವದೇನು?"

"ಮಹಾಶಯರೆ, ಕ್ಷಮಿಸಿರಿ. ಸಂಬಂಧವಿಲ್ಲದ ವಿಷಯವನ್ನು ಕೇಳಿದೆನೆಂದು ಸಿಟ್ಟಾಗಬಾರದು. ಅನುಪಮ ತಾರುಣ್ಯ, ಸೌಂದರ್ಯ ಮೊದಲಾದವುಗಳು ಅನುಕೂಲವಿರುವಾಗ, ಮನುಷ್ಯನಿಗೆ ಸಂಸಾರದಲ್ಲಿ ವಿರತಿಯು ಹುಟ್ಟುವದು ಕಠಿಣವೆಂದು ಜ್ಞಾನಿಗಳು ಹೇಳುತ್ತಿರುವದನ್ನು ಕೇಳಿದ್ದೆನು. ಅಂತೆಯೆ, ನಾನು ನಿಮ್ಮ ಸಂನ್ಯಾಸದ ವಿಷಯದಲ್ಲಿ ಸಂದೇಹಗೊಂಡು ಕೇಳಿದೆನು. ಆಕಸ್ಮಿಕ ಕಾರಣಗಳಿಂದ ಕೆಲವರು ಸಂನ್ಯಾಸವನ್ನು ತೆಗೆದುಕೊಳ್ಳುತ್ತಿರುತ್ತಾರೆ."

"ಆಕಸ್ಮಿಕ ಕಾರಣಗಳಾವವು ಘಟಿಸುತ್ತಿರುತ್ತವೆ?"

"ಪ್ರಣಯಿನಿಯು ವಿಶ್ವಾಸಘಾತ ಮಾಡಿದರೆ; ಕೈಗೆ ಬಂದ ತುತ್ತು ಬಾಯಿಗೆ ಬರದಂತಾದರೆ; ಬೇಟೆಯು ಬಲೆಯಲ್ಲಿ ಸಿಲುಕದಿದ್ದರೆ, ಇನ್ನೂ ಅನೇಕ ಕಾರಣಗಳಿರಬಹುದು. ಪ್ರಣಯ ಪಾಠಗಳನ್ನು ಚನ್ನಾಗಿ ಅಭ್ಯಾಸಿಸಿದ ಪ್ರಣಯಪಟುಗಳಿಗೆ ಆವೆಲ್ಲ ಕಾರಣಗಳು ಚನ್ನಾಗಿ ತಿಳಿದಿರುತ್ತವೆ. ನಾನು ಪ್ರಣಯಪ್ರಕರಣದಲ್ಲಿ ತೀರ ಅಜ್ಞಳಿರುವೆನು. ಕೇಳಿಕೆಯ ಬಲದಿಂದ ಗೊತ್ತಿದ್ದ ಪ್ರಕಾರಗಳನ್ನು ತಿಳಿಸಿರುವೆನು."

ಯತಿಯು ಆ ಪ್ರಮದೆಯ ಮುಖವನ್ನು ಸೂಕ್ಷ್ಮದೃಷ್ಟಿಯಿಂದ ನಿರೀಕ್ಷಿಸಿದನು ಅವನ ದೃಷ್ಟಿಕ್ಷೇಪದಲ್ಲಿ ವಿಶಿಷ್ಟಪ್ರಕಾರದ ಶಕ್ತಿಯಿತ್ತು. ಲಾವಣ್ಯವತಿಯು ಆ ಶಕ್ತಿಯ ಪ್ರಭಾವವನ್ನು ಗುರುತಿಸಿದಳು. ಆಗ ಅವಳು ಮಂದಹಾಸದಿಂದ—"ಮಹಾಶಯರೆ, ನಾನು ಎಷ್ಟೋ ಸಾಧು-ಸಂತರನ್ನು ಕಂಡಿರುವೆನು; ಆದರೆ ನನ್ನ ಚಿತ್ತವನ್ನು ಯಾರೂ ಆಕರ್ಷಿಸಿದ್ದಿಲ್ಲ. ನಿಮ್ಮಲ್ಲಿಯ ಆಕರ್ಷಕಗುಣವು ವರ್ಣನೀಯವಿರುವದು."

ಲಾವಣ್ಯವತಿಯು ಹೀಗೆ ನುಡಿಯುವಷ್ಟರಲ್ಲಿ ತುಬಾಕಿಯ ಸಪ್ಪಳವು ಕೇಳ

ಬಂತು. ಆಗ ಸಾಧುವು—“ಇಲ್ಲಿ ಸುಲಿಗೆಗಾರರ ಹಾವಳಿ ಬಹಳ. ನೀವು ಇಷ್ಟು ವೇಳೆಯನ್ನು ಇಲ್ಲಿ ಕಳೆಯುತಕ್ಕದ್ದಿದ್ದಿಲ್ಲ.” ಎಂದು ನಡಿದು, ಮಿಂಚಿನಂತೆ ಸಾಗಿ ಗಿಡಗಳ ಗುಂಪಿನಲ್ಲಿ ಅಡಗಿಕೊಂಡನು.

ಲಾವಣ್ಯವತಿಯು ಗಾಬರಿಯಾದಳು. ಅವಳ ಅಂಗರಕ್ಷಕರು ಅಳ್ಕೊಡೆಯದೆ ಶಸ್ತ್ರಾಸ್ತ್ರಗಳನ್ನು ಹೊರಗೆ ತೆಗೆದು ಯುದ್ಧಕ್ಕೆ ಸಿದ್ಧರಾಗಿ ನಿಂತರು. ಅಷ್ಟರಲ್ಲಿ ಹತ್ತಿಪ್ಪತ್ತು ಜನ ಸುಲಿಗೆಗಾರರು ಅಲ್ಲಿಗೆ ಬಂದು, ರಜಪುತ ಸೈನಿಕರ ಮೇಲೆ ಬಿದ್ದರು. ಸುಮಾರು ಒಂದು ಗಳಿಗೆಯ ವರೆಗೆ ಯುದ್ಧವು ನಡೆಯಿತು. ಲಾವಣ್ಯವತಿಯ ಅಂಗರಕ್ಷಕರೂ, ಬೋವಿಗಳೂ ಮೃತಪಟ್ಟರು. ಸುಲಿಗೆಗಾರರಲ್ಲಿಯೂ ಕೆಲವರು ಮರಣಹೊಂದಿದರು. ಉಳಿದವರು ಲಾವಣ್ಯವತಿಯನ್ನು ಮೇಣೆಯಲ್ಲಿ ಹಾಕಿಕೊಂಡು ಅಲ್ಲಿಂದ ನಡೆದರು. ಇವೆಲ್ಲ ಅನರ್ಥಗಳನ್ನು ನೋಡಿ ಲಾವಣ್ಯವತಿಯು ಅಂಜಿ ಚಿಟ್ಟನೆ ಚೀರಿಡಳು. ಈ ಕೂಗಾಟವನ್ನು ಕೇಳಿದ ಕೂಡಲೆ ತರುಣಸಂನ್ಯಾಸಿಯು ಗಿಡದ ಗುಂಪಿನೊಳಗಿಂದ ಹೊರಬಿದ್ದು, ರಜಪುತ ಸೈನಿಕರಲ್ಲೊಬ್ಬನ ಕುದುರೆಯನ್ನೂ ಖಡ್ಗವನ್ನೂ ತೆಗೆದುಕೊಂಡು ಸುಲಿಗೆಗಾರರ ಬೆನ್ನುಹತ್ತಿದನು. ಸ್ವಲ್ಪ ವೇಳೆಯಲ್ಲಿ ಅವನು ಸುಲಿಗೆಗಾರರನ್ನು ಸಮೀಪಿಸಿದನು. ಅನಂತರದಲ್ಲಿ ಆವನು ತಾರಸ್ವರದಿಂದ:—“ದುಷ್ಟರೇ, ನಿಲ್ಲಿರಿ! ಎತ್ತ ಹೋಗುವಿರಿ? ನಿರಾಧಾರಿಯಾದ ಒಬ್ಬ ಅಬಲೆಯನ್ನು ತೆಗೆದುಕೊಂಡು ಹೋಗಲಿಕ್ಕೆ ನಿಮಗೆ ನಾಚಿಕೆ ಬರುವದಿಲ್ಲವೆ?”

ಸುಲಿಗೆಗಾರರು ತಿರುಗಿ ನೋಡಿದರು. ಒಬ್ಬ ಸಂನ್ಯಾಸಿಯು ಅಶ್ವಾರೋಹಿಯಾಗಿ ಧಾವಿಸಿ ಬರುವದನ್ನು ನೋಡಿ ಅವರು ಅಲ್ಲಿಯೆ ನಿಂತರು. ತರುಣ ಸಂನ್ಯಾಸಿಯು ಖಡ್ಗವನ್ನು ತಿರುವುತ್ತ ಸುಲಿಗಾರರ ಗುಂಪಿನಲ್ಲಿ ಹೊಕ್ಕನು. ಕೆಲವು ವೇಳೆಯ ವರೆಗೆ ಸಂನ್ಯಾಸಿಗೂ ಸುಲಿಗೆಗಾರರಿಗೂ ತುಮುಲವಾದ ಕಾಳಗವು ನಡೆಯಿತು. ಸಂನ್ಯಾಸಿಯ ಖಡ್ಗಪಟುತೆಯನ್ನು ನೋಡಿ ಸುಲಿಗೆಗಾರರು ದಂಗುಬಡೆದರು. ತನ್ನ ಶೀಲ-ಮಾನಗಳನ್ನು ರಕ್ಷಿಸುವದಕ್ಕಾಗಿ ಬಂದ ಸಂನ್ಯಾಸಿಯನ್ನು ಲಾವಣ್ಯವತಿಯು ಕೃತಜ್ಞತೆಯಿಂದ ನೋಡುತ್ತ ಆನಂದಭರಿತಳಾಗಿ ದೂರದಲ್ಲಿ ನಿಂತಿದ್ದಳು. ಯುದ್ಧವು ಒಳ್ಳೆಯ ನಿಕರಕ್ಕೆ ಬಂದಿತು. ಸಂನ್ಯಾಸಿಯು ದೇಹದ ಪರಿವೆಯಿಲ್ಲದೆ ಕಾದತೊಡಗಿದ್ದನು. ಒಬ್ಬನೇ ಹತ್ತು-ಹದಿನೈದು ಜನ ಸುಲಿಗೆಗಾರರಿಗೆ ಈಡಾಗುವ ಲಕ್ಷಣ ತೋರಲಿಲ್ಲ. ಅವನ ದೇಹದಲ್ಲಿ ಅನೇಕ ಗಾಯುಗಳಾದ್ದರಿಂದ ಬರಬರುತ್ತ ಅವನು ಬಲಹೀನನಾಗಹತ್ತಿದನು. ಅಷ್ಟರಲ್ಲಿ ಒಬ್ಬ ಸುಲಿಗೆಗಾರನು ಹಿಂದೆ ಬಂದು ಆ ಸಂನ್ಯಾಸಿಯ ಮೇಲೆ ಖಡ್ಗಪ್ರಹಾರ ಮಾಡಿದನು. ಕೂಡಲೆ ಅವನು ಕುದುರೆಯ ಮೇಲಿಂದ ಭೂಮಿಗೆ ಬಿದ್ದು ಮೂರ್ಛಿತನಾದನು! ಲಾವಣ್ಯವತಿಯು ಈಗ ಚೆನ್ನಾಗಿ ನಿರಾಶೆಗೊಂಡಳು. ಇನ್ನು ತನ್ನ ಪರಿಣಾಮವು ಒಳಿತಾಗಲಾರದೆಂದು ಅವಳು ಮುಕ್ತಕಂಠದಿಂದ ರೋದಿಸತೊಡಗಿದಳು. ಆಗ ಸುಲಿಗೆಗಾರರ ನಾಯಕನು ಅಲ್ಲಿಗೆ ಬಂದು—“ಏ ಪೋರಿ! ನಡೆ, ಮೇಣೆಯಲ್ಲಿ ಕುಳಿತುಕೊ. ನೀನು ಇನ್ನು ಮೇಲೆ

ನನ್ನ ಕೈಯೊಳಗಿಂದ ಪಾರಾಗಲಾರೆ. ನಾನು ಸುಲಿಗೆಗಾರರ ನಾಯಕನಿರುವೆನು. ನನ್ನಲ್ಲಿ ಸಿರಿಸಂಪತ್ತಿಗೇನೂ ಕೊರತೆಯಿಲ್ಲ. ನನ್ನ ರತ್ನಾಗಾರದಲ್ಲಿ ನಿನ್ನಂತಹ ರಮಣೀರತ್ನವೊಂದಿದ್ದಿಲ್ಲ. ಈ ನ್ಯೂನತೆಯು ಪರಮಾತ್ಮನ ಅನುಗ್ರಹದಿಂದ ಇಂದು ದೂರಾಯಿತು. ಏಳು, ಬೇಗನೆ ಮೇಣೆಯನ್ನಾರೋಹಿಸು."

"ಧನವಂತನೆ, ನನ್ನಲ್ಲಿಯ ಎಲ್ಲ ಅಲಂಕಾರಗಳನ್ನು ತೆಗೆದು ಕೊಡುವೆನು ಇವುಗಳನ್ನು ತೆಗೆದುಕೊಂಡು ಹೊರಟು ಹೋಗು."

"ನನಗೆ ನಿನ್ನ ಅಲಂಕಾರಗಳೇನೂ ಬೇಕಾಗಿಲ್ಲ. ನೀನೇ ನನ್ನ ಮನೆಯನ್ನು ಅಲಂಕರಿಸಬೇಕಾಗಿರುವದರಿಂದ ಇಷ್ಟು ಸಾಹಸ ಮಾಡಿದೆನು."

"ಚಾಂಡಾಲಾ! ಇಲ್ಲಿಂದ ಸುಮ್ಮನೆ ಹೊರಟು ಹೋಗು! ಈ ದೇಹದಲ್ಲಿ ಪ್ರಾಣಸಂಚಾರವಾಗಿರುವ ವರೆಗೆ ನನ್ನ ಮೈಗೆ ಕೈ ಹಚ್ಚುವ ಯೋಗ್ಯತೆಯು ಯಾ-ವನದಿರುವದು?"

"ಅಬ್ಬಾ! ಒಳ್ಳೇ ದರ್ಪವಿದು!" ಎಂದು ಸುಲಿಗೆಗಾರರ ನಾಯಕನು ನುಡಿದು, ತನ್ನ ಅನುಚರರನ್ನು ಕುರಿತು:—"ಏನು ನೋಡುವಿರೊ? ಇವಳನ್ನು ಬಂಧಿಸಿ ಮೇಣೆಯಲ್ಲಿ ಹಾಕಿರಿ!"

ಲಾವಣ್ಯವತಿಯು ಬಚ್ಚಿಟ್ಟಿದ್ದ ಕಠಾರಿಯನ್ನು ಬೈಲಿಗೆ ತೆಗೆದು—"ಇದು ನನ್ನ ಧರ್ಮವನ್ನೂ ಮಾನವನ್ನೂ ರಕ್ಷಿಸಲಿಕ್ಕೆ ಸಮರ್ಥವಿರುವದು!"

ಲಾವಣ್ಯವತಿಯು ಹೀಗೆ ನುಡಿಯುವಷ್ಟರಲ್ಲಿ ಕುದುರೆಗಳ ಖುರಪುಟ ಧ್ವ-ನಿಯು ಕೇಳಬರತೊಡಗಿತು. ಕಣ್ಣು ಮುಚ್ಚಿ ತೆಗೆಯುವಷ್ಟರಲ್ಲಿ ಹತ್ತಿಪ್ಪತ್ತು ಜನ ರಜಪುತರು ಶಸ್ತ್ರಧಾರಿಗಳಾಗಿ ಅಲ್ಲಿಗೆ ಬಂದರು. ಕೂಡಲೆ ಸುಲಿಗೆಗಾರರು ಆ ರಜಪುತರ ಮೇಲೆ ಬಿದ್ದರು. ರಜಪುತರ ಮುಂದೆ ಸುಲಿಗೆಗಾರರ ಆಟ ನಡೆಯಲಿಲ್ಲ. ಸ್ವಲ್ಪ ವೇಳೆಯಲ್ಲಿ ಅವರೆಲ್ಲರೂ ಗತಾಸುಗಳಾಗಿ ಭೂಮಿಗೆ ಬಿದ್ದರು. ಅನಂತರದಲ್ಲಿ ರಜಪುತರ ತಂಡದ ನಾಯಕನು ಲಾವಣ್ಯವತಿಯ ಬಳಿಗೆ ಬಂದು—"ಅಮ್ಮಾ, ನೀವು ನಿರ್ಭಯರಾಗಿರಿ." ಎಂದು ಅಭಯಕೊಟ್ಟನು.

ರಜಪುತ ತಂಡದ ನಾಯಕನು ತರುಣನಿದ್ದನು. ಅವನ ಮುಖವು ಒಳ್ಳೆಯ ಕಾಂತಿಯುಳ್ಳದ್ದಿತ್ತು. ಸಮರಶ್ರಾಂತನಾದ ಅವನ ಮುಖಮಂಡಲದ ಮೇಲೆ ಘರ್ಮಬಿಂದುಗಳು ಮೌಕ್ತಿಕದಂತೆ ಹೊಳೆಯತೊಡಗಿದ್ದವು. ತೇಜಸ್ವಿಯಾದ ರಜಪುತ ತರುಣನನ್ನು ಲಾವಣ್ಯವತಿಯು ಸಹಾನುಭೂತಿಯಿಂದ ನೋಡತೊಡಗಿದಳು. ಕೆಲವು ವೇಳೆಯ ಮೇಲೆ ಅವಳು ಕೃತಜ್ಞತೆಯಿಂದ—"ಮಹಾನುಭಾವರೆ, ನೀವು ಈ ವೇಳೆಯಲ್ಲಿ ಬಾರದಿದ್ದರೆ ನನ್ನ ಪಾವಿತ್ರ್ಯವು ನಾಶವಾಗಿ ಹೋಗುತ್ತಿತ್ತು. ನನ್ನನ್ನು ಗಂಡಾಂತರದಿಂದ ಮುಕ್ತಮಾಡಿದವರಾದ ನೀವು ನನಗೆ ದೇವತಾಸ್ವರೂಪಿಗಳಾ-ಗಿರುವಿರಿ."

"ಯುವತಿ, ನೀನು ಉಚ್ಚಕುಲೋತ್ಪನ್ನಳಂತೆ ತೋರುವೆ. ನೀನು ಯಾರು?

ಎಲ್ಲಿಗೆ ಹೋಗಬೇಕಾಗಿದೆ? ಸುಲಿಗೆಗಾರರ ನಿವಾಸಸ್ಥಳವಾದ ಇಲ್ಲಿಗೆ ಬಂದ ಕಾರಣ ವೇನು?''

"ನಾನು ನನ್ನ ಸಂಗತಿಯನ್ನು ಹಿಂದಿನಿಂದ ತಿಳಿಸುವೆನು. ಒಬ್ಬ ತರುಣ ಸಂನ್ಯಾಸಿಯು ನೀವು ಬರುವದಕ್ಕಿಂತ ಮುಂಚಿತವಾಗಿ ಸುಲಿಗೆಗಾರರೊಡನೆ ಕಾದಿ ಮೂರ್ಛೆಗೊಂಡು ಬಿದ್ದಿರುವನು. ನಡೆಯಿರಿ, ಮೊದಲು ಆವನ ಅವಸ್ಥೆಯೇನಾಗಿರು ವದೋ ನೋಡೋಣ."

ಲಾವಣ್ಯವತಿಯು ತರುಣ ರಜಪುತ ಸರದಾರರನ್ನು ಸಂಗಡ ಕರೆದುಕೊಂಡು ಸಂನ್ಯಾಸಿಯು ಬಿದ್ದ ಸ್ಥಳಕ್ಕೆ ಬಂದಳು. ತರುಣ ರಜಪುತನು ತನ್ನ ಅನುಯಾಯಿ ಗಳ ಸಹಾಯದಿಂದ ಅಸಾವಧ ಸ್ಥಿತಿಯಲ್ಲಿ ಬಿದ್ದ ಸಂನ್ಯಾಸಿಯನ್ನು ಉಪಚರಿಸ ತೊಡಗಿದನು. ಲಾವಣ್ಯವತಿಯಾದರೂ ಸ್ವಕೀಯ ಭಾವನೆಗಳಿಂದ ಅವನನ್ನು ಉಪಚರಿಸತೊಡಗಿದ್ದಳು. ತರುಣ ರಜಪುತನು ಸಂನ್ಯಾಸಿಯ ಗಾಯ ಕಟ್ಟುತ್ತಿರು ವಾಗ ಆವನ ಮುಖವನ್ನು ಒಂದೇ ಸವನೇ ನೋಡತೊಡಗಿದ್ದನು. ಕೆಲವು ವೇಳೆಯ ಮೇಲೆ ಅವನು ಲಾವಣ್ಯವತಿಯನ್ನು ಕುರಿತು—"ಸುಂದರಿ, ಈ ಸಂನ್ಯಾಸಿಯ ವಿಷ ಯವಾಗಿ ನಿನ್ನ ಅಭಿಪ್ರಾಯವೇನು?"

"ಇವನು ನಿಜವಾದ ಸಂನ್ಯಾಸಿಯಲ್ಲ; ಪಾರ್ಥಸಂನ್ಯಾಸಿಯು! ಇವನು ಯಾವದೋ ಒಂದು ಉದ್ದೇಶದಿಂದ ಕಾಷಾಯ ವಸ್ತ್ರಧರಿಸಿರುವಂತೆ ತೋರುವದು. ಪ್ರಣಯಭಂಗ ಹೊಂದಿದ ತರುಣರ ಅವಸ್ಥೆಯು ಒಮ್ಮೊಮ್ಮೆ ಹೀಗಾಗುವದುಂಟು. ಇವನು ನಿಜವಾದ ಸಂನ್ಯಾಸಿಯಲ್ಲವೆಂಬದನ್ನು ನಾನು ಮೊದಲೇ ಗುರುತಿಸಿರುವೆನು. ನಿಜವಾದ ಸಂನ್ಯಾಸಿಯು ಶಸ್ತ್ರಾಸ್ತ್ರ ವಿದ್ಯೆಯಲ್ಲಿ ಪಾರಂಗತನಾಗುವ ಬಗೆ ಹೇಗೆ!"

"ನಿನ್ನಂತೆಯೆ ನಾನೂ ತರ್ಕಿಸಿರುವೆನು. ಇವನು ನಿಜವಾಗಿಯೂ ಪ್ರಣಯ ಭಂಗ ಹೊಂದಿದ ತರುಣನು."

ರಜಪುತ ಸರದಾರನು ಹೀಗೆ ನುಡಿಯುತ್ತಿರಲು, ತರುಣ ಸಂನ್ಯಾಸಿಯು ಮೂರ್ಛೆತಿಳಿದು ಕಣ್ಣು ತೆರೆದನು. ಸಾವಧಗೊಂಡ ಸಂನ್ಯಾಸಿಯನ್ನು ನೋಡಿ ಲಾವ ಣ್ಯವತಿಗೂ ರಜಪುತ ಸರದಾರನಿಗೂ ಪರಮಾನಂದವಾಯಿತು.

---

## ವಿರಕ್ತಿಯೊ, ಅನುರಕ್ತಿಯೊ?

ಅರುಣಕುಮಾರಿಯು ಶಸ್ತ್ರವಿದ್ಯೆಯಲ್ಲಿ ನಿಷ್ಣಾತಳಿದ್ದು, ಅವಳಿಗೆ ಬೇಟೆಯಾಡು ವದು ಚನ್ನಾಗಿ ಸೇರುತ್ತಿತ್ತೆಂಬ ಸಂಗತಿಯು ವಾಚಕ ಮಹಾಶಯರಿಗೆ ಗೊತ್ತಿರು ವದು. ಅವಳು ವಾರದಲ್ಲಿ ಒಂದೆರಡು ಸಾರೆ ಬೇಟೆಗೆ ಹೋಗುತ್ತಿದ್ದಳು. ಮಧ್ಯ ದಲ್ಲಿ ಕೆಲವು ದಿನಗಳ ವರೆಗೆ ಅವಳು ಬೇಟೆಯಾಡುವದನ್ನು ಬಿಟ್ಟಿದ್ದಳು. ಕೃಷ್ಣ

ಲಾಲನು ಅವಳನ್ನು ಪ್ರಯಾಗದಲ್ಲಿಯೇ ಬಿಟ್ಟು, ಅವಳ ಅಂಗರಕ್ಷಣೆಗೆ ಕೆಲವು ರಜಪುತ ಸೈನಿಕರನ್ನಿರಿಸಿದ್ದನು. ಅನಂತರದಲ್ಲಿ ಅವಳ ಬೇಟೆಯಾಡುವ ಉತ್ಸುಕತೆಯು ಬೆಳೆದಿತ್ತು. ಸದ್ಯದ ಸ್ಥಿತಿಯಲ್ಲಂತು ಅರುಣಕುಮಾರಿಗೆ ಬೇಟೆಯು ಹೊರತು ಮಿಕ್ಕ ಆನಂದದ ಸಾಧನಗಳೇನೂ ಇದ್ದಿಲ್ಲ ಇತ್ತೀಚೆಗೆ ಅವಳು ಪುರುಷ ವೇಷದಿಂದ ಬೇಟೆಗೆ ಹೋಗತೊಡಗಿದ್ದಳು ಅವಳು ತನ್ನ ಅನುಚರರೊಡನೆ ಅರಣ್ಯದಲ್ಲಿ ಹೊರಟಿರುವಾಗ ಆರ್ತಧ್ವನಿಯು ಕೇಳಿತು. ಕೂಡಲೆ ಅವಳು ತನ್ನ ಅನುಚರರೊಡನೆ ಬಂದು, ಗಂಡಾಂತರದಲ್ಲಿ ಬಿದ್ದ ಲಾವಣ್ಯವತಿಯನ್ನು ಪಾರಮಾಡಿದಳು.

ಸಂನ್ಯಾಸಿಯು ಸಾವಧಗೊಂಡ ಮೇಲೆ ಪುರುಷವೇಷಧಾರಿಯಾದ ಅರುಣಕುಮಾರಿಯು ಅವನ ವಿಷಯವಾಗಿ ಎಲ್ಲ ಸಂಗತಿಗಳನ್ನು ತಿಳಿದುಕೊಳ್ಳಬೇಕೆಂಬ ಇಚ್ಛೆಯಿಂದ—"ಯತಿಮಹಾರಾಜರೆ, ಮಾತಾಡುವದಕ್ಕೆ ನಿಮಗೆ ಶ್ರಮವಾಗದಂತಿದ್ದರೆ ಕೆಲವು ಮಾತುಗಳನ್ನು ಕೇಳಬೇಕೆಂದು ಯೋಚಿಸಿರುವೆನು."

"ನಾನು ಈಗ ವಿರಾಮ ಹೊಂದಿರುವೆನು. ಬೇಕಾದ ಸಂಗತಿಗಳನ್ನು ಕೇಳಬಹುದು. ನನಗೆ ಗೊತ್ತಿದ್ದ ಹಾಗು ಹೇಳಲಿಕ್ಕೆ ಅಡ್ಡಿಯಿಲ್ಲದ ಎಲ್ಲ ಸಂಗತಿಗಳನ್ನು ನಿಮಗೆ ತಿಳಿಸುವೆನು."

"ಇದೇನು? ಮೊದಲೇ ಕಟ್ಟಳೆ ಮಾಡಿಬಿಟ್ಟಿರಿ?"

"ಹೌದು. ಗೊತ್ತಿಲ್ಲದ ಹಾಗು ಹೇಳಲಿಕ್ಕೆ ಮನಸ್ಸಿಲ್ಲದ ವಿಷಯಗಳನ್ನು ವಿಚಾರಿಸತೊಡಗಿದರೆ ಹೇಳುವ ಬಗೆ ಹೇಗೆ?"

"ಒಳ್ಳೇದು; ನಿಮ್ಮ ಇಚ್ಛೆಯಂತಾಗಲಿ. ನೀವು ಯಾರು? ಎಲ್ಲಿಂದ ಬಂದಿರಿ? ಮುಂದೆ ಹೋಗುವದೆಲ್ಲಿಗೆ? ಇಷ್ಟು ವಿಷಯಗಳು ನಿಮಗೆ ಗೊತ್ತಿದ್ದರೆ, ಹೇಳಲಿಕ್ಕೆ ಯಾವ ಅಡ್ಡಿಯೂ ಇಲ್ಲದಂತಿದ್ದರೆ ಹೇಳಬಹುದು."

"ಸರದಾರರೆ" ಸಂನ್ಯಾಸಿಯು ಅರುಣಕುಮಾರಿಯನ್ನು ಕುರಿತು-"ನಾನೊಬ್ಬ ಸರ್ವಸಂಗಪರಿತ್ಯಾಗಿಯು—"

"ನಿಜವೆ?"

"ನಿಜವೆಂಬದು ಈ ಭಗವೀ ವಸ್ತ್ರಗಳಿಂದ ತಿಳಿಯುವದಿಲ್ಲವೆ?"

"ಸರ್ವಸಂಗ ಪರಿತ್ಯಾಗಿಗಳು ನಿಜವೆಂದು ಈ ಭಗವೀಲಾಂಛನದಿಂದ ತಿಳಿಯಲಿಕ್ಕೆ ಬರುವದಿಲ್ಲ. ಭಗವೀವಸ್ತ್ರಗಳು ಸರ್ವಸಂಗ ಪರಿತ್ಯಾಗಿಗಳಿರಬಹುದೆಂದು ಕಲ್ಪಿಸಿಕೊಳ್ಳಲಿಕ್ಕೆ ಮಾರ್ಗದರ್ಶಕಗಳಾಗಿವೆ. ಏನೇ ಇರಲಿ. ಸದ್ಯಕ್ಕೆ ನಿಮ್ಮ ಮಾತುಗಳು ನಿಜವೆಂದು ಭಾವಿಸಿ ಮುಂದೆ ಸಾಗುವಾ. ನೀವು ಎಲ್ಲಿಂದ ಬಂದಿರಿ?"

"ಕಾಶಿಯಿಂದ ಬಂದೆನು. ಮುಂದೆ ವೃಂದಾವನಕ್ಕೆ ಹೋಗಬೇಕಾಗಿದೆ."

"ಯತಿಗಳಾದ ನೀವು ಶಸ್ತ್ರಾಸ್ತ್ರ ವಿದ್ಯೆಯಲ್ಲಿ ಅಸಾಧಾರಣವಾದ ಪಾಂಡಿತ್ಯವನ್ನು ದೊರಕಿಸಿದ್ದು ವಿಸ್ಮಯಜನಕವಲ್ಲವೆ?"

"ಇದರಲ್ಲಿ ವಿಸ್ಮಯವೇನು? ಶಸ್ತ್ರಾಸ್ತ್ರವಿದ್ಯೆಯು ನನ್ನ ಪೂರ್ವಾಶ್ರಮದ್ದು."

"ಪೂರ್ವಾಶ್ರಮದಲ್ಲಿ ನೀವು ಇಂತಹ ಎಷ್ಟೋ ವಿದ್ಯೆಗಳಲ್ಲಿ ಸಂಪನ್ನರಾಗಿರಬಹುದು. ಸಂನ್ಯಾಸದಲ್ಲಿ ಪೂರ್ವಾಶ್ರಮದ ಶಸ್ತ್ರಾಸ್ತ್ರ ವಿದ್ಯೆಯು ಅಚ್ಚಳಿಯದೆ ಉಳಿದಂತೆ, ಆ ಆಶ್ರಮದೊಳಗಿನ ಉಳಿದ ವಿದ್ಯೆಗಳಾದರೂ ಯಥಾಸ್ಥಿತವಿರಬಹುದು."

"ನನಗೆ ನಿಮ್ಮ ಮಾತಿನ ರಹಸ್ಯವು ತಿಳಿಯಲೊಲ್ಲದು."

"ರಹಸ್ಯವಾಗಿರುವ ಸಂಗತಿಗಳು ಸದ್ಯಕ್ಕೆ ರಹಸ್ಯವಾಗಿಯೇ ಇರಲೊಲ್ಲವೇಕೆ. ನೀವು ನನ್ನೊಡನೆ ಪ್ರಯಾಗಕ್ಕೆ ನಡೆಯಿರಿ. ಪ್ರಯಾಗದಲ್ಲಿ ಕೆಲವು ದಿನಗಳನ್ನು ಕಳೆದು, ಮುಂದೆ ವೃಂದಾವನಕ್ಕೆ ಹೋಗಿರಿ; ಇಲ್ಲವೆ ಕುಂಜವನಕ್ಕಾದರೂ ಹೋಗಿರಿ."

ಅಸಾವಧಸ್ಥಿತಿಯಲ್ಲಿ ಬಿದ್ದಾಗ ಆತ್ಮೀಯ ಭಾವನೆಯಿಂದ ಉಪಚರಿಸಿ, ತನ್ನ ಪ್ರಾಣ ರಕ್ಷಣೆ ಮಾಡಿದ ಅರುಣಕುಮಾರಿಯ ಮನಸ್ಸು ಮುರಿಯುವದು ಆ ಸಂನ್ಯಾಸಿಗೆ ಸಾಧ್ಯವಾಗಲಿಲ್ಲ. ಆಗ ಅವನು—"ಸರದಾರರೆ, ಸಂನ್ಯಾಸಿಗಳಾದ ನಮಗೆ ವೃಂದಾವನವೇನು, ಪ್ರಯಾಗವೇನು? ಎಲ್ಲಿ ಹೋದರೂ ಅಷ್ಟೇ. ನಿಮ್ಮ ಇಚ್ಛೆಯಂತೆ ನಾನು ಪ್ರಯಾಗಕ್ಕೆ ಬರುವೆನು."

"ಯತಿಶ್ರೇಷ್ಠರೆ," ಇಷ್ಟು ವೇಳೆಯ ವರೆಗೆ ಸುಮ್ಮನೆ ಕುಳಿತಿದ್ದ ಲಾವಣ್ಯವತಿಯು—"ನೀವು ಮೂರ್ಛಾಗತರಾದ ಮೇಲೆ, ಸುಲಿಗೆಗಾರರು ನನ್ನನ್ನು ಮೇಣೆಯಲ್ಲಿ ಹಾಕಿಕೊಂಡು ಹೊರಟಿದ್ದರು. ಈ ಸರದಾರರು ಯೋಗ್ಯ ವೇಳೆಯಲ್ಲಿ ಬಂದು ನನ್ನ ಪ್ರಾಣ-ಮಾನಗಳನ್ನು ರಕ್ಷಿಸಿದರು. ನಾನು ಇವರು ಮಾಡಿದ ಉಪಕಾರವನ್ನು ಎಷ್ಟು ಸ್ಮರಿಸಿದರೂ ಕಡಿಮೆಯೆ!"

"ಸುಂದರಿ," ಅರುಣಕುಮಾರಿಯು ನಿಸ್ಪೃಹತೆಯಿಂದ—"ನಾನು ಯಾವ ಮಹತ್ಕಾರ್ಯ ಮಾಡಿರುವೆನೆಂದು ಇಷ್ಟು ಕೃತಜ್ಞತೆಯನ್ನು ವ್ಯಕ್ತಗೊಳಿಸುವೆ? ನಿಜವಾಗಿ ವಿಚಾರಿಸಿದರೆ ಈ ಯತಿಗಳಿಂದಲೆ ನಿನಗೆ ಉಪಕಾರವಾಗಿದೆ. ಭಗವೀವಸ್ತ್ರ ಧರಿಸಿದವರಾದ ಇವರು ಶಸ್ತ್ರ ಹಿಡಿದು ನಿನ್ನ ರಕ್ಷಣೆಗಾಗಿ ಸಾಹಸ ಮಾಡಿದ್ದೇನು ಸಣ್ಣಪುಟ್ಟ ಕೆಲಸವಲ್ಲ. ನನ್ನ ಬಳಿಯಲ್ಲಿ ಕೆಲವು ಜನರು ಶಸ್ತ್ರಧಾರಿಗಳಿದ್ದರು. ಈ ಯತಿಗಳು ಒಬ್ಬರೇ ಹತ್ತಿಪ್ಪತ್ತು ಜನರೊಡನೆ ಕಾದಿರುವರು. ನೀನು ಕೃತಜ್ಞತೆಯನ್ನು ವ್ಯಕ್ತಪಡಿಸುವದಿದ್ದರೆ, ಈ ಯತಿಗಳ ವಿಷಯವಾಗಿ ವ್ಯಕ್ತಪಡಿಸು. ಸಾಧ್ಯವಿದ್ದರೆ ಇವರು ಮಾಡಿದ ಉಪಕಾರವನ್ನು ತೀರಿಸಿ ಋಣಮುಕ್ತಳಾಗು."

"ನಾನು ನಿಮ್ಮಿಬ್ಬರಿಗೂ ಉಪಕೃತಳಾಗಿರುವೆನು. ಏಳು ಜನ್ಮಗಳನ್ನು ಹೊತ್ತು ತೀರಿಸಿದರೂ ನಿಮ್ಮ ಉಪಕಾರವು ತೀರದು!" ಲಾವಣ್ಯವತಿಯು ಮನಃಪೂರ್ವಕವಾಗಿ ಮಾತಾಡಿದಳು.

"ಯುವತಿ, ನೀನು ಗುಣವತಿಯಿರುವೆ. ಯಾರ ದೈವದಲ್ಲಿ ಈ ರತ್ನವು ದೊರೆಯಬೇಕೆಂದು ವಿಧಿಯು ಬರೆದಿಟ್ಟಿರುವನೋ ಅವನು ನಿಜವಾಗಿ ಭಾಗ್ಯವಂತನು."

ಅರುಣಕುಮಾರಿಯು ಮಾತುಗಳನ್ನು ಕೇಳಿ ಲಾವಣ್ಯವತಿಯು ಲಜ್ಜಾವನತಮುಖಿಯಾದಳು. ಕೆಲವು ವೇಳೆಯ ಮೇಲೆ ಅವಳು—"ಪುರುಷರಾದ ನೀವು

ಪುರುಷರೆದುರಿನಲ್ಲಿ ಸ್ತ್ರೀಯರನ್ನು ನಾಚಿಸುವಂತಹ ಮಾತುಗಳನ್ನಾಡಬಾರದೆಂದು ಪ್ರಾರ್ಥಿಸುವೆನು."

"ಇಂತಹ ಮಾತುಗಳಿಂದ ಸ್ತ್ರೀಯರು ಲಜ್ಜಾಯುಕ್ತರಾಗುವದು ನಿಜವು. ನಾನು ಬುದ್ಧಿಪೂರ್ವಕವಾಗಿ ಮಾತನಾಡಿರುವೆನು. ನೀನು ಯಾವ ಭಾಗ್ಯಶಾಲಿಯ ಪತ್ನಿಯಾಗಿರುವೆಯೋ, ಅವಿವಾಹಿತಳಿರುವೆಯೋ ಎಂಬದನ್ನು ತಿಳಿದುಕೊಳ್ಳಬೇಕೆಂಬ ಉದ್ದೇಶದಿಂದ ಹಾಗೆ ಮಾತನಾಡಿದೆನಲ್ಲದೆ, ಕೇವಲ ನಿನ್ನನ್ನು ನಾಚಿಸಬೇಕೆಂದು ನನ್ನ ಸಾಹಸವಿರುವದಿಲ್ಲ. ನೀನು ಅವಿವಾಹಿತಳಿರುವೆಯಷ್ಟೆ?"

"ಹೌದು."

"ನೀನು ಇತ್ತ ಎಲ್ಲಿಗೆ ಹೋಗಬೇಕಾಗಿದೆ?"

"ಪ್ರಯಾಗಕ್ಕೆ."

"ಪ್ರಯಾಗದಲ್ಲಿ ನಿನ್ನ ಕಾರ್ಯವೇನಿರುವದು? ಹೇಳಲಿಕ್ಕೆ ಅಡ್ಡಿಯಿಲ್ಲದಿದ್ದರೆ ಹೇಳು. ನಿನ್ನ ಕಾರ್ಯವು ರಹಸ್ಯವಾದದ್ದಿದ್ದರೆ ಅದನ್ನು ತಿಳಿದುಕೊಳ್ಳಬೇಕೆಂದು ನಾನು ಹಟ ಹಿಡಿಯುವದಿಲ್ಲ."

"ನಿಮ್ಮಂತಹ ಸ್ವಕೀಯರೆದುರಿಗೆ ಹೇಳದಂತಹ ರಹಸ್ಯವೇನಿರಬೇಕು? ಚಿತೋಡದ ಮಹಾರಾಣಾ ಉದಯಸಿಂಗರ ಪಟ್ಟಮಹಿಷಿಯವರಾದ ಸರೋಜಸುಂದರಿದೇವಿಯವರ ಆಜ್ಞೆಯ ಮೇರೆಗೆ ನಾನು ಪ್ರಯಾಗಕ್ಕೆ ಹೊರಟಿರುವೆನು."

"ತ್ರಿವೇಣೀ ಸ್ನಾನ ಮಾಡಿಕೊಂಡು ಬರಲಿಕ್ಕೆ ಮಹಾರಾಣಿಯವರು ಆಜ್ಞೆ ಮಾಡಿರುವರೋ, ಮತ್ತೇನಾದರೂ ಅವರ ಕಾರ್ಯವಿರುವದೊ?" ಅರುಣಕುಮಾರಿಯು ಗಹಗಹಿಸಿ ನಗುತ್ತ ಕೇಳಿದಳು.

"ಅವರದೊಂದು ಮಹತ್ವದ ಕೆಲಸಕ್ಕಾಗಿ ಪ್ರಯಾಗದೊಳಗಿನ ಒಂದು ವ್ಯಕ್ತಿಯನ್ನು ಕಾಣಬೇಕಾಗಿದೆ."

"ನೀನು ಯಾವ ವ್ಯಕ್ತಿಯ ಕಡೆಗೆ ಹೋಗಬೇಕಾಗಿರುವದೆಂಬದನ್ನು ತಿಳಿಸಲಿಕ್ಕೆ ಅಡ್ಡಿಯಿಲ್ಲವಷ್ಟೆ?"

"ಏನೂ ಅಡ್ಡಿಯಿಲ್ಲ. ಪ್ರಯಾಗದಲ್ಲಿ ಉದಯಸಿಂಗರಾಣಾಜಿಯವರ ರಾಣಿಯೊಬ್ಬಳುಂಟು."

"ಅವಳು ಯಾರು?"

"ಅರುಣದೇವಿಯು."

"ಅರುಣಳೆಂಬ ಹೆಸರಿನ ಒಬ್ಬ ಸ್ತ್ರೀಯು ಪ್ರಯಾಗದಲ್ಲಿರುವಳು. ನೀನು ಅವಳನ್ನು ಗುರುತಿಸುವೆಯಾ?"

"ಕೆಲವು ದಿನಗಳ ಹಿಂದೆ ರಾಣಾಜಿಯವರೂ, ಮಹಾರಾಣಿಯವರೂ ಪ್ರಯಾಗದಲ್ಲಿದ್ದರು. ಆಗ ನಾನೂ ಅವರೊಡನೆ ಅಲ್ಲಿಯೇ ಇದ್ದೆನು. ಆ ವೇಳೆಯಲ್ಲಿ ನಾನು ಅರುಣದೇವಿಯನ್ನು ಕೆಲವು ಸಾರೆ ನೋಡಿರುವೆನು."

"ಈಗ ನೀನು ಅವಳನ್ನು ಗುರುತಿಸುವೆಯಾ?"

"ಓಹೋ! ಎದುರಿಗೆ ಬಂದು ನಿಂತರೆ ಗುರುತಿಸದೇನು ಮಾಡಲಿ?"

"ಎದುರಿಗೆ ನಿಂತರೂ ಗುರುತಿಸುವಷ್ಟು ಬುದ್ಧಿಕೌಶಲ್ಯವು ನಿನ್ನಲ್ಲಿರುವದೋ ಇಲ್ಲವೋ ಯಾರು ಬಲ್ಲರು?"

"ನೀವು ಅರುಣದೇವಿಯನ್ನು ಬಲ್ಲಿರೇನು?"

"ಓಹೋ! ಗೊತ್ತಿರದೇನು? ಅರುಣಳನ್ನು ನಾನು ಅನೇಕ ಸಾರೆ ನೋಡಿರುವೆನು. ಅವಳು ಮಹಾರಾಣಾಜಿಯವರ ಧರ್ಮಪತ್ನಿಯೇನು?"

"ರಾಣಾಜಿಯವರು ಅರುಣದೇವಿಯನ್ನು ಇನ್ನೂ ವಿವಾಹವಾದಂತೆ ತೋರುವದಿಲ್ಲ. ಈ ವಿಷಯದಲ್ಲಿ ಚಿತೋಡ ನಿವಾಸಿಗಳಿಗೆ ಯಾವ ಸಂಗತಿಯೂ ತಿಳಿದಿಲ್ಲ. ಅರುಣದೇವಿ-ಮಹಾರಾಣಾಜಿಯವರಲ್ಲಿ ಪ್ರೇಮವಿವಾಹವಾಗಿರಲಿಕ್ಕೆ ಬೇಕೆಂದು ನನ್ನ ತರ್ಕವುಂಟು.'

"ಅರುಣಳ ಕಡೆಗೆ ನಿನ್ನ ಕಾರ್ಯವೇನಿರುವದು?"

"ಅವಳನ್ನು ಚಿತೋಡಕ್ಕೆ ಕರೆದುಕೊಂಡು ಹೋಗಬೇಕಾಗಿದೆ."

"ಉದಯಸಿಂಗರಾಣಾಜಿಯವರು ಈ ಕೆಲಸಕ್ಕಾಗಿ ಸ್ತ್ರೀಯಾದ ನಿನ್ನನ್ನು ಕಳುಹಿಸಿದರೇಕೆ?"

"ಮಹಾರಾಣೀ ಸರೋಜಸುಂದರಿ ದೇವಿಯವರು ನನ್ನನ್ನು ಕಳಿಸಿರುವರು."

"ಮಹಾರಾಣಾಜಿಯವರು ನಿನ್ನನ್ನು ಕಳುಹಿಸಿಲ್ಲವೆ?"

"ಇಲ್ಲ. ಅವರಿಗೆ ಈ ಸುದ್ದಿಯು ಸಹ ಗೊತ್ತಿಲ್ಲ."

"ಅರುಣಳನ್ನು ಕರೆಯಿಸುವದಕ್ಕಾಗಿ ಮಹಾರಾಣಿಯವರು ಇಷ್ಟೇಕೆ ಆತುರಗೊಂಡು ಕಳುಹಿಸಿರುವರು?"

"ಅರುಣದೇವಿಯ ಚಿಂತನದಿಂದ ಮಹಾರಾಣಾಜಿಯವರು ಭ್ರಮಿಷ್ಠರಂತಾಗಿರುವರು. ಅವರು ಯಾವಾಗಲೂ ಉದಾಸೀನರಿರುತ್ತಾರೆ; ಅನ್ನ-ನಿದ್ರೆಗಳನ್ನು ತ್ಯಜಿಸಿರುವರು. ಅರುಣಕುಮಾರಿಯು ಬಂದ ಹೊರತು ಅವರ ಮನಸ್ಸು ಶಾಂತವಾಗುವ ಲಕ್ಷಣವಿಲ್ಲ. ಅಂತೆಯೇ ಮಹಾರಾಣಿಯವರು ದಾಸಿಯಾದ ನನ್ನನ್ನು ಕಳುಹಿಸಿರುವರು."

"ಅರುಣಳ ಸಂಗತಿಯು ಮಹಾರಾಣಿಯವರಿಗೆ ಹೇಗೆ ತಿಳಿಯಿತು? ಉದಯಸಿಂಗ ರಾಣಾಜಿಯವರೇನಾದರೂ ಅವಳ ಸಂಗತಿಯನ್ನು ರಾಣಿಯವರ ಮುಂದೆ ಹೇಳಿರಬಹುದೇನು?"

"ಛೇ! ಮಹಾರಾಣಾಜಿಯವರು ಅರುಣದೇವಿಯ ವಿಷಯವಾಗಿ ಒಂದು ಅಕ್ಷರವನ್ನು ಸಹ ಹೇಳಿಲ್ಲ. ಅವರಿಗೆ ಅರುಣಳ ಪತ್ರವು ದೊರೆಯಿತು. ಪತ್ರದ ಸಂಗತಿಗಳ ಮೇಲಿಂದ ಎಲ್ಲ ವಿಷಯವೂ ಮಹಾರಾಜ್ಞಿಯವರಿಗೆ ಗೊತ್ತಾಯಿತು."

"ಒಳ್ಳೇದು, ಒಂದು ವೇಳೆ ಅರುಣಕುಮಾರಿಯು ಚಿತೋಡಕ್ಕೆ ಹೊರಡದಿ

ದ್ದರೆ ಹೇಗೆ ಮಾಡುವೆ?"

"ಮಹಾರಾಣಿಯವರ ಏಕನಿಷ್ಠ ದಾಸಿಯಾದ ನಾನು ಅವರ ಇಚ್ಛೆಯಂತೆ ಕೆಲಸವನ್ನು ಈಡೇರಿಸಿಕೊಂಡೇ ಹೊರಡಬೇಕೆಂದು ಸಂಕಲ್ಪ ಮಾಡಿಕೊಂಡಿರುವೆನು. ಚಿತೋಡದ ರಾಣಿಯಾಗಲಿಕ್ಕೆ ಅರುಣಕುಮಾರಿಯು ಹಿಂಜರಿಯುವಳೆ? ಸರದಾರರೆ, ಅರುಣದೇವಿಯು ಬಂದ ಹೊರತು ಮಹಾರಾಣಾಜಿಯವರಿಗೆ ಸೌಖ್ಯವು ದೊರೆಯುವಂತಿಲ್ಲ ಯುಕ್ತಿ-ಪ್ರಯುಕ್ತಿಗಳಿಂದ ಅವಳ ಮನವೊಲಿಸಿ ಕರೆದೊಯ್ಯಲಿಕ್ಕೇಬೇಕು.

"ನಾನು ನಿನ್ನ ಒಡತಿಯು ಹುಚ್ಚಳಿರುವಳೆಂದು ಭಾವಿಸುವೆನು. ಬುದ್ಧಿಪೂರ್ವಕವಾಗಿ ಸವತಿಯನ್ನು ಬರಮಾಡಿಕೊಳ್ಳುವದು ಎಲ್ಲಿಯ ಜಾಣತನವು? ಅರುಣಳು ಬಂದರೆ ಮಹಾರಾಣಾಜಿಯವರಿಗೆ ಸುಖವು ದೊರೆಯಬಹುದು; ಆದರೆ ಮಹಾರಾಜ್ಞಿಯು ತನ್ನ ಸೌಖ್ಯವನ್ನು ಹಾಳು ಮಾಡಿಕೊಂಡಂತಾಗುವದಿಲ್ಲವೆ?"

"ಮಹಾರಾಜ್ಞಿಯರು ಮಹಾನುಭಾವರಿರುವರು. ಅವರಲ್ಲಿಯ ಸದ್ಗುಣಗಳನ್ನು ಎಷ್ಟು ಹೊಗಳಿದರೂ ತೀರದು."

ಲಾವಣ್ಯವತಿಯು ಹೇಳಿದ ಸಂಗತಿಗಳನ್ನು ಕೇಳಿ ಪುರುಷ ವೇಷಧಾರಿಯಾದ ಅರುಣಕುಮಾರಿಯ ಮನಸ್ಸು ಪ್ರಸನ್ನವಾಯಿತು. ಉದಯಸಿಂಗನು ತನ್ನನ್ನು ಉಪೇಕ್ಷಿಸಿರುವದಿಲ್ಲವೆಂದೂ, ಕೆಲವು ತೊಂದರೆಗಳ ಮೂಲಕವಾಗಿ ನಿರುಪಾಯನಾಗಿ ಕುಳಿತುಕೊಂಡಿರುವನೆಂದೂ ಅವಳಿಗೆ ಗೊತ್ತಾಯಿತು. ಪತಿಗೆ ಸೌಖ್ಯವಾಗಬೇಕೆಂಬ ಉದ್ದೇಶದಿಂದ ಸವತಿಯನ್ನು ಕರೆಯಿಸಿಕೊಳ್ಳಲು ಸಿದ್ಧಳಾಗಿದ್ದ ಸರೋಜಸುಂದರಿದೇವಿಯ ಘನವಂತಿಕೆಯನ್ನು ಅವಳು ಮನಃಪೂರ್ವಕವಾಗಿ ಹೊಗಳಿದಳು.

ಲಾವಣ್ಯವತಿ-ಅರುಣಕುಮಾರಿಯರ ಮಾತು ನಡೆದಾಗ, ತರುಣ ಸಂನ್ಯಾಸಿಯು ಯಾವದೋ ಒಂದು ಗಹನವಾದ ವಿಚಾರದಲ್ಲಿ ಮುಳುಗಿದ್ದನು. ಅವನು ವಿಚಾರಮಗ್ನನಾದದ್ದು ಅರುಣಕುಮಾರಿಗೆ ಗೊತ್ತಾದ್ದರಿಂದ ಅವಳು—"ಮಹಾರಾಜರೆ, ನೀವು ಯಾವದೋ ಒಂದು ವಿಚಾರದಲ್ಲಿ ಮಗ್ನರಾದಂತೆ ತೋರುವದು.' ಯಾವ ವಿಷಯದ ಬಗ್ಗೆ ಯೋಚನೆ ನಡೆದಿರುವದು?"

"ಈ ಯುವತಿಯ ಮುಖದಿಂದ ಅರುಣಕುಮಾರಿಯ ಹೆಸರು ಹೊರಟದ್ದರಿಂದ ನಾನು ವಿಚಾರದಲ್ಲಿ ಮುಳುಗಿದೆನು."

"ಅರುಣಕುಮಾರಿಯ ಹೆಸರು ಕೇಳಿ ನೀವೇಕೆ ವಿಚಾರದಲ್ಲಿ ಮುಳುಗಬೇಕು? ಸ್ತ್ರೀಯರ ಹೆಸರು ಕೇಳುವದರಿಂದ ನಿಮಗೆ ಭ್ರಮೆಯಾಗುವದೇನು? ಭಗವೀ ಲಾಂಛನವನ್ನು ಧರಿಸಿದವರಾದ ನಿಮಗೆ ಈ ನಡತೆಯು ಶೋಭಿಸಲಾರದು."

"ಉಳಿದ ಸ್ತ್ರೀಯರ ಹೆಸರು ಕೇಳಿದರೆ ನನಗೆ ಭ್ರಮೆಯಾಗುವ ಕಾರಣವಿಲ್ಲ.

"ಹಾಗಾದರೆ ಅರುಣಕುಮಾರಿಯು ನಿಮಗೆ ಏನಾಗಬೇಕು?"

"ಅವಳು ನನ್ನ ಪೂರ್ವಾಶ್ರಮದ ಪ್ರಣಯಿನಿಯು!"

"ಹೀಗೆಯೊ?" ಅರುಣಳು ಗಹಿಗಹಿಸಿ ನಗುತ್ತ—"ನಿಮ್ಮ ಪ್ರಣಯ ಚಾರಿತ್ರ್ಯವು ಒಳ್ಳೆಯ ಮನೋಹರವಾದದ್ದಿರಬಹುದು. ಅರುಣಳಂತಹ ಪ್ರಣಯಿನಿಯು ದೊರಕಿರಲು ನಿಮಗೆ ಈ ಭಗವೀ ವಸ್ತ್ರಗಳೇಕೆ ಬಂದವು?"

"ಪ್ರಣಯಭಂಗದ ಮೂಲಕ!" ಎಂದು ಸಂನ್ಯಾಸಿಯು ದೀರ್ಘವಾದ ಉಸಿರು ಬಿಟ್ಟು ನುಡಿದು—"ಅರುಣಕುಮಾರಿಯು ಈಗ ಪ್ರಯಾಗದಲ್ಲಿರುವಳೇನು?"

"ನಿಮ್ಮ ಪ್ರಣಯಿನಿಯಾದ ಅರುಣಕುಮಾರಿಯು ಈಗ ಪ್ರಯಾಗದಲ್ಲಿಲ್ಲ. ಪ್ರಯಾಗದೊಳಗಿನ ಅರುಣಕುಮಾರಿಯು ಮಹಾರಾಣಾ ಉದಯಸಿಂಗರ ಪ್ರಣಯಿನಿಯೆಂಬದನ್ನು ಇದೀಗ ನೀವು ಈ ಲಾವಣ್ಯವತಿಯ ಬಾಯಿಂದ ಕೇಳಲಿಲ್ಲವೆ?"

"ಕೃಷ್ಣಲಾಲನ ಪುತ್ರಿಯಾದ ಅರುಣಕುಮಾರಿಯನ್ನು ನೀವು ಬಲ್ಲಿರೇನು?"

"ಓಹೋ! ನನಗೆ ಅವಳ ಪರಿಚಯವಿತ್ತು."

"ಪರಿಚಯವಿತ್ತು? ಸರದಾರರೇ, ಅವಳು ಈಗ ಇಲ್ಲವೇನು?"

"ನಿಮ್ಮ ಪ್ರಣಯಿನಿಯಾದ ಅರುಣಕುಮಾರಿಯು ಇಹಲೋಕವನ್ನು ತ್ಯಜಿಸಿರುವಳು." ಅರುಣಕುಮಾರಿಯು ಬುದ್ಧಿಪೂರ್ವಕವಾಗಿ ನುಡಿದಳು.

ಅರುಣಕುಮಾರಿಯ ಮಾತುಗಳನ್ನು ಕೇಳಿದ ಕೂಡಲೆ ಸಂನ್ಯಾಸಿಯ ನೇತ್ರಗಳು ದುಃಖಾಶ್ರುಗಳಿಂದ ತುಂಬಿದವು. ಆಗ ಅವನು—"ನನ್ನ ಪಂಚಪ್ರಾಣಗಳಂತಿದ್ದ ಅರುಣದೇವಿ, ನೀನು ಇಹಲೋಕವನ್ನು ಬಿಟ್ಟು ತೆರಳಿದೆಯಾ! ಅರುಣಕುಮಾರಿ, ಈ ಬಾಲಮಿತ್ರನನ್ನು ತ್ಯಜಿಸಿ ಹೋಗಲಿಕ್ಕೆ ನೀನು ಹೇಗೆ ಮನಸ್ಸು ಮಾಡಿದೆ? ಎಂದಾದರೊಮ್ಮೆ ನಿನ್ನ ದರ್ಶನವಾಗಬಹುದೆಂದು ಆಶೆ ಹೊಂದಿದ್ದೆನು. ನಿನ್ನನ್ನು ನಿರ್ಘೃಣನಾದ ಕಾಲನು ಅಕಾಲದಲ್ಲಿ ಕೊಂಡೊಯ್ದನೆ! ಹಾಯ! ಹಾಯ!!"

"ಸಂನ್ಯಾಸಿಗಳೆ, ಸರ್ವಸಂಗಪರಿತ್ಯಾಗಿಗಳಾದ ನೀವು ಈ ರೀತಿಯಾಗಿ ಮೋಹಗಳಿಗೀಡಾಗಬೇಕೆ? ನಿಮ್ಮ ಈ ವರ್ತನಕ್ಕೇನೆನ್ನಬೇಕು? ಇದೇನು ವಿರಕ್ತಿಯೊ, ಅನುರಕ್ತಿಯೊ?"

ಪುರುಷವೇಷಧಾರಿಯಾದ ಅರುಣಕುಮಾರಿಯು ತರುಣ ಸಂನ್ಯಾಸಿಯನ್ನು ಸಾಂತ್ವನಪರ ಭಾಷಣಗಳಿಂದ ಸಂತೈಸಿದಳು.

---

## ಅಕಲ್ಪಿತ ಘಟನೆ.

ಅರುಣಕುಮಾರಿಯು ಸಂನ್ಯಾಸಿಯನ್ನೂ, ಲಾವಣ್ಯವತಿಯನ್ನೂ ತನ್ನ ಮಂದಿರಕ್ಕೆ ಕರೆತಂದಳು. ಅವಳು ಅವರಿಬ್ಬರನ್ನೂ ಕೋಣೆಯಲ್ಲಿ ಕುಳ್ಳಿರಿಸಿದಳು. ಆಗ ಲಾವಣ್ಯವತಿಯು ಅರುಣಕುಮಾರಿಯನ್ನು ಕುರಿತು—"ಸರದಾರರೆ, ನಾನು ಮಹಾರಾಜ್ಞಿಯವರೊಡನೆ ಈ ಪಟ್ಟಣದಲ್ಲಿದ್ದಾಗ ಅರುಣಕುಮಾರಿಯು ಇದೇ ಮನೆಯಲ್ಲಿರುತ್ತಿದ್ದಳು. ಈಗ ಅವಳು ಎಲ್ಲಿರುವಳು?"

"ಯುವತಿ, ಅರುಣಳು ಮೊದಲು ಈ ಮನೆಯಲ್ಲಿರುತ್ತಿದ್ದಳು. ಈಗ ಎಲ್ಲಿ ರುವಳೆಂಬದು ಗೊತ್ತಾಗಿಲ್ಲ. ಸೇವಕರನ್ನು ಶೋಧಿಸುವದಕ್ಕೆ ಕಳುಹಿಸುವೆನು." ಅರುಣಕುಮಾರಿಯು ನಗುತ್ತ ನುಡಿದಳು.

"ನೀವು ಸುಳ್ಳಾಡತೊಡಗಿರುವಿರಿ ನಿಮ್ಮಂತಹರ ಮೋಸದ ಮಾತುಗಳನ್ನು ಈ ಚಾಣಾಕ್ಷ ಲಾವಣ್ಯವತಿಯು ನಂಬುವದಿಲ್ಲವೆಂದು ದಿಟವಾಗಿ ತಿಳಿಯಿರಿ. ಅರುಣ ಕುಮಾರಿಯು ಇದೇ ಮನೆಯಲ್ಲಿರಲಿಕ್ಕೆ ಬೇಕು."

"ಲಾವಣ್ಯವತಿ!" ಅರುಣಕುಮಾರಿಯು ವಿಸ್ಮಯಗೊಂಡವರಂತೆ ನಟಿಸುತ್ತ- "ನಿನ್ನ ಚಾಣಾಕ್ಷತನವು ಪ್ರಶಂಸನೀಯವಿರುವದು. ಅರುಣಕುಮಾರಿಯು ಇದೇ ಮನೆಯಲ್ಲಿರುವಳು. ಅವಳನ್ನು ಕರೆದುಕೊಂಡು ಹೋಗುವದಕ್ಕಾಗಿ ನೀನು ಬಂದಿ ರುವಿಯಲ್ಲವೆ? ಅರುಣಳು ನನ್ನ ಧರ್ಮಪತ್ನಿಯಿರುವಳು. ಅವಳು ನಿನ್ನೊಡನೆ ಚಿತೋಡಕ್ಕೆ ಹೇಗೆ ಬರುವಳು? ಮಹಾರಾಣಾಜಿಯವರು ಪರಸತಿಯನ್ನು ಹೇಗೆ ಸ್ವೀಕರಿಸುವರು?"

ಲಾವಣ್ಯವತಿಯು ಅರುಣಕುಮಾರಿಯ ಮಾತುಗಳನ್ನು ಕೇಳಿ ದಂಗು ಬಡೆ ದಳು. ರಾಣಾಜಿಯವರೊಡನೆ ಪ್ರಣಯವ್ಯವಹಾರವಿರಿಸಿದ ಅರುಣಳು ಅವರ ಪ್ರಣಯ ಭಂಗಮಾಡಿ, ಅನ್ಯರ ಪಾಣಿಗ್ರಹಣ ಮಾಡಿದ್ದನ್ನು ನೋಡಿ ಲಾವಣ್ಯ ವತಿಯು ತಿರಸ್ಕಾರವುಳ್ಳವಳಾದಳು. ಆಗ ಅವಳು ಔದಾಸೀನ್ಯದಿಂದ—"ಇನ್ನು ಪ್ರಯಾಗದಲ್ಲಿ ನನ್ನ ಕೆಲಸವಿಲ್ಲ. ಸರದಾರರೆ, ನನಗೆ ಅಪ್ಪಣೆ ಕೊಡಿರಿ."

"ಲಾವಣ್ಯವತಿ, ಅಷ್ಟೇಕೆ ಅವಸರವು? ಭೋಜನೋತ್ತರದಲ್ಲಿ ಪ್ರಯಾಣ ಮಾಡುವೆಯಂತೆ. ನನ್ನ ಪ್ರಿಯೆಯಾದ ಅರುಣಕುಮಾರಿಯನ್ನು ಕಾಣದೆ ಹಾಗೆಯೆ ಹೊರಡುವೆಯಾ?"

ಅರುಣಕುಮಾರಿಯ ಮಾತುಗಳನ್ನು ಕೇಳಿ, ಲಾವಣ್ಯವತಿಯು ವಿಚಾರದಲ್ಲಿ ಮುಳುಗಿ ಸ್ವಸ್ಥವಾಗಿ ಕುಳಿತಿದ್ದಳು. ತರುಣ ಸಂನ್ಯಾಸಿಯು ಲಾವಣ್ಯವತಿಯ ಲಾವಣ್ಯಯುಕ್ತವಾದ ಮುಖವನ್ನು ದಿಟ್ಟಿಸಿ ನೋಡುತ್ತ ಕುಳಿತಿದ್ದನು. ಅರುಣ ಕುಮಾರಿಯು ಸಂನ್ಯಾಸಿಯ ಮನೋವಿಕಾರವನ್ನು ಮುಖಚರ್ಯೆಯಿಂದ ಗುರು ತಿಸಿ—"ಯತೀಶ್ವರರೆ, ನೀವು ವಿರಕ್ತರಾಗಿ ಭಗವೀವಸ್ತ್ರ ಧರಿಸಿರುವಿರಿ; ತೀರ್ಥ- ಯಾತ್ರೆ ಮಾಡುತ್ತಿರುವಿರಿ. ಸಂಸಾರತ್ಯಾಗ ಮಾಡಿದ ನೀವು, ಒಬ್ಬ ಸುಂದರ ತರು ಣಿಯ ಮುಖವನ್ನು ವಿಕಾರಯುಕ್ತ ದೃಷ್ಟಿಯಿಂದ ನೋಡುವದು ಶೋಭಿಸುವದೆ?"

"ಸರದಾರರೆ!" ತರುಣ ಸಂನ್ಯಾಸಿಯು ಅರುಣಕುಮಾರಿಯ ಮಾತುಗಳನ್ನು ಕೇಳಿ ನಾಚಿಕೊಂಡು—"ಈ ತರುಣಿಯು ಎಷ್ಟು ಚಲುವೆಯೂ ಸದ್ಗುಣಿಯೂ ಇರುವಳೋ, ಅಷ್ಟೇ ಮಧುರಭಾಷಿಣಿಯೂ ಆಗಿರುವಳು. ಈ ಲಾವಣ್ಯವತಿಯು ಎಲ್ಲ ಬಗೆಯಿಂದ ವರ್ಣನೀಯಳಿರುವಳೆಂದು ಕುತೂಹಲಗೊಂಡು ನೋಡತೊಡಗಿ ದ್ದೆನು. ನಾನು ಗುಣಗ್ರಾಹಿಯಿರುವೆನು; ತೀರಿಯಿತೆ?"

"ಹಾ, ತಿಳಿಯಿತು. ರೂಪವತಿಯರೂ ಮಧುರವಚನಿಗಳೂ ಆದ ಸ್ತ್ರೀಯು ರನ್ನು ಕುತೂಹಲ ದೃಷ್ಟಿಯಿಂದ ನೋಡುವದಕ್ಕಾಗಿ ನೀವು ವೃಂದಾವನಕ್ಕೆ ಹೊರ ಟಿರುವಿರೆಂಬಂತೆ ತೋರುತ್ತದೆ!"

"ಸರದಾರರೆ, ವಾಕ್ಚತುರರಾದ ನಿಮ್ಮೊಡನೆ ಮಾತಾಡಿ ಗೆಲ್ಲಲಾರೆನು."

"ನಾನು ನಿಮ್ಮ ರಹಸ್ಯವನ್ನರಿತಿರುವೆನು."

"ಯಾವ ರಹಸ್ಯವನ್ನು?"

"ಪ್ರಣಯಭಂಗ ಹೊಂದಿದ ಯತಿಗಳಾದ ನೀವು ಲಾವಣ್ಯಾವತಿಯಂತಹ ಲಾವಣ್ಯಾವತಿಯನ್ನು ಹುಡುಕುತ್ತ ತಿರುಗಾಡುವ ಕಾರಸ್ಥಾನದ ರಹಸ್ಯವನ್ನು!"

"ಛೀ! ನೀವು ಹೀಗೆ ಮಾತಾಡಬೇಡಿರಿ."

"ನಾನು ಆಡಿದ ಮಾತುಗಳು ನಿಮಗೂ ಈ ಲಾವಣ್ಯಾವತಿಗೂ ಕೂಡಿಯೇ ಪ್ರಿಯವಾಗಿರುವವೆಂಬದನ್ನು ನಾನು ಅರಿತಿರುವೆನು."

"ಸರದಾರರೆ!" ಅರುಣಕುಮಾರಿಯ ಮಾತುಗಳನ್ನು ಕೇಳಿ ಲಾವಣ್ಯಾವತಿಯು ಲಜ್ಜೆಗೊಂಡು, ಮುಖ ಕೆಳಗೆ ಮಾಡಿ—"ನೀವು ವಿನೋದಿಗಳಿರುವಿರಿ. ಹೆಚ್ಚಾಗಿ ವಿನೋದ ಮಾಡಿ ನಾಚಿಸಬೇಡಿರಿ."

"ಲಾವಣ್ಯಾವತೀ" ಅರುಣಕುಮಾರಿಯು ಸಸುನಗುತ್ತ—"ನಿನಗೆ ನಾಚಿಕೆ ಯಾಗುತ್ತಿದ್ದರೆ ಈ ಸಂನ್ಯಾಸಿಗಳ ಬಳಿಯಲ್ಲಿ ಕುಳಿತುಕೊಳ್ಳುವ ಕಾರಣವಿಲ್ಲ. ಸಂನ್ಯಾ ಸಿಗಳ ಸಂಗತಿಯು ಸಮಾದಪ್ಪಲ್ಲ, ಒಳಗೆ ನಡೆ."

ಅರುಣಕುಮಾರಿಯು ಲಾವಣ್ಯಾವತಿಯನ್ನು ಆಗ್ರಹದಿಂದ ಒಳಗೆ ಕರೆದೊ ಯ್ದಳು. ಅಪರಿಚಿತ ತರುಣನೊಡನೆ ಒಬ್ಬಳೇ ಮನೆಯೊಳಗೆ ಹೋಗಲಿಕ್ಕೆ ಲಾ- ವಣ್ಯಾವತಿಯು ಹಿಂದೆ ಮುಂದೆ ನೋಡತೊಡಗಿದ್ದಳು. ಒಳಗೆ ಹೋದೊಡನೆಯೆ ಅರುಣಕುಮಾರಿಯು ಅವಳ ಕೈ ಹಿಡಿದು—"ಸುಂದರಿ, ಈಗ ನೀನು ನನ್ನ ಅಧೀನ ಳಾಗಿರುವೆ. ನಿನ್ನ ಇಚ್ಛೆಯೇನುಂಟು?"

ಪರಪುರುಷನು ತನ್ನ ಕೈ ಹಿಡಿದು ಅಪಮಾನ ಮಾಡತೊಡಗಿದನೆಂದು ಲಾ- ವಣ್ಯಾವತಿಯು ಅಂಜಿದಳು. ಅವಳಲ್ಲಿ ಅಪರಿಮಿತವಾದ ಸಂತಾಪವು ಹುಟ್ಟಿತು. ಅವಳು ಒಳ್ಳೆಯ ಸಾಮರ್ಥ್ಯದಿಂದ ತನ್ನ ಕೈಯನ್ನು ಬಿಡಿಸಿಕೊಂಡು—"ಸರದಾರರೆ, ನೀವು ಸುಲಿಗೆಗಾರರ ಕೈಯೊಳಗಿಂದ ನನ್ನನ್ನು ರಕ್ಷಿಸಿ, ಈ ಬಗೆಯಾಗಿ ಅನುಚಿತ ಕಾರ್ಯ ಮಾಡಬಹುದೆ? ನಾನು ನಿಮ್ಮ ಆಶ್ರಯದಲ್ಲಿ ಬಂದಿರುವೆನೆಂದು ಅಸ ಹಾಯ್ಯ ಸ್ಥಿತಿಯಲ್ಲಿದ್ದ ಅಬಲೆಯ ಮೇಲೆ ಅತ್ಯಾಚಾರ ನಡೆಯಿಸ ತೊಡಗಿರುವಿರಾ? ಈ ವರ್ತನವು ಕ್ಷತ್ರಿಯರಾದ ನಿಮ್ಮ ಶೀಲಕ್ಕೆ ಶೋಭಿಸುವದೆ? ಕುಲಯುವತಿಯರ ಮಾನಭಂಗ ಮಾಡಲೆಳಿಸುವದು ಎಂದೂ ತಾರಕವಾಗಲಾರದು."

"ಲಾವಣ್ಯಾವತಿ, ನೀನು ಅವಿವಾಹಿತಳಿರುವೆ. ಹೀಗಿದ್ದ ಮೇಲೆ ನನ್ನನ್ನು ವರಿ ಸುವದಕ್ಕೆ ಅಡ್ಡಿಯೇನು? ನಾನು ನಿನಗೆ ಜೀವದಾನ ಮಾಡಿರುವೆನು. ನಿನ್ನ ಮೇಲೆ

ನನ್ನ ಒಡೆತನವುಂಟು. ನನ್ನನ್ನು ವರಿಸಲೊಪ್ಪಿದರೆ ನೀನು ನಿಜವಾಗಿ ಸೌಖ್ಯ ಹೊಂದುವೆ.''

"ಸರದಾರರೆ, ಕುಲೀನ ಯುವತಿಯರ ಹೃದಯವು ಹೇಗಿರುವದೆಂಬದನ್ನು ನೀವು ಅರಿತಿಲ್ಲ. ಯಾವ ಕಾರಣದಿಂದಲೋ ಏನೋ ನನ್ನ ಮನಸ್ಸು ಆ ಯತೀಶ್ವರ ರಲ್ಲಿ ಲೀನವಾಗಿರುವದು. ಅವರಾದರೂ ನನ್ನಲ್ಲಿ ಪ್ರಣಯವುಳ್ಳವಳಾಗಿರುವರೆಂಬ ದನ್ನು ಮನವರಿಕೆ ಮಾಡಿಕೊಂಡಿರುವೆನು. ಅವರು ನಿಜವಾದ ಸಂನ್ಯಾಸಿಗಳಲ್ಲ. ಅವರನ್ನು ಬಿಟ್ಟು ಅನ್ಯರನ್ನು ನಾನು ವರಿಸುವದಿಲ್ಲ"

"ಸಂನ್ಯಾಸಿಗೆ ತೆಕ್ಕೆ ಬಿದ್ದರೆ ಮೈ ತುಂಬ ಬೂದಿ!" ಅರುಣಕುಮಾರಿಯು ಗಹ ಗಹಿಸಿ ನಗತೊಡಗಿದಳು. ಲಾವಣ್ಯವತಿಯು ಸುಮ್ಮನೆ ಕುಳಿತಳು. ಆಗ ಅರುಣ ಕುಮಾರಿಯು—"ಲಾವಣ್ಯಾ, ನಿನ್ನ ಅರುಣಕುಮಾರಿಯನ್ನು ಕಳುಹಿಸುವೆನು. ಇಲ್ಲಿ ಯೇ ಇರು."ಎಂದು ಹೇಳಿ, ಒಳಗೆ ಹೋದಳು. ಅನಂತರದಲ್ಲಿ ಅವಳು ಪುರುಷವೇಷ ವನ್ನು ಬಿಟ್ಟು ಹೊರಗೆ ಬಂದು--"ಲಾವಣ್ಯವತಿಯೆಂಬವಳು ನೀನೇ ಏನು? ನಿನ್ನನ್ನು ಸರೋಜಸುಂದರಿ ದೇವಿಯವರು ಏತಕ್ಕೆ ಕಳುಹಿಸಿರುವರು? ರಾಣಾಜಿಯವರು ನನ್ನ ನ್ನು ಚನ್ನಾಗಿ ಮೋಸಗೊಳಿಸಿದರು. ನನ್ನಲ್ಲಿ ಪ್ರೇಮವುಳ್ಳವರಂತೆ ನಟಿಸಿ, ರಾಜ ಧಾನಿಗೆ ಹೋಗಿ ಸ್ವಸ್ಥವಾಗಿ ಕುಳಿತರು. ನಾನು ಅವರ ದಾರಿ ನೋಡಿ ಉಪಾಯ ಗಾಣದೆ, ಮತ್ತೊಬ್ಬರನ್ನು ವಿವಾಹವಾದೆನು. ರಾಣಾಜಿಯುವರ ಈ ವರ್ತನವು ಯೋಗ್ಯವೆ? ಅವರನ್ನು ನಂಬಿ ನಾನು ಕೆಟ್ಟೆನು."

ಲಾವಣ್ಯವತಿಗೆ ಅರುಣಕುಮಾರಿಯ ಪರಿಚಯವು ಬೇಗನೆ ಹತ್ತಲಿಲ್ಲ. ಆಗ ಅವಳು—"ನೀವು ಅವಸರ ಮಾಡಿ ಕಂಡ ಕಂಡ ಸ್ತ್ರೀಯರ ಕೈ ಹಿಡಿಯುವ ಅವಿನೀತ ಪುರುಷರನ್ನು ಕೈ ಹಿಡಿದು ಕೆಟ್ಟಿರಲ್ಲವೆ?" ಇಷ್ಟು ಮಾತಾಡುವಷ್ಟರಲ್ಲಿ ಲಾವಣ್ಯವತಿಗೆ ಅರುಣಕುಮಾರಿಯ ಪರಿಚಯವಾಯಿತು. ಪುರುಷ ವೇಷ ಧರಿಸಿದ ಅರುಣಕುಮಾ ರಿಯಿಂದಲೇ ತನ್ನ ಸಂಕಟ ನಿವಾರಣೆಯಾಯಿತೆಂದು ಅವಳಿಗೆ ಮತ್ತಿಷ್ಟು ಆನಂದ ವಾಯಿತು. ಆಗ ಅವಳು —"ಅರುಣದೇವಿ, ನೀವು ಆದರ್ಶ ಕ್ಷತ್ರಿಯ ಲಲನೆಯ ರಿರುವಿರಿ! ದೇವಿ, ನಾನು ನಿಮ್ಮನ್ನು ಚೆನ್ನಾಗಿ ಗುರುತಿಸಿದೆನು. ಇಷ್ಟು ವೇಳೆಯು ವರೆಗೆ ನನ್ನೊಡನೆ ಮಾತು-ಕಥೆಗಳನ್ನಾಡಿದರೂ, ನೀವು ವೇಷಾಂತರ ಹೊಂದಿದವ ರೆಂಬದನ್ನು ನಾನು ಗುರುತಿಸಲಿಲ್ಲ. ನಿಮ್ಮ ಯೋಗ್ಯತೆಯು ಘನವಾದದ್ದಿರುವದು. ಅಂತೆಯೆ ರಾಣಾಜಿಯವರು ನಿಮ್ಮ ಸಲುವಾಗಿ ಭ್ರಮಿಷ್ಟರಾಗಿರುವರು."

"ಲಾವಣ್ಯವತಿ," ಅರುಣಕುಮಾರಿಯು ಸಾಶ್ರುನಯನೆಗಾಗಿ —"ಮಹಾ ರಾಣಾಜಿಯವರು ನನ್ನನ್ನು ನೆನಪಿನಲ್ಲಿಟ್ಟಿರುವರೆಂಬದನ್ನು ಕೇಳಿ ಪರಮಾನಂದ ವಾಗಿದೆ. ಸಖಿ, ಲಾವಣ್ಯಾ, ಮಹಾರಾಜ್ಞೀ ಸರೋಜಸುಂದರಿ ದೇವಿಯವರು ಅನು ಪಮ ಗುಣಾಢ್ಯರಿರುವರು. ಕೇವಲ ಪತಿಗೆ ಸೌಖ್ಯವಾಗಬೇಕೆಂಬ ಉದ್ದೇಶದಿಂದ ನನ್ನನ್ನು ಕರೆಯಿಸಲುದ್ಯುಕ್ತರಾದರಲ್ಲವೆ? ಅವರ ಗುಣಗೌರವವನ್ನು ಎಷ್ಟು ಹೊಗ

ಳಿದರೂ ಕಡಿಮೆಯೇ ಸರಿ. ಸವತಿಯನ್ನು ಮನೆಯಲ್ಲಿ ಕರೆಯಿಸಲಿಕ್ಕೆ ಯಾವ ಸ್ತ್ರೀಯು ಯತ್ನಿಸಬಹುದು?"

"ಅರುಣಕುಮಾರಿ ದೇವಿಯವರೆ, ಮಹಾರಾಜ್ಞಿಯವರು ಮಹಾನುಭಾವರಿರುವರು. ನೀವು ಚಿತೋಡಕ್ಕೆ ಹೋದ ಮೇಲೆ ಅವರ ಗುಣಗಳು ಇನ್ನೂ ಹೆಚ್ಚಾಗಿ ಗೊತ್ತಾಗುವವು."

"ನೀನು ಅನೇಕ ಸಂಕಟಗಳನ್ನನುಭವಿಸಿದ್ದು ನನ್ನ ಸಲುವಾಗಿ. ಲಾವಣ್ಯವತಿ, ನಿನ್ನ ಶ್ರಮಕ್ಕೆ ನಾನು ಪ್ರತಿಫಲವನ್ನೇನು ಕೊಡಲಿ?"

"ದೇವಿ," ಲಾವಣ್ಯವತಿಯು ಕೃತಜ್ಞತೆಯಿಂದ—"ನನಗೆ ಪ್ರತಿಫಲವನ್ನು ಮೊದಲೇ ಕೊಟ್ಟಿರುತ್ತೀರಿ. ಪ್ರಾಣಸಂಕಟದಿಂದ ಪಾರುಮಾಡಿದ್ದು ಕಡಿಮೆಯ ಪ್ರತಿಫಲವೇನು?"

"ಅದೇನೂ ಅಂತಹ ದೊಡ್ಡ ಪ್ರತಿಫಲವಲ್ಲ. ಅದಕ್ಕಿಂತ ಹೆಚ್ಚಿನ ಪಾರಿತೋಷಕವನ್ನು ಕೊಡಬೇಕೆಂದು ನನ್ನ ಇಚ್ಛೆಯುಂಟು. ನಿನಗೆ ಅತ್ಯಂತ ಪ್ರಿಯವಾದ ವಸ್ತುವನ್ನು ಕೊಟ್ಟರೆ ಸ್ವೀಕರಿಸುವೆಯಾ?"

"ದೇವಿ, ನನಗೆ ಪ್ರಿಯವಾದ ವಸ್ತುವು ಯಾವದೆಂದು ತಿಳಿದಿರುವಿರಿ?"

"ಯಾವದೇ ಇರಲಿ. ಅದು ನಿನಗೆ ಪ್ರಿಯವಾದದ್ದಿದ್ದರಾಯಿತು."

"ನನಗೆ ಯಾವದನ್ನಾದರೂ ಕೊಡುವದರಿಂದ ನಿಮಗೆ ತೊಂದರೆಯಾಗದೆ ಸುಖವಾಗುವಂತಿದ್ದರೆ, ಕೇವಲ ನಿಮ್ಮ ಆಗ್ರಹಕ್ಕಾಗಿ ಅದನ್ನು ಸ್ವೀಕರಿಸಲೊಪ್ಪುವೆನು."

"ನನಗೆ ತೊಂದರೆಯಾಗದಂತಹ ಹಾಗು ಆ ವಸ್ತುವಿನ ಸ್ವೀಕಾರದಿಂದ ಉಭಯತರಿಗೂ ಆನಂದ ಲಭಿಸುವಂತಹ ವಸ್ತುವನ್ನೇ ನಿನಗೆ ಕೊಡುವೆನು."

"ಅದು ಯಾವದು?"

"ನಿನ್ನ ಜೀವರಕ್ಷಣೆಗಾಗಿ ಸಂಕಟಕ್ಕೀಡಾದ ತರುಣ ಸಂನ್ಯಾಸಿಯನ್ನು ನೀನು ಪತಿಯೆಂದು ಸ್ವೀಕರಿಸಬೇಕು. ಲಾವಣ್ಯವತಿ, ಆ ವಸ್ತುವು ನಿನಗೆ ಪ್ರಿಯವಾದದ್ದಲ್ಲವೆ? ನೀನು ಅವನನ್ನು ವರಿಸಿದರೆ ನನಗೆ ಪರಮಾನಂದವಾಗುವದು. ಆ ಸಂನ್ಯಾಸಿಯು ನನ್ನ ಬಾಲ ಸ್ನೇಹಿತನು."

ಲಾವಣ್ಯವತಿಯು ನಾಚಿ ಕೆಲವು ವೇಳೆಯ ವರೆಗೆ ಸ್ವಸ್ಥವಾಗಿ ಕುಳಿತಳು. ವೈದ್ಯ ಹೇಳಿದ್ದೂ ಹಾಲೋಗರ, ರೋಗಿ ಬಯಸಿದ್ದೂ ಹಾಲೋಗರವೆಂಬಂತೆ ಅವಳ ಸ್ಥಿತಿಯಾಯಿತು. ಆನಂದಪರವಶಳಾಗಿ ತನ್ನ ಮನೋದಯವನ್ನು ತಟ್ಟನೆ ಬೈಲಿಗೊಳಿಸುವಂತಹ ಉದ್ಭ್ರಾಂತಳು ಲಾವಣ್ಯವತಿಯಿರಲಿಲ್ಲ. ಅವಳು ಅರುಣಕುಮಾರಿಯ ಮಾತಿಗೆ ಉತ್ತರವೀಯದೆ ತಟಸ್ಥಳಾಗಿ ಕುಳಿತಳು. ಹೀಗೆ ಸ್ತಬ್ಧಳಾಗಿ ಕುಳಿತರೂ ಅರುಣಕುಮಾರಿಗೆ ಅವಳ ಮನೋದಯವು ತಿಳಿಯದಿರಲಿಲ್ಲ. ಮುಖದ ಮೇಲಿನ ಆನಂದ ಲಜ್ಜೆಗಳ ಚಿಹ್ನಗಳಿಂದಲೇ ಅವಳು ಲಾವಣ್ಯವತಿಯ ಹೃದಯವನ್ನು ಒಳಿತಾಗಿ ಗುರುತಿಸಿದಳು. ಆಗ ಅವಳು ನಸುನಗುತ್ತ—"ಲಾವಣ್ಯ,

ಯಾಕೆ ಸುಮ್ಮನೆ ಕುಳಿತೆ? ತರುಣ ಸಂನ್ಯಾಸಿಯು ಪಾಣಿಗ್ರಹಣ ಮಾಡಲಿಕ್ಕೆ ಒಪ್ಪಿಗೆಯಿಲ್ಲವೇನು? ನೀನು ಅವನನ್ನು ಮನಃಪೂರ್ವಕವಾಗಿ ಪ್ರೀತಿಸುತ್ತಿರುವೆಯಷ್ಟೇ? ಆ ಸಂನ್ಯಾಸಿಯಂತು ನಿನ್ನಲ್ಲಿ ಪ್ರಣಯವುಳ್ಳವನಾಗಿರುವನೆಂಬದನ್ನು ನಾನು ಅರಿತಿರುವೆನು. ನಿನ್ನ ಒಪ್ಪಿಗೆಯಿದ್ದರೆ ವಿವಾಹಕಾರ್ಯವನ್ನು ನೆರವೇರಿಸಿ ಬಿಡುವೆನು. ಆ ಸಂನ್ಯಾಸಿಯ ಭಗವೀ ವಸ್ತ್ರಗಳನ್ನು ಯಾವಾಗ ಬಿಡಿಸುವೆನೋ ಎಂಬಂತಾಗಿದೆ"

"ಅರುಣದೇವಿ, ಅವರು ನಿಮ್ಮ ಬಾಲ ಸ್ನೇಹಿತರೆ?" ಲಾವಣ್ಯವತಿಯು ವಿಸ್ಮಿತಳಾಗಿ ಕೇಳಿದಳು.

ಅರುಣಕುಮಾರಿಯು ಆ ಸಂನ್ಯಾಸಿಯ ಜೀವನ ಚರಿತ್ರವನ್ನು ತಿಳಿಸಿದಳು.

ಲಾವಣ್ಯವತಿಯು ಸಂನ್ಯಾಸಿಯ ಚರಿತ್ರವನ್ನು ಕೇಳಿ ಸಾನಂದಾಶ್ಚರ್ಯವುಳ್ಳವಳಾದಳು ಅನಂತರದಲ್ಲಿ ಅರುಣಕುಮಾರಿಯು—"ಲಾವಣ್ಯ, ನೀನು ಆ ಸಂನ್ಯಾಸಿಯನ್ನು ವರಿಸುವೆಯಾ? ಒಂದು ವೇಳೆ ನೀನು ಅವನನ್ನು ವರಿಸಲೊಪ್ಪದಿದ್ದರೆ, ಖಂಡಿತವಾಗಿಯೂ ನಾನು ಚಿತೋಡಕ್ಕೆ ಬರುವದಿಲ್ಲ."

"ದೇವಿ! ನಾನು ನಿಮ್ಮ ಮಾತಿಗೆ ಹೊರತಿಲ್ಲ; ಆದರೆ ಅವರು ಸಂನ್ಯಾಸತ್ಯಾಗ ಮಾಡಲಿಕ್ಕೆ ಒಪ್ಪಬಹುದೆ?"

"ನೀನು ಮಿಕ್ಕ ವಿಷಯಗಳ ಯೋಚನೆ ಮಾಡಬೇಡ. ಅವನು ವೇಷಧಾರಿ ಸಂನ್ಯಾಸಿಯಿರುವನು. ಕ್ಷಣದಲ್ಲಿ ಭಗವೀ ವಸ್ತ್ರಗಳನ್ನು ಬಿಡಲಿಕ್ಕೆ ಹಚ್ಚುವೆನು."

"ನಾನು ನಿಮ್ಮ ಮಾತಿಗೆ ಹೊರತಿಲ್ಲವೆಂದು ಮೊದಲೇ ಹೇಳಿರುವೆನು."

ಲಾವಣ್ಯವತಿಯು ಹೀಗೆ ನುಡಿದ ಕೂಡಲೆ ಅರುಣಕುಮಾರಿಗೆ ಆನಂದವಾಯಿತು. ಕೂಡಲೆ ಅವಳು ಲಾವಣ್ಯವತಿಯನ್ನು ಕೈ ಹಿಡಿದು ಸಂನ್ಯಾಸಿಯು ಕುಳಿತ ಕೋಣೆಗೆ ಕರೆತಂದಳು. ಲಾವಣ್ಯವತಿಯ ಜೊತೆಯಲ್ಲಿ ಮತ್ತೊಬ್ಬ ಸ್ತ್ರೀಯು ಬಂದದ್ದು ನೋಡಿ ಸಂನ್ಯಾಸಿಯು ದಂಗು ಬಡೆದನು. ಮುಂದೆ ಸ್ವಲ್ಪ ವೇಳೆಯ ಮೇಲೆ ಅವನು—"ಈ ಮಂದಿರದ ಒಡೆಯರು ಎಲ್ಲಿ ಹೋದರು?" ಎಂದು ಕೇಳಿದನು.

"ಯತಿಶ್ರೇಷ್ಠರೆ, ಅವರು ಇದೀಗ ಹೊರಗೆ ಹೋದರು. ನಿಮ್ಮ ಯೋಗಕ್ಷೇಮವನ್ನು ತೆಗೆದುಕೊಳ್ಳುವದಕ್ಕೆ ಅವರು ನನಗೆ ಆಜ್ಞೆ ಮಾಡಿರುವರು."

"ನೀವು ಅವರ ಸಹಧರ್ಮಚಾರಿಣಿಯುವರೇನು?" ಎಂದು ಯತಿಯು ನುಡಿದ ಕೂಡಲೆ ಅರುಣಕುಮಾರಿಯು ಗಹಗಹಿಸಿ ನಗತೊಡಗಿದಳು. ಕೂಡಲೆ ಸಂನ್ಯಾಸಿಯು ಅವಳನ್ನು ಗುರುತಿಸಿ—"ಅರುಣಕುಮಾರಿ!"

"ವಿಜಯಲಾಲರೆ, ಈಗ ಗುರುತಿಸಿದಿರೇನು?"

"ನಭೂತಪೂರ್ವವಾದ ಆನಂದ ವಿಸ್ಮಯಗಳನ್ನು ಹೊಂದಿದೆನು. ಪುರುಷ ವೇಷವನ್ನು ಧರಿಸಿದಾಗ ನಿನ್ನನ್ನು ನಾನು ಎಷ್ಟೂ ಗುರುತಿಸಲಿಲ್ಲ."

"ಈಗಾದರೂ ಗುರುತಿಸಿದ್ದು ಮಹದ್ಭಾಗ್ಯವೆಂದು ತಿಳಿದಿರುವೆನು."

"ನನ್ನ ಪಂಚಪ್ರಾಣಗಳಂತಿದ್ದ ಅರುಣಳನ್ನು ಹೇಗೆ ಗುರುತಿಸದಿರಲಿ?"

"ವಿಜಯುಲಾಲರೆ, ನಿಮ್ಮ ಪಂಚಪ್ರಾಣಗಳಾಗಿದ್ದ ಅರುಣಳು ಈಗ ಮಹಾರಾಣಾ ಉದಯಸಿಂಗರ ಪಂಚಪ್ರಾಣವಾಗಿರುವಳು. ನೀವು ಅವಳನ್ನು ಭಗಿನಿಯಂತೆ ನೋಡಲಾರಿರಾ?"

"ಅರುಣದೇವಿ, ನೀನು ನನಗೆ ಸಹೋದರಿ ಸಮಾನಳೆಂದು ಭಾವಿಸುವೆನು. ಈ ವಿಜಯುಲಾಲನು ಪರಸ್ತ್ರೀ ಸಹೋದರನಿರುವನು. ಮಹಾರಾಣಾ ಉದಯಸಿಂಗರ ರಾಣಿಯಾಗುವ ಸುಯೋಗವು ನಿನಗೆ ಒದಗಿದ್ದರಿಂದ ಪರಮಾನಂದವಾಗಿದೆ. ಅರುಣ, ನೀನು ಸುಲಿಗೆಗಾರರ ಕೈಯಲ್ಲಿ ಸಿಲುಕಿದ ಮೇಲೆ ಯಾವ ಯಾವ ಕಷ್ಟಗಳನ್ನು ಹೊಂದಿದೆ? ಎಲ್ಲ ಸಂಗತಿಗಳನ್ನರುಹು."

ಅರುಣಕುಮಾರಿಯು ವಿಜಯುಲಾಲನಿಗೆ ಎಲ್ಲ ಸಂಗತಿಗಳನ್ನು ತಿಳಿಸಿದಳು. ಅರುಣಳ ಚರಿತ್ರವನ್ನು ಕೇಳಿ ಅವನಿಗೆ ಸಂತೋಷವಾಯಿತು. ಆಗ ಅವನು ಗದ್ಗದಸ್ವರದಿಂದ—"ಅರುಣದೇವಿ, ಇಂದು ನನ್ನ ಎಲ್ಲ ಕಾಮನೆಗಳೂ ಪೂರ್ಣವಾದವು. ಬಾಲಸ್ನೇಹಿತೆಯಾದ ನಿನ್ನನ್ನು ಕಾಣಬೇಕೆಂಬ ಇಚ್ಛೆಯಿಂದ ನಾನು ಎಲ್ಲ ಕಡೆಗೂ ತಿರುಗಾಡಿದೆನು. ಇಂದು ನನ್ನ ಅಭಿಲಾಷೆಯು ಈಡೇರಿತು. ಮಹಾರಾಣಾಜಿಯವರೊಡನೆ ನೀನು ಸುಖವಾಗಿರು."

"ವಿಜಯುಲಾಲರೆ, ನಾನು ಸುಖಿಯಾಗಬೇಕೆಂದು ನೀವು ಇಚ್ಛಿಸುತ್ತಿರುವಿರಷ್ಟೆ?"

"ನಿಜವು."

"ನಾನು ಸುಖ ಹೊಂದಬೇಕಾದರೆ ನನ್ನ ವಿನಂತಿಯನ್ನು ಮನ್ನಿಸಬೇಕು."

"ಅದೇನು?" ಆತುರತೆಯಿಂದ ವಿಜಯುಲಾಲನು ಕೇಳಿದನು.

"ನೀವೂ ಸೌಖ್ಯದಲ್ಲಿರಬೇಕೆಂದು ನನ್ನ ಇಚ್ಛೆಯಿರುವದು"

"ಈಗಿದ್ದ ಸ್ಥಿತಿಯನ್ನೇ ಸುಖವೆಂದು ಭಾವಿಸಿರುವೆನು."

"ನನ್ನ ಇಚ್ಛೆಯಂತೆ ನೀವು ನಡೆದರೆ ನನಗೆ ಸುಖವಾಗುವದು; ನೀವೂ ಸುಖ ಹೊಂದುವಿರಿ. ನೂತನ ಪರಿಚಿತಳಾದ ಈ ಲಾವಣ್ಯವತಿಗೂ ಸುಖವಾಗುವದು."

ಲಾವಣ್ಯವತಿಗೆ ಅರುಣಕುಮಾರಿಯ ಉಪೋದ್ಘಾತದ ಪಡಿಕಟ್ಟು ಗೊತ್ತಾಗಿ ಲಜ್ಜಾವನತ ಮುಖಿಯಾದಳು.

"ಅರುಣ, ನನಗೆ ನಿನ್ನ ಅಭಿಪ್ರಾಯವು ತಿಳಿಯಲೊಲ್ಲದು."

'ವಿಜಯುಲಾಲರೆ, ನೀವು ವಿವಾಹವಾಗಬೇಕೆಂದು ನನ್ನ ಉತ್ಕಟೇಚ್ಛೆಯುಂಟು'

"ಅರುಣ, ನಾನು ಸಂನ್ಯಾಸಿಯಿರುವೆನು."

"ಅರ್ಜುನ ಸಂನ್ಯಾಸಿಗಳಲ್ಲವೆ?" ನಗುತ್ತ ಅರುಣಕುಮಾರಿಯು ಕೇಳಿದಳು. ವಿಜಯುಲಾಲನು ನಿರುತ್ತರನಾದನು.

"ನೀವು ಸಂನ್ಯಾಸಿಗಳಾದರೆ ನಿಮ್ಮ ಪತ್ನಿಯೂ ಸಂನ್ಯಾಸಿನಿಯು. ಇದರಲ್ಲಿ ಕೆಡುವದೇನು? ನೀವು ವಿವಾಹವಾಗಿ ಗೃಹಸ್ಥಾಶ್ರಮಿಗಳಾಗಲಿಕ್ಕೆ ಬೇಕು."

"ಗೃಹವಿಲ್ಲ; ಭೂಮಿಯಿಲ್ಲ; ಸಿರಿ-ಸಂಪತ್ತುಗಳಿಲ್ಲ. ಇಂತಹ ದೈನ್ಯಾವಸ್ಥೆಗೀಡಾದ

ನಾನು ಹೇಗೆ ಗೃಹಸ್ಥಾಶ್ರಮಿಯಾಗಲಿ? ಇದರಿಂದ ನನ್ನ ಕೈ ಹಿಡಿದ ಗೃಹಿಣಿಗೆ ಸೌಖ್ಯವು ಲಭಿಸುವದೆ?"

"ವಿಜಯಲಾಲರೆ, ಮನಸ್ಸಿನ ಮೇಲೆ ತೆಗೆದುಕೊಂಡರೆ ಎಲ್ಲವೂ ಸಾಧ್ಯವಾಗುವವು ಶೂರರೂ ಸಾಹಸಿಗಳೂ ಸುವಿದ್ಯಾವಂತರೂ ಆದ ನಿಮಗೆ ಯಾವ ಸೌಕರ್ಯಗಳು ದೊರಕಲಿಕ್ಕಿಲ್ಲ? ನೀವು ಯಾವ ವಿಧದ ಯೋಚನೆಗೂ ಒಳಗಾಗದೆ ವಿವಾಹಕ್ಕೆ ಸಿದ್ಧರಾಗಬೇಕು ನಾನು ನಿಮಗೆ ಒಂದು ಕನ್ಯೆಯನ್ನು ಗೊತ್ತುಪಡಿಸಿರುವೆನು."

"ಆ ಕನ್ಯೆಯು ಯಾರು?" "ಆ ಕನ್ಯೆಯು ನಿಮ್ಮ ಮನಸ್ಸಿಗೆ ಬಂದಿರುವಳು."

"ಅರುಣದೇವಿ, ನೀವು ಗೊತ್ತುಪಡಿಸಿದ ವಧುವು ಯಾರೆಂಬದನ್ನು ಹೇಳಿರಿ."

"ಇವಳೇ! ನಿಮ್ಮ ಸಮ್ಮುಖದಲ್ಲಿ ಕುಳಿತಿರುವ ಲಾವಣ್ಯಲತೆಯಾದ ಲಾವಣ್ಯವತಿಯೇ ನಿಮ್ಮ ಪ್ರಣಯಿನಿಯು!"

ವಿಜಯಲಾಲನು ಲಾವಣ್ಯವತಿಯ ಮುಖವನ್ನು ನೋಡಿದನು. ಅದೇ ವೇಳೆಯಲ್ಲಿ ಲಾವಣ್ಯವತಿಯೂ ವಿಜಯಲಾಲನನ್ನು ನೋಡಿದಳು. ಇಬ್ಬರ ದೃಷ್ಟಿಗಳೂ ಒಂದಾದವು. ಪರಕ್ಷಣದಲ್ಲಿ ಇಬ್ಬರೂ ಮುಖವನ್ನು ಕೆಳಗೆ ಮಾಡಿದರು. ಅನಂತರದಲ್ಲಿ ವಿಜಯಲಾಲನು ಅರುಣಕುಮಾರಿಯನ್ನು ಕುರಿತು—"ನನ್ನನ್ನು ಸಂಸಾರ ಬಂಧನದಲ್ಲಿ ತೊಡಗಿಸಬೇಕೆನ್ನುವೆಯಾ?"

"ವಿಜಯಲಾಲರೆ, ನೀವಿಬ್ಬರೂ ಪರಸ್ಪರರಲ್ಲಿ ಆತ್ಮಾರ್ಪಣೆ ಮಾಡಿರುತ್ತೀರಿ. ಪ್ರೇಮಗಳು ಏಕಜೀವವಾಗಿರುವವು. ನಿಮ್ಮಿಬ್ಬರ ವಿವಾಹವನ್ನು ನೆರವೇರಿಸಿಯೇ ನಾನು ಚಿತೋಡಕ್ಕೆ ಪ್ರಯಾಣ ಮಾಡಬೇಕಾಗಿದೆ."

"ನಿನ್ನ ಇಚ್ಛೆಗೆ ಹೊರತಿಲ್ಲ." ವಿಜಯಲಾಲನು ಆನಂದದಿಂದ ನುಡಿದನು.

"ರಾಣಿಯವರೆ!" ಇಷ್ಟು ವೇಳೆಯ ವರೆಗೆ ಸುಮ್ಮನೆ ಕುಳಿತ ಲಾವಣ್ಯವತಿಯು ಅವನತಮುಖಿಯಾಗಿಯೆ—"ವಿವಾಹಕ್ಕೆ ಅಷ್ಟು ಅವಸರವು ಕಾರಣವಿಲ್ಲ. ಮಹಾರಾಜ್ಞಿಯವರು ಬೇಗನೆ ಬರಲಿಕ್ಕೆ ಆಜ್ಞೆ ಮಾಡಿರುವರು."

"ನಾನು ಸರೋಜಸುಂದರಿ ದೇವಿಯವರಿಗೆ ಹೇಳಿಕೊಳ್ಳುವೆನು. ವಿವಾಹದಂತಹ ಮಹತ್ಕಾರ್ಯದ ಸಲುವಾಗಿ ಎರಡು ದಿನ ತಡವಾದರೆ ಅವರು ಕ್ರೋಧಗೊಳ್ಳುವದಿಲ್ಲ."

ಅರುಣಕುಮಾರಿಯು ಹೀಗೆ ನುಡಿಯಲು, ಲಾವಣ್ಯವತಿಯು ನಿರುಪಾಯಳಾದಳು. ವಿವಾಹದ ಸಿದ್ಧತೆಯು ನಡೆಯಿತು. ಸುಮುಹೂರ್ತದಲ್ಲಿ ಲಾವಣ್ಯವತಿ-ವಿಜಯಲಾಲರ ವಿವಾಹ ಮಹೋತ್ಸವವು ವಿಜೃಂಭಣೆಯಿಂದ ನೆರವೇರಿತು.

ಚಿತೋಡದಿಂದ ಹೊರಡುವಾಗ ತನ್ನ ವಿವಾಹದ ವಿಷಯವು ಲಾವಣ್ಯವತಿಯ ಕನಸು-ಮನಸ್ಸಿನಲ್ಲಿ ಕೂಡ ಬಂದಿರಲಿಲ್ಲ. ಅಕಲ್ಪಿತ ಘಟನೆಯಿಂದ ವಿವಾಹಕಾರ್ಯವು ನೆರವೇರಿದ್ದರಿಂದ ಅವಳಿಗೆ ಸೋಜಿಗವಾಯಿತು.

---

## ಒಂಟಿಯಾಗಿ ಹೋದವಳು ಜೊತೆಯಾಗಿ ಬಂದೆಯಾ?

ನಿಜವಾದ ಸುಖಿಗಳು ಈ ಜಗತ್ತಿನಲ್ಲಿಯಾರಿರುವರು? ಸುಖವು ಯಾವ ವಸ್ತುವಿನಲ್ಲಿರುವದು? ಧನದಲ್ಲಿ ಸೌಖ್ಯವಿಲ್ಲ; ರಾಜ್ಯಪ್ರಾಪ್ತಿಯಲ್ಲಿ ಸೌಖ್ಯವಿಲ್ಲ. ರಾಜ್ಯವೈಭವಗಳನ್ನನುಭವಿಸುವ ಯೋಗವಿದ್ದರೂ, ಅನೇಕ ಉಪಾಧಿಗಳ ಮೂಲಕ ರಾಜನಾದವನು ದುಃಖಿತ ಹೃದಯಿಯಾಗಿರುವನು. ಪೃಥ್ವಿಯ ಏಕ ಛತ್ರಾಧಿಪತ್ಯವು ದೊರೆತರೂ ಮನುಷ್ಯನಿಗೆ ಸುಖವು ಲಭಿಸುವದೆಂದು ಕಲ್ಪಿಸಲಿಕ್ಕೆ ಮಾರ್ಗವಿಲ್ಲ. ಮನಶ್ಶಾಂತಿಯಿಲ್ಲದ ಸಾರ್ವಭೌಮನಿಗಿಂತ ಶಾಂತಮನಸ್ಕನಾದ ಭಿಕ್ಷುಕನು ಶ್ರೇಷ್ಠನು. ಇದ್ದ ಸ್ಥಿತಿಯಲ್ಲಿ ಸೌಖ್ಯವನ್ನು ಕಲ್ಪಿಸುವದೆಂದರೆ, ಅದೊಂದು ಯೋಗವು; ಪರಮ ತಪಶ್ಚರ್ಯವು. ವಿವಿಧ ವಿಕಾರಗಳಿಂದ ಚಿತ್ತಕ್ಷೋಭೆ ಹೊಂದಿದ ಮನುಷ್ಯನಲ್ಲಿ ಎಷ್ಟು ಸಿರಿಯಿದ್ದರೇನು? ಎಷ್ಟು ವೈಭವವಿದ್ದರೇನು? ಎಷ್ಟು ಜನ ಪುತ್ರ-ಮಿತ್ರ-ಕಲತ್ರಾದಿಗಳಿದ್ದರೇನು? ಸುಖವು ವಸ್ತುಗಳಲ್ಲಿರುವದಿಲ್ಲ; ಮನಸ್ಸಿನಲ್ಲಿರುತ್ತದೆ. ಮನುಷ್ಯನು ಎಲ್ಲಿ ಸುಖವಿರುವದೆಂದು ನಂಬುವನೋ ಅಲ್ಲಿ ಸುಖವು ನಿಜವಾಗಿ ಲಭಿಸುವದಿಲ್ಲ. ಮನುಷ್ಯನು ಅತೃಪ್ತಮನಸ್ಕನು. ಅವನಿಗೆ ಎಂದೂ ತೃಪ್ತಿ ದೊರಕುವದಿಲ್ಲ. ಪ್ರತಿಯೊಬ್ಬನು ಇದ್ದ ಸ್ಥಿತಿಗಿಂತ ಹೆಚ್ಚಿನ ಸುಖವನ್ನು ಬಯಸುತ್ತಿರುತ್ತಾನೆ. ಅವನ ಆಕಾಂಕ್ಷೆಗೆ ಸೀಮೆಯಿರುವದಿಲ್ಲ. ಅದು ಇಂತಹ ಸ್ಥಳಕ್ಕೆ ಹೋಗಿ ಪೂರ್ಣವಾಗಿರುವದೆಂದು ಹೇಳಲಿಕ್ಕೆ ಬರುವದಿಲ್ಲ. ಪರಮಾತ್ಮನ ಶಕ್ತಿಯಂತೆ ಅದು ಅನಂತವೂ ಅಪಾರವೂ ಆಗಿರುವದು. ಅತೃಪ್ತಿಮನಸ್ಕನಿಗೆ ಸುಖ-ಶಾಂತಿಗಳು ಎಂದೂ ಲಭಿಸುವದಿಲ್ಲ.

ಉದಯಸಿಂಹನು ಅತೃಪ್ತಮನಸ್ಕನಾಗಿದ್ದನು. ಅವನು ಕುಮಳಮೇರದ ಅಸಾಸಾಹ ಸಾಮಂತನಲ್ಲಿ ಬೆಳೆಯುತ್ತಿದ್ದಾಗ ತಾನು ದೊಡ್ಡ ಸರದಾರನೂ ಧನವಂತನೂ ಹೇಗಾದೇನೆಂದು ಚಿಂತಿಸುತ್ತಿದ್ದನು. ಮುಂದೆ ಸುಸ್ಥಿತಿಯು ಒದಗಹತ್ತಿದ ಹಾಗೆ ಉತ್ತಮ ರೂಪವತಿಯಾದ ಸರದಾರ ಪುತ್ರಿಯನ್ನು ವಿವಾಹ ಮಾಡಿಕೊಳ್ಳಲಿಕ್ಕೆ ಆತುರಗೊಂಡನು. ಅವನ ಇಚ್ಛೆಯಂತೆ ಗುಣವತಿಯರೂ ರೂಪವತಿಯರೂ ಆದ ಇಬ್ಬರು ಪತ್ನಿಯರು ಲಭಿಸಿದರು. ಅನಂತರದಲ್ಲಿ ಅಪ್ಸರೆಯನ್ನು ಜರೆಯುವ ಅರುಣಕುಮಾರಿಯನ್ನು ಬಯಸಿದನು. ಚಿತೋಡದ ರಾಜಸಿಂಹಾಸನವನ್ನು ದೊರಕಿಸಲಿಕ್ಕೆ ಹವಣಿಸಿದನು. ರಾಜಸಿಂಹಾಸನ ದೊರೆತ ಮೇಲಾದರೂ ಸುಖವು ದೊರೆಯಬಹುದೆಂದು ಅವನ ಗ್ರಹಿಕೆಯಿತ್ತು; ಆದರೆ ಅರುಣಕುಮಾರಿಯ ನಿಧಿಧ್ಯಾಸದಿಂದ ಅವನ ಮನಸ್ಸು ಒಂದೇಸವನೆ ತಲ್ಲಣಿಸತೊಡಗಿತ್ತು. ತನಗೆ ಇಡೀ ಜನ್ಮದಲ್ಲಿ ಸುಖವು ದೊರೆಯುವದಿಲ್ಲವೆಂದು ಅವನು ಈಗಾಗಲೆ ನಿರಾಶೆ ಹೊಂದಿದ್ದನು. ಅತಿರೇಕವಾದ ನೈರಾಶ್ಯದಿಂದ ಅವನ ಮನಸ್ಸು ಒಮ್ಮೊಮ್ಮೆ ವಿರಕ್ತ ಭಾವವನ್ನು

ತಳೆಯುತ್ತಿತ್ತು. ರಾಜನಿಗೆ ಶತ್ರುರಾಜರ ಭಯ; ಧನವಂತನಿಗೆ ಚೋರ ಭಯ; ಪ್ರೇಮಕ್ಕೆ ವಿರಹ ಭಯ; ಸೌಂದರ್ಯಕ್ಕೆ ಪಾತಕೀ ದೃಷ್ಟಿಯುವರ ಭಯ. ಹೀಗೆ ಒಂ-ದೊಂದಕ್ಕೆ ಒಂದೊಂದರ ಭಯವಿದ್ದುದರಿಂದ ಸಂಸಾರದಲ್ಲಿ ಸುಖವು ಲಭಿಸಲಾರದೆಂದೂ ನಿತ್ಯ ಸುಖವು ದೊರಕಬೇಕಾದರೆ ಪರಮಾತ್ಮನನ್ನೇ ಶರಣು ಹೋಗಬೇಕೆಂದೂ ತಿಳಿದು, ಅವನು ಒಮ್ಮೊಮ್ಮೆ ಈಶಸ್ತವನದಲ್ಲಿ ವೇಳೆಗಳೆಯುತ್ತಿದ್ದನು; ಆದರೆ ಚಂಚಲ ಮನಸ್ಕನೂ ಉದ್ಭ್ರಾಂತನೂ ಆದ ಅವನಲ್ಲಿ ಯಾವ ವೃತ್ತಿಯೂ ಸ್ಥಿರವಾಗಿ ಉಳಿ-ಯುತ್ತಿದ್ದಿಲ್ಲ. ಕಡೆಗೆ ಅವನ ಮನಸ್ಸು ಹೃದಯೇಶ್ವರಿಯಾಗಿದ್ದ ಅರುಣಕುಮಾರಿಯ ಧ್ಯಾನದಲ್ಲಿ ಮಗ್ನವಾಗುತ್ತಿತ್ತು.

ಅತಿರೇಕವಾದ ಔದಾಸೀನ್ಯ ಹೊಂದಿದ ರಾಣಾನಿಗೆ ಮನಶ್ಶಾಂತಿಯು ಲಭಿಸ ಬೇಕೆಂಬ ಉದ್ದೇಶದಿಂದ ಅವನ ಪಟ್ಟಮಹಿಷಿಯಾದ ಸರೋಜಸುಂದರಿಯು ಅರುಣ ಕುಮಾರಿಯನ್ನು ಕರೆತರುವದಕ್ಕೆ ತನ್ನ ದಾಸಿಯಾದ ಲಾವಣ್ಯವತಿಯನ್ನು ಕಳುಹಿ ಸಿದ್ದಳಷ್ಟೇ? ಪತಿಯ ಆಜ್ಞೆಯಿಲ್ಲದೆ ಈ ಕಾರ್ಯದಲ್ಲಿ ತೊಡಗಿದ್ದು ಅನುಚಿತವಾಯಿತೋ ಏನೋ ಎಂದು ಅವಳು ಅಂಜಿದಳು. ತನ್ನಿಂದ ಘಟಿಸಿದ ತಪ್ಪಿಗೆ ಒಪ್ಪಿಕೊಂಡು ಕ್ಷಮಾಯಾಚನೆ ಮಾಡಬೇಕೆಂದು ನಿರ್ಧರಿಸಿ, ಅವಳು ತನ್ನ ಪ್ರಮೋದ ಭುವನದಲ್ಲಿ ಪತಿಯ ಆಗಮನವನ್ನು ನಿರೀಕ್ಷಿಸುತ್ತ ಕುಳಿತಳು.

ಉದಯಸಿಂಗನು ಎಷ್ಟೇ ಉದಾಸೀನನಾಗಿದ್ದರೂ, ರಾಜಕಾರಣವನ್ನು ಎಷ್ಟೇ ದುರ್ಲಕ್ಷಿಸುತ್ತಿದ್ದರೂ, ರಾಜ್ಯಭಾರವನ್ನು ಹೊತ್ತವನಾದ ಅವನು ಅಲ್ಪಸ್ವಲ್ಪ ವೇಳೆ ಯಾದರೂ ಓಲಗಕ್ಕೆ ಹೋಗಲೇಬೇಕಾಗುತ್ತಿತ್ತು. ಎಷ್ಟಾದರೂ ಕರ್ತವ್ಯವನ್ನು ಈಡೇ ರಿಸಬೇಕಾಗುತ್ತಿತ್ತು. ಓಲಗದಲ್ಲಿ ಮಾಳವಾ ದೇಶಕ್ಕೆ ಸಂಬಂಧಿಸಿದ ರಾಜಕಾರಣದ ಚರ್ಚೆಯು ಬಹಳ ವೇಳೆಯ ವರೆಗೆ ನಡೆದುದರಿಂದ ಉದಯಸಿಂಗನು ಪ್ರಮೋದ ಮಂದಿರಕ್ಕೆ ದಿನಕ್ಕಿಂತ ತಡವಾಗಿ ಬಂದನು. ಪತಿಯು ಬಂದದ್ದರಿಂದ ಸರೋಜಸುಂದ ರಿಗೆ ಆನಂದವಾಯಿತು. ಆಗ ಅವಳು—"ಮಹಾರಾಣಾಜಿಯವರು ಇಂದು ತಡ ವಾಗಿ ಬಂದ ಕಾರಣವು ಗೊತ್ತಾಗಲಿಲ್ಲ."

"ಇಂದು ಮಹತ್ವದ ರಾಜಕಾರಣದ ವಿಷಯಕ್ಕಾಗಿ ವಾದ-ವಿವಾದ ನಡೆದಿದ್ದ ರಿಂದ ಬೇಗನೆ ಬರುವದಾಗಲಿಲ್ಲ."

"ಅಂತಹ ಮಹತ್ವದ ರಾಜಕಾರಣವು ಯಾವದು?"

"ಮಾಳವಾಧಿಪತಿಯಾದ ರಾಜಬಹಾದ್ದೂರನಿಗೆ ಅಕಬರ ಬಾದಶಹನು ಕಡು ಹಗೆಯಾಗಿರುವನು. ಬಾದಶಹನು ಮಾಳವದ ಮೇಲೆ ಯಾವ ಹೊತ್ತಿಗೆ ದಾಳಿ ಮಾಡುವನೆಂಬದರ ನಿಯಮವಿಲ್ಲ. ಪ್ರಸಂಗವೊದಗಿದರೆ ಸ್ವಜನಾಭಿಮಾನದಿಂದ ಸಹಾಯ ಮಾಡಬೇಕೆಂದು ರಾಜಬಹಾದ್ದೂರನ ವಿನಂತಿ ಪತ್ರವು ಬಂದಿತ್ತು. ಅವ ನಿಗೆ ಸಹಾಯ ಮಾಡಬೇಕೋ-ಮಾಡಬಾರದೋ ಎಂಬ ಬಗ್ಗೆ ಇಂದು ಬಹಳ ಹೊ-ತ್ತಿನ ವರೆಗೆ ಮಾತು-ಕಥೆಗಳು ನಡೆದವು."

"ಕೊನೆಗೆ ಯಾವ ಬಗೆಯ ನಿರ್ಧಾರವಾಯಿತು?" ರಾಣಿಯು ಉತ್ಕಂಠೆಯಿಂದ ಕೇಳಿದಳು.

"ಸದಭಿಮಾನಿಯಾದ ಮನುಷ್ಯನು ಸ್ವಜನರಿಗೆ ಸಹಾಯ ಮಾಡಲಿಕ್ಕೆ ಹಿಂದೆ ಮುಂದೆ ನೋಡುವನೆ? ಪ್ರಸಂಗವೊದಗಿದರೆ ಸಾಧ್ಯವಿದ್ದವುಟ್ಟಿಗೆ ನೆರವಾಗಲಿಕ್ಕೆ ನನ್ನ ಸಿದ್ಧತೆಯಿರುವದೆಂದು ಅವನಿಗೆ ತಿಳಿಸಿರುವೆನು."

"ಒಳಿತು ಮಾಡಿದಿರಿ. ಸ್ವಜನಾಭಿಮಾನದಿಂದ ಕೆಲಸ ಮಾಡುವದು ಶ್ರೇಯಸ್ಕರವಾಗಿರುವದು. ಅಕಬರ ಬಾದಶಹನು ಮುಂಗೈ ಕಸುವಿನ ಮೇಲೆ ಅನ್ಯರ ದೇಶಗಳನ್ನು ಸ್ವಾಧೀನಪಡಿಸಿಕೊಳ್ಳಬೇಕೆಂಬ ದುರಾಕಾಂಕ್ಷೆಯುಳ್ಳವನಾಗಿರುವನು. ನಿಜವಾದ ಕ್ಷಾತ್ರವೀರರೂ ಧರ್ಮಾಭಿಮಾನಿಗಳೂ ಅವನ ವಿರುದ್ಧವಾಗಿ ಷಡ್ಡುಹೊಡೆದು ನಿಲ್ಲದಿದ್ದರೆ, ಮಹತ್ವಾಕಾಂಕ್ಷಿಯಾದ ದಿಲ್ಲೀಶ್ವರನು ಇಡೀ ಭರತವರ್ಷವನ್ನೇ ಸ್ವಾಧೀನಕ್ಕೆ ತೆಗೆದುಕೊಳ್ಳುವನು. ಅನ್ಯಾಯಾಕ್ರಾಂತ ಮಾಡಲೆಳಿಸುವ ರಾಕ್ಷಸೀ ರಾಜ್ಯತೃಷ್ಣೆಯು ಜನರ ಅವ್ಯಾಪಾರೇಷು ವ್ಯಾಪಾರದ ನಿಯಂತ್ರಣಗೊಳಿಸಲಿಕ್ಕೇಬೇಕು."

"ಚೋಂಡಾ ಸರದಾರರೂ ಮಂತ್ರಿ-ಸೇನಾಪತಿಗಳೂ ಮಾಳವಾಧಿಪತಿಗೆ ನೆರವಾಗಲಿಕ್ಕೆ ಅನುಕೂಲವಾದ ಅಭಿಪ್ರಾಯವಿತ್ತಿರುವರು."

'ಏನೂ ಅಡ್ಡಿಯಿಲ್ಲ. ಪ್ರಸಂಗವೊದಗಿದ ಕೂಡಲೆ ನೀವು ಅವನಿಗೆ ನೆರವಾಗಿರಿ.' ಎಂದು ಸರೋಜಸುಂದರಿಯು ನುಡಿದು, "ಮಹಾರಾಜರೆ, ನನ್ನಿಂದ ಒಂದು ಅಪರಾಧವು ಘಟಿಸಿರುವದು ನೀವು ನನ್ನನ್ನು ಕ್ಷಮಿಸುವಿರಾ?"

"ಪ್ರಿಯ ಸರೋಜ, ನಿನ್ನಿಂದ ಅಪರಾಧವು ಘಟಿಸಿರುವದೆ? ಸುಳ್ಳು! ನೀನು ಬುದ್ಧಿಪೂರ್ವಕವಾಗಿ ಸುಳ್ಳು ಮಾತನ್ನಾಡತೊಡಗಿರುವೆ!"

"ನಿಜವಾಗಿಯೂ ನಾನು ಅಪರಾಧಿನಿಯಿರುವೆನು."

"ಪ್ರಿಯೆ, ನೀನು ಯಾವ ಅಪರಾಧ ಮಾಡಿರುವೆ?"

ಉದಯಸಿಂಗನಿಗೆ ತಿಳಿಸದೆ ಅರುಣಕುಮಾರಿಯನ್ನು ಕರೆಯಲಿಕ್ಕೆ ಲಾವಣ್ಯವತಿಯನ್ನು ಕಳುಹಿಸಿದ್ದು ಅನುಚಿತವಾಯಿತೆಂದು ಸರೋಜಸುಂದರಿಯು ತಿಳಿದಿದ್ದಳು. ತನಗೆ ತಿಳಿಸದೆ ಇಂತಹ ಕೆಲಸ ಮಾಡಿದ ಕಾರಣವೇನೆಂದು ಪತಿಯು ಕೇಳಿದರೆ, ಏನು ಉತ್ತರವೀಯಬೇಕೆಂದು ಅವಳು ಚಿಂತೆಗೊಳಗಾಗಿದ್ದಳು. ಆಗ ಅವಳು ವಸ್ತುಸ್ಥಿತಿಯನ್ನು ಪತಿಗೆ ತಿಳಿಸಿ ಕ್ಷಮಾಯಾಚನೆ ಮಾಡಬೇಕೆಂಬ ಮನಸ್ಸಿನಿಂದ ಪ್ರಸ್ತಾಪ ತೆಗೆದಳು. ಆಗ ಅವಳು ತನ್ನ ಅಪರಾಧವನ್ನು ತಿಳಿಸಬೇಕೆಂದು ಪತಿಯನ್ನು ಕುರಿತು: "ನಾಥರೆ, ನನ್ನಿಂದ ನೀವು ಗುಪ್ತವಿರಿಸಿದ ಸಂಗತಿಯು ಅಕಸ್ಮಾತ್ತಾಗಿ ತಿಳಿಯಿತು. ಕ್ಲೇಶಗೊಳ್ಳುತ್ತಿದ್ದ ನಿಮ್ಮ ಮನಸ್ಸು ಸಮಾಧಾನ ಹೊಂದಬೇಕೆಂಬ ಸದುದ್ದೇಶದಿಂದ ನಿಮಗೆ ತಿಳಿಸದೆ ನಾನು ಒಂದು ಕಾರ್ಯ ಮಾಡಿರುವೆನು."

"ಸರೋಜ! ನನಗೆ ನಿನ್ನ ಮಾತಿನ ಅರ್ಥವಾಗಲೊಲ್ಲದು."

"ನಿಮ್ಮ ಹೃದಯವನ್ನು ಸೆಳೆದ ಪ್ರಣಯದೇವತೆಯಾದ ಅರುಣಕುಮಾರಿ

ಯನ್ನು ಕರೆತರುವದಕ್ಕಾಗಿ ಲಾವಣ್ಯವತಿಯನ್ನು ಕಳುಹಿಸಿರುವೆನು.''

ಉದಯಸಿಂಗನು ಬೆರಗಾದನು. ತನ್ನ ಕಿವಿಯ ಮೇಲೆ ಹಾಕದೆ ಸರೋಜಸುಂದರಿಯು ಈ ಕೆಲಸ ಮಾಡಿದ್ದು ಅವನಿಗೆ ವಿಸ್ಮಯವನ್ನುಂಟುಮಾಡಿತು. ಸವತಿಯನ್ನು ಬುದ್ಧಿಪೂರ್ವಕವಾಗಿ ನಿರ್ಮಾಣ ಮಾಡಿಕೊಳ್ಳಲಿಕ್ಕೆ ಹವಣಿಸಿದ ಪತ್ನಿಯ ವರ್ತನವು ಅವನಿಗೆ ವಿಚಿತ್ರವಾಗಿ ತೋರಿತು. ಆಗ ಅವನು ಸೋಜಿಗದಿಂದ—''ಸರೋಜ, ನೀನು ಅರುಣಕುಮಾರಿಯನ್ನು ಕರೆಯಲಿಕ್ಕೆ ಲಾವಣ್ಯವತಿಯನ್ನು ಕಳುಹಿಸಿದ್ದು ನಿಜವೇನು?''

''ನಿಜವು.''

''ಅರುಣಕುಮಾರಿಯನ್ನು ಕರೆಯಿಸುವ ವಿಚಾರವು ನಿನ್ನಲ್ಲಿ ಹೇಗೆ ಹುಟ್ಟಿತು? ಅವಳು ನನ್ನ ಹೃದಯೇಶ್ವರಿಯಾಗಿರುವಳೆಂಬದನ್ನು ನೀನು ಹೇಗೆ ಗುರುತಿಸಿದೆ?''

''ಅರುಣಳ ಪತ್ರವು ನನಗೆ ದೊರಕಿತು. ಆ ಪತ್ರದೊಳಗಿನ ಸಂಗತಿಗಳಿಂದ ನಾನು ಎಲ್ಲವನ್ನೂ ಗುರುತಿಸಿದೆನು. ನಾನು ಅರುಣಕುಮಾರಿಯನ್ನು ಕರೆಯ ಕಳುಹಿದ್ದು ಅನುಚಿತವಾಯಿತೇನು?''

''ನೀನು ನನ್ನ ಕಿವಿಯ ಮೇಲೆ ಹಾಕದೆ ಈ ಕೆಲಸ ಮಾಡತಕ್ಕದ್ದಿದ್ದಿಲ್ಲ. ಅರುಣಳನ್ನು ಕರೆಯ ಕಳುಹಿದ್ದು ಯೋಗ್ಯವಾಗಲಿಲ್ಲ''

''ಪ್ರಿಯರೆ, ನಾನು ನಿಮಗೆ ತಿಳಿಸಿ ಈ ಕೆಲಸ ಮಾಡಬೇಕಾಗಿತ್ತು; ಆದರೆ ಅದೂರದೃಷ್ಟಿಯವಳಾದ ನಾನು ಅಷ್ಟೊಂದು ಯೋಚಿಸದೆ ಕರೆಯ ಕಳುಹಿದೆನು. ನನ್ನ ಅಪರಾಧವನ್ನು ಕ್ಷಮಿಸಿರಿ. ಅರುಣಕುಮಾರಿಯನ್ನು ಕರೆಯಿಸುವದು ಅ-ಯೋಗ್ಯವೇಕೆ? ಅವಳು ನಿಮ್ಮ ಪ್ರಣಯಿನಿಯಲ್ಲವೆ? ನಿಮ್ಮನ್ನು ನಂಬಿದ ಒಬ್ಬ ಅಬಲೆಯ ಮನೋಭಂಗ ಮಾಡುವದು ಭೂಷಣವೆ? ನೀವು ಅವಳ ಚಿಂತೆಯಿಂದ ಒಂದೇಸವನೆ ಕೊರಗತೊಡಗಿರುವಿರಿ; ನಿಮ್ಮಲ್ಲಿಯ ಉತ್ಸಾಹವು ನಾಶವಾಗಿದೆ; ಕರ್ತವ್ಯವನ್ನು ಮರೆತುಬಿಟ್ಟಿರುವಿರಿ. ಹೀಗಿದ್ದರೂ ನಿಮ್ಮ ಪ್ರಿಯಕರವಾದ ವಸ್ತುವಿನ ಆಗಮನವು ಹೇಗೆ ಅನುಚಿತವಾಗುವದು?''

''ನಿನಗೆ ಎಲ್ಲ ವಿಷಯಗಳು ಚನ್ನಾಗಿ ತಿಳಿದಿಲ್ಲ. ಅರುಣಕುಮಾರಿಯು ಗುಣವತಿಯಿರುವಳು; ರೂಪವತಿಯಿರುವಳು; ಪರಮ ಸಾಧ್ವಿಯಿರುವಳು. ನನ್ನ ಮನಸ್ಸು ಅವಳ ಧ್ಯಾನದಲ್ಲಿ ತೊಡಗಿರುವದು. ಹೀಗಿದ್ದರೂ ಅವಳನ್ನು ಕರೆಯಿಸುವದಕ್ಕೆ ಮನಸ್ಸು ಒಪ್ಪದಾಗಿದೆ. ಅಂತೆಯೆ ಮಿಡುಕುತ್ತ ಸ್ವಸ್ಥವಾಗಿ ಕುಳಿತಿರುವೆನು.

''ಅರುಣಕುಮಾರಿಯು ಸರ್ವಗುಣಸಂಪನ್ನಳಿದ್ದರೂ ಅವಳನ್ನು ಕರೆಯಿಸುವದಕ್ಕೆ ಅನುಮಾನವೇಕೆ?''

''ಅವಳು ಕುಲಕಲಂಕಿನಿಯೆಂದು ಹೆಸರಾಗಿರುವಳು.''

''ಏನು? ಅರುಣಕುಮಾರಿಯು ದುಶ್ಶೀಲೆಯಿರುವಳೇನು?'' ಎಂದು ಸರೋಜಸುಂದರಿಯು ಬೆರಗಾಗಿ ಕೇಳಿದಳು.

"ಛೇ! ಅರುಣಕುಮಾರಿಯ ಗುಣಶೀಲಗಳಿಗೆ ಹೆಸರಿಡುವಂತಿಲ್ಲ. ಅವಳಂತಹ ಸುಶೀಲೆಯರು ದೊರೆಯುವದು ವಿರಳ. ಅರುಣಳು ವೇಶ್ಯಾ ಕುಲದ ಯುವತಿಯಿಂದ ಜನಿಸಿರುವಳು."

"ಅರುಣಕುಮಾರಿಯ ತಂದೆಯು ರಜಪುತನಷ್ಟೇ?"

"ಹೌದು."

"ಹಾಗಾದರೆ ಅವಳ ತಾಯಿಯು ವೇಶ್ಯಾವೃತ್ತಿಯವಳೇನು?"

"ಅಲ್ಲ. ಅವಳು ಮಹಾ ಸಾಧ್ವಿಯಿದ್ದಳು. ಅವಳಲ್ಲಿ ಯಾವ ದೋಷವನ್ನೂ ಕಲ್ಪಿಸಲಿಕ್ಕೆ ಮಾರ್ಗವಿಲ್ಲ. ಅರುಣಕುಮಾರಿಯ ತಂದೆಯಾದ ಕೃಷ್ಣಲಾಲನು ಜಾತಿಭ್ರಷ್ಟನಾಗಿರುವನು."

"ಅದೇಕೆ?"

"ಅವನ ತಾಯಿಯು ಒಬ್ಬ ರಜಪುತ ಸರದಾರನಲ್ಲಿ ಪ್ರೇಮವುಳ್ಳವಳಾಗಿದ್ದಳಂತೆ. ಅವಳು ಅವನನ್ನು ವರಿಸುವದಕ್ಕಿಂತ ಪೂರ್ವದಲ್ಲಿಯೆ ಗರ್ಭಿಣಿಯಾದ್ದರಿಂದ ಸಮಾಜವು ಆ ಮನೆತನವನ್ನು ಬಹಿಷ್ಕೃತವೆಂದು ಭಾವಿಸಿದೆ.

"ಈ ಎರಡು ಕಾರಣಗಳಿಂದ ಅರುಣಕುಮಾರಿಯು ಕುಲಕಲಂಕಿನಿಯೆಂದು ಹೆಸರು ಹೊಂದಿದಳಷ್ಟೆ?"

"ಹೌದು."

"ಈ ಎರಡೂ ಕಾರಣಗಳಲ್ಲಿ ಏನೂ ಅರ್ಥವಿಲ್ಲ. ಅರುಣಕುಮಾರಿಯು ಸದ್ಗುಣಿಯೂ ಸುಶೀಲೆಯೂ ತೇಜಸ್ವಿಯೂ ಆದ ತರುಣಿಯಾಗಿರುವಳು. ಅವಳನ್ನು ನೀವು ಪ್ರೇಮಪೂರ್ವಕವಾಗಿ ಸ್ವೀಕರಿಸಿರುವಿರಿ. ಈಗ ಅವಳ ಮನೋಭಂಗ ಮಾಡುವದು ಎಂದಿಗೂ ಯೋಗ್ಯವಾಗಲಾರದು. ಒಬ್ಬ ಅಬಲೆಯ ಜೀವಿತವನ್ನು ವ್ಯರ್ಥಗೊಳಿಸುವದು ನಿಮ್ಮಂತಹರ ಶೀಲವಲ್ಲ."

"ಅರುಣಳನ್ನು ವಿವಾಹವಿಧಿಯಿಂದ ಸ್ವೀಕರಿಸುವದು ಸಾಧ್ಯವಿಲ್ಲ."

"ಅದೇಕೆ?"

"ಓಲಗದೊಳಗಿನ ಪ್ರತಿಷ್ಠಿತ ಜನರು ಈ ಕಾರ್ಯಕ್ಕೆ ವಿರೋಧವನ್ನುಂಟು ಮಾಡತೊಡಗಿರುವರು. ಚಿತೋಡದ ಪವಿತ್ರ ರಜಪುತ ನರೇಂದ್ರರು ಹೀನ ಜಾತಿಯ ಯುವತಿಯನ್ನು ವರಿಸುವದು ತೀರ ಅಯೋಗ್ಯವೆಂದು ಅವರು ಹೇಳುತ್ತಿರುವರು. ಪ್ರಜಾಜನರ ಮನಸ್ಸು ಮುರಿದು ಅರುಣಳನ್ನು ವಿವಾಹವಾಗಲಿಕ್ಕೆ ನಾನು ತೀರ ಅಸಮರ್ಥನಿರುವೆನು. ಅಂತೆಯೆ ದುಃಖಿತ ಹೃದಯಿಯಾಗಿ ಸುಮ್ಮನೆ ಕುಳಿತಿರುವೆನು."

ಉದಯಸಿಂಗನ ಮಾತುಗಳನ್ನು ಕೇಳಿ ಸರೋಜಸುಂದರಿಯು ಯೋಚನೆಗೊಳಗಾದಳು. ಪ್ರಜಾಜನರ ಮನಸ್ಸಿನ ವಿರುದ್ಧವಾಗಿ ನಡೆದರೆ ರಾಷ್ಟ್ರದಲ್ಲಿ ಅಸಂತೋಷವು ಉತ್ಪನ್ನವಾಗುವದೆಂದು ಅವಳು ಬೆದರಿದಳು. ಪತಿಯ ಮನಸ್ಸು ಶಾಂತ

ವಾಗುವಂತೆಯೂ, ಅರುಣಕುಮಾರಿಯ ಇಚ್ಛೆಯು ಈಡೇರುವಂತೆಯೂ, ಪ್ರಜೆಗಳಲ್ಲಿ ಅಸಂತೋಷವು ಹುಟ್ಟದಂತೆಯೂ ಕಾರ್ಯವಾಗಬೇಕಾದರೆ, ಸುಗಮವಾದ ಮಾರ್ಗವು ಯಾವದಿರುವದೆಂದು ಅವಳು ಬಹು ಪರಿಯಾಗಿ ಶೋಧಿಸಿದಳು. ಕಡೆಗೆ ಅವಳಿಗೆ ಒಂದು ವಿಧದ ಯೋಚನೆಯು ತಲೆದೋರಿತು. ಆಗ ಅವಳು ಪತಿಯನ್ನು ಕುರಿತು—"ನೀವು ಅರುಣಕುಮಾರಿಯನ್ನು ಮನಸಾ ವರಿಸಿರುವಿರಿ; ಅವಳಾದರೂ ನಿಮ್ಮನ್ನು ಪತಿಗಳೆಂದು ಭಾವಿಸಿರುವಳು. ನೀವು ವಿಧಿಯುಕ್ತವಾದ ವಿವಾಹವಾಗಬೇಕೆಂಬ ಹಟಹಿಡಿಯದೆ ಅವಳನ್ನು ಸ್ವೀಕರಿಸಿರಿ."

"ಪ್ರಿಯೆ, ಹಾಗಾಗುವದು ಸಾಧ್ಯವಿಲ್ಲ. ಅಂತೆಯೆ ನಾನು ನಿರುಪಾಯನಾಗಿರುವೆನು."

"ಅದೇಕೆ ಸಾಧ್ಯವಿಲ್ಲ? ಪರಸ್ಪರರು ಕೊರಳಲ್ಲಿ ಮಾಲೆ ಹಾಕಿದರೆ ವಿವಾಹವಾದಂತಾಗುವದಿಲ್ಲವೆ?"

"ಅರುಣಕುಮಾರಿಯು ಈ ಬಗೆಯ ಸಂಕ್ಷಿಪ್ತ ವಿವಾಹ ವಿಧಿಯಿಂದ ಸಂತುಷ್ಟಳಾಗುವದಿಲ್ಲ ನಾವು ಮಾತ್ರ ವಿವಾಹದಿಂದ ತನ್ನ ಮೇಲಿರುವ ಕಲಂಕವು ಹೋಗುವದಿಲ್ಲವೆಂದು ಅವಳ ಅಭಿಪ್ರಾಯವಿದ್ದಂತೆ ತೋರುವದು."

"ಅರುಣಕುಮಾರಿಯು ಇಲ್ಲಿಗೆ ಬಂದ ಮೇಲೆ ನಾನು ಅವಳ ಮನವೊಲಿಸುವದಕ್ಕೆ ಯತ್ನಿಸುವೆನು ಜನಾಂಗವು ಪ್ರಕ್ಷುಬ್ಧವಾಗವಂತೆಯೂ, ನಮ್ಮ ಕಾರ್ಯವು ಈಡೇರುವಂತೆಯೂ ಆಚರಿಸುವದು ಜಾಣತನವಲ್ಲವೆ?"

"ಮಹಾರಾಣಿ, ನೀನು ಬುದ್ಧಿವಂತಳಿರುವೆ. ನಿನ್ನ ಅಭಿಪ್ರಾಯವು ಗ್ರಾಹ್ಯವಾದದ್ದಿರುವದು ನಿನ್ನ ಮಾತಿಗೆ ಅರುಣಳು ಒಪ್ಪಿದರೆ ಎಲ್ಲವೂ ಸರಿಯಾಗುವದು. ರಾಜಪರಿವಾರದ ಹಾಗು ಪ್ರಜಾಜನರ ಮನಸ್ಸಿನ ವಿರುದ್ಧವಾಗಿ ನಡೆಯಲಿಕ್ಕೆ ಮಾತ್ರ ನನ್ನ ಧೈರ್ಯವಾಗದು"

"ಮನಸ್ಸು ಇಷ್ಟು ಅಧೀರವಿದ್ದರೆ ಆ ದೀನ ಅಬಲೆಗೆ ಆಶ್ವಾಸನವೀಯಬಾರದಾಗಿತ್ತು. ನಿಮ್ಮನ್ನೇ ನಂಬಿ ಕುಳಿತ ಅರುಣಕುಮಾರಿಯು ನಿಮ್ಮ ಈ ಬಗೆಯ ವರ್ತನದಿಂದ ಯಾವ ಅವಸ್ಥೆಯನ್ನು ಹೊಂದಿದ್ದಾಳೆಂಬದನ್ನು ಯೋಚಿಸಿರುವಿರೇನು? ಪ್ರಣಯಿಯ ಯುವತೀ ಜನರ ಮನೋಭಂಗ ಮಾಡುವದು ಮಹತ್ಪಾಪವಾಗಿರುವದು.'

ಸರೋಜಸುಂದರಿಯು ಹೀಗೆ ನುಡಿಯುತ್ತಿರುವಾಗ ಲಾವಣ್ಯವತಿಯು ಅಲ್ಲಿಗೆ ಬಂದಳು. ಅವಳನ್ನು ನೋಡಿ ಸರೋಜಸುಂದರಿಯು ಆತುರದಿಂದ—"ಲಾವಣ್ಯ, ಅರುಣಕುಮಾರಿಯು ಬಂದಳೆ?"

"ಹೌದು, ಬಂದಿರುವರು. ಅವರು ರಾಜೋದ್ಯಾನದಲ್ಲಿರುತ್ತಾರೆ"

"ಯಾಕೆ? ರಾಜೋದ್ಯಾನದಲ್ಲಿಳಿದ ಉದ್ದೇಶವೇನು?"

"ಅರಮನೆಯನ್ನು ಪ್ರವೇಶಿಸಲಿಕ್ಕೆ ಅವರ ಮನಸ್ಸು ಒಪ್ಪಲೊಲ್ಲದಂತೆ"

"ಹಾಗಾದರೆ ಇಲ್ಲಿಯ ವರೆಗೆ ಬಂದ ಕಾರಣವೇನು? ಚಿತೋಡಕ್ಕೆ ಬಂದು ಅರ

ಮನೆಯನ್ನು ಪ್ರವೇಶಿಸದಿರುವದಕ್ಕಿಂತ ಪ್ರಯಾಗದಲ್ಲಿದ್ದರೆ ಒಳಿತಾಗುತ್ತಿತ್ತು." ಉದಯಸಿಂಗನು ನುಡಿದನು.

"ಕೇವಲ ಮಹಾರಾಜ್ಞಿಯವರ ಪತ್ರಕ್ಕೆ ಮನ್ನಣೆ ಮಾಡುವದಕ್ಕಾಗಿ ಅವರು ಇಲ್ಲಿಗೆ ಬಂದಿರುವರು."

'ಒಳ್ಳೇದು. ನಾನು ಅವಳನ್ನು ಕಂಡು ಎಲ್ಲ ಸಮಾಚಾರವನ್ನು ತಿಳಿಯುವೆನು.' ಎಂದು ಸರೋಜಸುಂದರಿಯು ನುಡಿದು ಲಾವಣ್ಯವತಿಯನ್ನು ಕುರಿತು—"ಅರುಣ ದೇವಿಯೊಡನೆ ದಾಸ-ದಾಸಿಯರಾರಾದರೂ ಬಂದಿರುವರೇನು?"

"ದಾಸ-ದಾಸಿಯರಾರೂ ಬಂದಿಲ್ಲ. ಅವರ ಒಬ್ಬ ಬಾಲ ಸ್ನೇಹಿತರು ಬಂದಿರುವರು."

"ಅರುಣಕುಮಾರಿಯ ಬಾಲ ಸ್ನೇಹಿತನು ಇಲ್ಲಿಗೆ ಬಂದ ಕಾರಣವೇನು?"

"ಮಹಾರಾಜ್ಞಿಯವರೆ, ಎಲ್ಲ ಸಂಗತಿಗಳನ್ನು ಹೇಳುತ್ತ ಕುಳಿತರೆ ಒಂದು ಪ್ರಹರವೇ ಹಿಡಿಯುವದು. ಮೊದಲು ಅರುಣದೇವಿಯ ಭೆಟ್ಟಿಯಾಗಿರಿ. ಹಿಂದಿನಿಂದ ಎಲ್ಲ ಸಂಗತಿಗಳು ತಾವಾಗಿ ತಿಳಿಯುವವು." ಎಂದು ಲಾವಣ್ಯವತಿಯು ನಿಜ ಸ್ಥಿತಿಯನ್ನು ಹೇಳಲಾರದೆ ನುಡಿದಳು.

"ಒಂದು ಪ್ರಹರದ ವರೆಗೆ ವೇಳೆಯು ಹತ್ತುವಂತಹ ದೊಡ್ಡ ವಿಷಯವೇನಿರುವದು?"

ಲಾವಣ್ಯವತಿಗೆ ಸರೋಜಸುಂದರಿಯ ಮಾತಿಗೆ ಉತ್ತರ ಕೊಡುವದು ಬಿಗಿಯೆನಿಸಿತು. ಅವಳು ಏನಾದರೊಂದು ಹೇಳಿ ಪ್ರಾಪ್ತ ಪ್ರಸಂಗದಿಂದ ದಾಟಬೇಕೆಂದು "ಮಹಾರಾಜ್ಞಿಯವರೆ, ಅರುಣದೇವಿಯ ಸ್ನೇಹಿತರ ಜೀವನ ಚರಿತ್ರವು ರಹಸ್ಯ ಪೂರ್ಣವಿರುವದು. ಅದು ಬೇಗನೆ ಮುಗಿಯುವದಿಲ್ಲ. ಅರುಣದೇವಿಯು ನಿಮ್ಮ ಮಾರ್ಗಪ್ರತೀಕ್ಷೆ ಮಾಡುತ್ತಿರುವಳು; ಬೇಗನೆ ತೆರಳಿರಿ."

"ಆಗಂತುಕನ ಹೆಸರೇನು?'

ಲಾವಣ್ಯವತಿಯು ಅನುಮಾನಿಸುತ್ತ ಸುಮ್ಮನೆ ನಿಂತಳು.

"ಅವನ ಜೀವನ ಚರಿತ್ರವು ರಹಸ್ಯಪೂರ್ಣವಿರುವಂತೆ ನಿನ್ನ ಜೀವನ ಚರಿತ್ರವಾದರೂ ರಹಸ್ಯಪೂರ್ಣವಾಗಿರುವದೆಂದು ನಿನ್ನ ಆಚರಣೆಯಿಂದ ತಿಳಿಯುವದು! ಯಾಕಂದರೆ ನೀನು ಆ ಆಗಂತುಕನ ಹೆಸರು ಹೇಳಲಿಕ್ಕೆ ಯಾಕೋ ಹಿಂಜರಿಯತೊಡಗಿರುವೆ."

ಲಾವಣ್ಯವತಿಯು ನಿರ್ವಾಹವಿಲ್ಲದೆ ತಡವರಿಸುತ್ತ—"ವಿ....ಜ....ಯ—"

"ಅರುಣದೇವಿಯ ಸ್ನೇಹಿತನ ಹೆಸರು ಹೇಳಲಿಕ್ಕೆ ಇಷ್ಟೇಕೆ ಅನುಮಾನಿಸಿದೆ? ನವವಧುವಿನಿಂದ ಗಂಡನ ಹೆಸರು ಹೇಳಿಸಿದಂತಾಯಿತಲ್ಲ!"

"ಒಂದು ವೇಳೆ ಹಾಗಾಗಿದ್ದರೂ ಆಗಿರಬಹುದು" ದೂರದರ್ಶಿಯಾದ ಉದಯ ಸಿಂಗನು ಲಾವಣ್ಯವತಿಯ ಕೊರಳೊಳಗಿನ ಮಾಂಗಲ್ಯವನ್ನು ನೋಡಿ—"ಪ್ರಿಯೆ,

ಲಾವಣ್ಯವತಿಯ ಕೊರಳಲ್ಲಿ ಮಾಂಗಲ್ಯವು ಕಾಣುವದಲ್ಲವೆ?''

"ಲಾವಣ್ಯ!" ಸರೋಜಸುಂದರಿಯು ಎದ್ದು ಹೋಗಿ ಅವಳ ಕೊರಳು ನೋಡಿ, ವಿಸ್ಮಯದಿಂದ—"ಇದೇನೆ? ಒಂಟಿಯಾಗಿ ಹೋದವಳು ಜೊತೆಯಾಗಿ ಬಂದೆಯಾ?''

ಲಾವಣ್ಯವತಿಯು ಲಜ್ಜೆಯಿಂದ ಸುಮ್ಮನೆ ಕುಳಿತಳು. ಸರೋಜಸುಂದರಿಗೆ ನಿಜಸ್ಥಿತಿಯು ಹೊಳೆಯಿತು. ಲಾವಣ್ಯವತಿಯು ಅರುಣಕುಮಾರಿಯ ಬಾಲಸ್ನೇಹಿತನಾದ ವಿಜಯಲಾಲನನ್ನು ವರಿಸಿರುವಳೆಂದು ಅವಳು ದೃಢವಾಗಿ ತಿಳಿದು—"ಲಾವಣ್ಯ, ನೀನು ನಿನ್ನ ಪ್ರಣಯದೇವನನ್ನು ಇಲ್ಲಿಗೆ ಕರೆತಂದಿದ್ದರೆ ಒಳ್ಳೆಯ ವೈಭವದಿಂದ ವಿವಾಹ ಮಾಡಿಸುತ್ತಿದ್ದೆನು. ನೀನು ಇಷ್ಟೇಕೆ ಅವಸರ ಮಾಡಬೇಕಾಗಿತ್ತು?''

"ಅರುಣದೇವಿಯ ಆಗ್ರಹಕ್ಕಾಗಿ." ಲಾವಣ್ಯವತಿಯು ಅಂಜುತ್ತಂಜುತ್ತ ಮಾತಾಡಿದಳು.

"ಲಾವಣ್ಯ, ನೀನೂ ಅರುಣದೇವಿಯೂ ಕೂಡಿಯೇ ಸ್ವಾರ್ಥಿಗಳಿರುತ್ತೀರಿ. ಪರಸ್ಪರರ ಕಾರ್ಯಗಳನ್ನು ನೆರವೇರಿಸಬೇಕೆಂದು ಯೋಚಿಸಿಕೊಂಡೇ ಹೀಗೆ ಮಾಡಿರುವಿರಿ. ಅರುಣದೇವಿಯು ನಿನ್ನ ವಿವಾಹ ಮಾಡಿರುವಳು; ಇನ್ನು ಮೇಲೆ ನೀನು ಅವಳ ವಿವಾಹ ಮಾಡತಕ್ಕವಳು. ಈ ಮುಯ್ಯದ ವಿವಾಹಗಳಲ್ಲಿ ನಮ್ಮಂತಹ ಮಧ್ಯಸ್ಥರು ಮಿಷ್ಟಾನ್ನ ಭೋಜನಕ್ಕೆ ಎರವಾಗಬೇಕಾಯಿತು.''

ಉದಯಸಿಂಗನು ಸರೋಜಸುಂದರಿಯ ಈ ಮಾತುಗಳನ್ನು ಕೇಳಿ ಗಹಗಹಿಸಿ ನಗತೊಡಗಿದನು. ಲಾವಣ್ಯವತಿಯೂ ಸೆರಗಿನಿಂದ ಬಾಯಿ ಮುಚ್ಚಿಕೊಂಡು ಮೆಲ್ಲನೆ ನಕ್ಕಳು

---

# ಅರಸು ಒಲಿದರೆ ಅರ್ಧ ರಾಜ್ಯ.

ಅರುಣಕುಮಾರಿಯು ವಿಜಯಲಾಲನೊಡನೆ ಚಿತೋಡದ ರಾಜೋದ್ಯಾನದ ಪುಷ್ಪವಾಟಿಕೆಯ ಬಳಿಯಲ್ಲಿ ಮಾತಾಡುತ್ತ ಕುಳಿತಿದ್ದಳು. ತಾನು ಬಂದ ವಾರ್ತೆಯನ್ನು ಸರೋಜಸುಂದರಿಗೆ ತಿಳಿಸಲಿಕ್ಕೆ ಹೋದ ಲಾವಣ್ಯವತಿಯು ಬಹಳ ವೇಳೆಯವರೆಗೂ ಬಾರದ್ದರಿಂದ ಅವಳ ಮನಸ್ಸಿನಲ್ಲಿ ಅನೇಕ ಬಗೆಯ ಆಲೋಚನೆಗಳು ಹುಟ್ಟಿದವು. 'ಮಹಾರಾಣಿಯ ಮನಸ್ಸಿನಲ್ಲಿ ಹುಟ್ಟಿದ ಸಹಜವಾದ ಆದರ-ಪ್ರೇಮಗಳು ಈಗ ವ್ಯತ್ಯಾಸ ಹೊಂದಿರಬಹುದೇನು? ರಾಣಾಜಿಯವರು ತನ್ನನ್ನು ಉಪೇಕ್ಷೆಮಾಡಿರಬಹುದೇನು? ನನ್ನ ಜೀವನವನ್ನು ವ್ಯರ್ಥಮಾಡಲೆಳಸಿರುವ ನನ್ನ ಚಾರಿತ್ರ್ಯದೋಷವು ಅವರ ಮನಸ್ಸನ್ನು ಕಲ್ಲು ಮಾಡಿರಬಹುದೇನು?' ಇವೇ ಮೊದಲಾದ ಯೋಚನೆಗಳು ಅವಳ ಮನಸ್ಸಿನಲ್ಲಿ ಹುಟ್ಟಿದ್ದವು. ಹೆಚ್ಚುಹೆಚ್ಚು ಹೊತ್ತಾಗುತ್ತ ಹೋದಂತೆ ಅವಳಲ್ಲಿ ಹುಟ್ಟಿದ ಸಂಶಯದ ವಿಚಾರಗಳು ದೃಢವಾಗುತ್ತ ನಡೆದವು.

ಬಂದ ದಾರಿಗೆ ಸುಂಕವಿಲ್ಲವೆಂಬಂತೆ ತಿರುಗಿ ಪ್ರಯಾಗಕ್ಕೆ ಹೊರಡುವ ಪ್ರಸಂಗವೆಲ್ಲಿ ಬರುವದೋ? ಎಂದು ಅವಳು ಬಹುಪರಿಯಾಗಿ ಕ್ಲೇಶಗೊಳ್ಳತೊಡಗಿದಳು. ಆಗ ಅವಳು ತನ್ನ ಮನಸ್ಸಿನ ಸಮಾಧಾನಕ್ಕಾಗಿ ವಿಜಯುಲಾಲನ ಅಭಿಪ್ರಾಯವನ್ನು ಕೇಳತೊಡಗಿದ್ದಳು. ವಿಜಯುಲಾಲನಾದರೂ ಅರುಣಕುಮಾರಿಯನ್ನು ಸಾಂತ್ವನ ಪರಭಾಷಣಗಳಿಂದ ಸಂತೈಸತೊಡಗಿದ್ದನು. ಆಗ ಅವನು ಅರುಣಕುಮಾರಿಯನ್ನು ಕುರಿತು—"ರಾಣಿ, ಮಹಾರಾಣಾಜಿಯುವರು ನಿನ್ನ ಪಾಣಿಗ್ರಹಣ ಮಾಡಿ, ಮರೆತು ಕುಳಿತುಕೊಂಡದ್ದು ವಿಸ್ಮಯವು. ನಿನ್ನಂತಹ ನಿರ್ಜರಾಂಗನೆಯನ್ನೂ ಉಪೇಕ್ಷಿಸ ಬೇಕಾದರೆ ಅವರು ನಿಜವಾಗಿ ಮೂರ್ಖರಿರುವರೆಂದು ನಾನು ಊಹಿಸುವೆನು."

'ವಿಜಯುಲಾಲರೆ,' ಅರುಣಕುಮಾರಿಯು ಖಿನ್ನವಾಣಿಯಿಂದ—"ಉದಯು ಸಿಂಗ ರಾಣಾಜಿಯುವರು ಮೂರ್ಖರಲ್ಲ. ಅವರು ಸಮಾಜದ ದುರಾಗ್ರಹಕ್ಕಾಗಿ ಉಪಾಯುಗಾಣದಾಗಿರುವರು. ನನ್ನ ದುರ್ದೈವಕ್ಕೆ ಯಾರು ಮಾಡುವದೇನು?"

'ಅರುಣದೇವಿ, ನನಗೆ ನಿನ್ನ ಮಾತಿನ ಅರ್ಥವಾಗಲೊಲ್ಲದು."

"ವಿಜಯುಲಾಲರೆ, ನೀವು ನನ್ನ ವಂಶದ ಚರಿತ್ರವನ್ನು ಅರಿತಿಲ್ಲ. ನಾನು ಸಮಾಜದ ದೃಷ್ಟಿಗೆ ಕುಲಕಲಂಕಿನಿಯಾಗಿ ತೋರುತ್ತಿರುವದರಿಂದ ಈಗಿನ ದುಸ್ಸಹ ವಾದ ದುಃಖವನ್ನನುಭವಿಸುತ್ತಿರುವೆನು."

'ನಿನ್ನಲ್ಲಿ ಚಾರಿತ್ರ್ಯದೋಷವಿರುವದೆ?'

'ಅಂಧಶ್ರದ್ಧೆಯ ಸಮಾಜವು ಹಾಗೆ ತಿಳಿದಿರುವದು' ಎಂದು ಅರುಣಕುಮಾರಿಯು ನುಡಿದು, ತಾನು ಕುಲಕಲಂಕಿನಿಯೆಂದು ನಿರ್ಧರಿಸಲಿಕ್ಕೆ ಯಾವ ಕಾರಣಗಳು ಘಟಿಸಿದವೆಂಬದನ್ನು ವಿಸ್ತೃತವಾಗಿ ಹೇಳಿದಳು. ಅವಳು ಹೇಳಿದ ಸಂಗತಿಗಳನ್ನು ಕೇಳಿ ವಿಜಯುಲಾಲನು ಸ್ವಲ್ಪ ವೇಳೆಯ ವರೆಗೆ ವಿಚಾರಮಗ್ನನಾಗಿ ಸುಮ್ಮನೆ ಕುಳಿತಿದ್ದನು. ಅನಂತರದಲ್ಲಿ ಅವನು ನಿಸ್ಪೃಹವೃತ್ತಿಯಿಂದ-"ಸಮಾಜವು ಇಂತಹ ಕ್ಷುದ್ರ ಕಾರಣಗಳಿಗೆ ಮಹತ್ವ ಕೊಡಬಾರದು. ಸುಶೀಲೆಯೂ ಸದ್ಗುಣೆಯೂ ಕ್ಷಾತ್ರ ರಕ್ತದವಳೂ ಸುಸಂಸ್ಕೃತಳೂ ಆದ ನಿನ್ನಂತಹಳಲ್ಲಿ ದೋಷವನ್ನು ಕಲ್ಪಿಸುವದು ತೀರ ಅನುಚಿತವು. ಸನಾತನ ಸಮಾಜದಲ್ಲಿ ಅಂಧಪರಂಪರೆಯು ಅತಿರೇಕವಾಗಿರುವದು. ಆದ್ದರಿಂದಲೇ ಇಂತಹ ಅನರ್ಥಗಳು ಸಂಭವಿಸುತ್ತವೆ. ನಾನು ಉದಯುಸಿಂಗರಿಗೆ ಉಪದೇಶಿಸಿ ಅವರ ಮನಸ್ಸು ತಿರುಗಿಸುವೆನು."

ವಿಜಯುಲಾಲನು ಹೀಗೆ ನುಡಿದ ಮೇಲೆ ಸರೋಜಸುಂದರಿಯೂ ಲಾವಣ್ಯಾವತಿಯೂ ಅಲ್ಲಿಗೆ ಬಂದರು. ಅರುಣಕುಮಾರಿಯು ಮಹಾರಾಣಿಯನ್ನು ಸನ್ಮಾನಿಸಿ ಬಳಿಯಲ್ಲಿ ಕುಳ್ಳಿರಿಸಿಕೊಂಡು—"ಮಹಾರಾಜ್ಞಿಯುವರೆ, ನನ್ನಂತಹ ದೀನ-ದರಿದ್ರಳಾದ ಅಬಲೆಯ ಯೋಗಕ್ಷೇಮ ಚಿಂತನೆ ಮಾಡಿದ್ದಕ್ಕಾಗಿ ನಾನು ನಿಮಗೆ ತುಂಬ ಋಣಿಯಾಗಿರುವೆನು. ಮಹಾನುಭಾವರಾದ ನಿಮ್ಮ ಸದ್ಗುಣಗಳನ್ನು ಎಷ್ಟು ಹೊಗಳಿದರೂ ತೀರದು."

ಅರುಣಕುಮಾರಿಯು ಕೃತಜ್ಞತೆಯಿಂದ ಆಡಿದ ಮಾತುಗಳನ್ನು ಕೇಳಿ ಸರೋಜಸುಂದರಿಯು ವಿನಯೋಕ್ತಿಯಿಂದ—"ರಾಣಿ, ನಾನು ನಿಮಗೆ ಅಂತಹ ಉಪಕಾರವನ್ನೇನು ಮಾಡಿರುವೆನು? ನೀವು ಮಹಾರಾಣಾಜಿಯವರ ಹೃದಯೇಶ್ವರಿಗಳಾಗಿರುವಿರಿ. ನಿಮ್ಮ ಮೇಲಿನ ಅವರ ಸಹಜಪ್ರೇಮವನ್ನು ಪರೀಕ್ಷಿಸಿ, ಅವರ ಮನಶ್ಶಾಂತಿಗಾಗಿ ಈ ಬಗೆಯ ಕರ್ತವ್ಯವನ್ನು ಮಾಡಿದೆನು. ರಾಣಿ, ನೀವು ರಾಣಾಜಿಯವರ ಮೇಲೆ ವರ್ಚಸ್ಸವನ್ನು ಸ್ಥಾಪಿಸಿದಂದಿನಿಂದ ನೀವು ದೀನ-ದರಿದ್ರರಲ್ಲ. ನಿಮ್ಮಂತಹ ಅಲೌಕಿಕ ಶಾಲೀನತೆಯ ಸತಿಶಿರೋಮಣಿಗಳ ಸ್ನೇಹಕ್ಕಾಗಿ ನಾನು ಆತುರಗೊಂಡಿರುವೆನು. ಅರುಣದೇವಿ, ನೀವು ನನ್ನ ಪತ್ರವನ್ನು ಮನ್ನಿಸಿ ಹೊರಟು ಬಂದದ್ದರಿಂದ ಆನಂದವಾಗಿದೆ."

"ಮಹಾದೇವಿ, ನಿಮ್ಮಂತಹ ಸುಹೃದಯಿಗಳ ಸ್ನೇಹವು ದುರ್ಮಿಳವು. ಪತಿಯ ಮನಸ್ಸು ಸಮಾಧಾನಗೊಂಡು ಅವನು ಸೌಖ್ಯ ಪಡೆಯಬೇಕೆಂಬ ಕುತೂಹಲದಿಂದ ಪ್ರಯತ್ನ ಮಾಡುವ ಸತಿಯು ದೊರೆಯುವದು ಅಪರೂಪ. ಘನವಂತರಾದ ನಿಮ್ಮ ಸಹವಾಸದಲ್ಲಿರಬೇಕೆಂದು ನನ್ನ ಮನಸ್ಸು ಹಾತೊರೆಯುತ್ತಿರುವದು; ಆದರೆ ವಿಧಿ ಘಟನೆಯು ಹೇಗಿರುವದೋ ಏನೋ!"

'ವಿಧಿಘಟನೆಯು ಈಗ ತಿಳಿದಂತಾಗಿಲ್ಲವೆ!'

"ಈಗ ಏನು ತಿಳಿಯಬೇಕು? ರಾಣಾಜಿಯವರು ನನ್ನನ್ನು ಧರ್ಮಪತ್ನಿಯೆಂದು ಸ್ವೀಕರಿಸುವದಕ್ಕೆ ಸಿದ್ಧರಾಗದಿದ್ದರೆ ನನಗೆ ನಿಮ್ಮ ಸ್ನೇಹವು ಹೇಗೆ ಲಭಿಸಬೇಕು?"

"ಅರುಣದೇವಿ, ನೀವು ದುರಾಗ್ರಹಗೊಳ್ಳಬೇಡಿರಿ. ಮಹಾರಾಣಾಜಿಯವರು ಧರ್ಮಾಂಧರಾದ ಜನರ ಮನಸ್ಸಿನ ವಿರುದ್ಧವಾಗಿ ನಡೆಯಲಿಕ್ಕೆ ಸಿದ್ಧರಿಲ್ಲವೆಂದು ನೀವೂ ಚಂಡಿತನ ಮಾಡುವದು ಹಿತಕರವಲ್ಲ. ನೀವು ಪರಸ್ಪರರು ಮನಸಾ ವರಿಸಿರುವಿರಿ. ಬಾಹ್ಯಾಡಂಬರದ ವಿವಾಹಕ್ಕೆ ಇಷ್ಟೊಂದು ಮಹತ್ವಕೊಡುವ ಉದ್ದೇಶವೇನು? ಸ್ವಾಮಿ ಅಜಿತಾನಂದರ ಸಮಕ್ಷವಾಗಿ ರಾಣಾಜಿಯವರು ನಿಮ್ಮ ಪಾಣಿಗ್ರಹಣ ಮಾಡಿರುವರು. ನೀವು ಅವರ ಕೊರಳಲ್ಲಿ ಮಾಲೆ ಹಾಕಿರುವಿರಿ. ಇದಕ್ಕಿಂತ ಹೆಚ್ಚಿನ ಸಂಸ್ಕಾರಗಳೇನಾಗಬೇಕು? ಲೌಕಿಕ ದೃಷ್ಟಿಯಿಂದ ನೀವು ಹೇಗೆ ಕಂಡರೂ, ರಾಣಾಜಿಯವರು ನಿಮ್ಮನ್ನು ತಮ್ಮ ಧರ್ಮಪತ್ನಿಯೆಂದು ತಿಳಿದುಕೊಂಡರೆ ತೀರಲಿಲ್ಲವೆ? ರಾಣಾಜಿಯವರು ನಿಮ್ಮನ್ನು ನನಗಿಂತ ಕಡಿಮೆ ಯೋಗ್ಯತೆಯವರೆಂದು ತಿಳಿದುಕೊಳ್ಳುವದಿಲ್ಲ: ಅವರು ನಿಮ್ಮನ್ನು ತಮ್ಮ ರಾಣೀಪರಿವಾರದಲ್ಲಿ ಸೇರಿಸುವರು. ನಿಜವಾಗಿ ಹೇಳಬೇಕಾದರೆ ನೀವು ನನಗಿಂತ ಹೆಚ್ಚಿನ ಯೋಗ್ಯತೆ ಹೊಂದುವಿರಿ."

"ಮಹಾರಾಜ್ಞಿ, ನನಗೆ ರಾಜ್ಯಭೋಗಗಳ ಆಶೆಯಿಲ್ಲ; ರಾಜ್ಞೀಪದದ ಅಭಿರುಚಿಯಿಲ್ಲ; ವಿಷಯ ಪಿಪಾಸೆಯಿಲ್ಲ; ಐಶ್ವರ್ಯ ಲಾಲಸೆಯಿಲ್ಲ. ಕೇವಲ ಮಹಾರಾಣಾಜಿಯವರ ಸಾನಿಧ್ಯವು ದೊರೆತರೆ ನಾನು ಕೃತಾರ್ಥಳಾಗುವೆನು. ನನ್ನ ಮೇಲೆ

ಸಮಾಜವು ದೋಷಾರೋಪಣೆ ಮಾಡಿರುವದು. ಕುಲಕಲಂಕಿನಿಯೆಂಬ ಅಭಿಧಾನವು ಹೋಗಲಾಡಬೇಕೆಂಬ ಉದ್ದೇಶದಿಂದ ನಾನು ಸಂಸ್ಕಾರಯುಕ್ತ ವಿವಾಹ ವಿಧಿಯು ನೆರವೇರಬೇಕೆಂಬ ಅಪೇಕ್ಷೆಯುಳ್ಳವಳಾಗಿದ್ದೆನು. ರಾಣಾಜಿಯವರು ಸಮಾಜದ ಬಂಧನಕಾರಕ ನಿಯಮಗಳಿಗೆ ಪಶರಾಗಿದ್ದುದರಿಂದ ನಿರುಪಾಯಳಾಗಬೇಕಾಗಿದೆ"

'ಮಹಾರಾಜ್ಞಿಯವರೆ,' ಇಷ್ಟು ವೇಳೆಯವರೆಗೆ ತಟಸ್ಥನಾಗಿ ಕುಳಿತ ವಿಜಯಲಾಲನು ಸರೋಜಸುಂದರಿಯನ್ನು ಕುರಿತ.—"ಅರುಣಾದೇವಿಯು ಎಷ್ಟೇ ಚತುರಳೂ ವಿಚಾರಿಯೂ ಇದ್ದರೂ, ಒಂದು ಬಗೆಯ ತಪ್ಪು ಕಲ್ಪನೆಯಿಂದ ಬಹಳವಾಗಿ ಕುದಿಯುತ್ತಿರುವಳು. ಜಾತಿ ಧರ್ಮಗಳ ಗುಟ್ಟು ಬಹಳೇ ಸೂಕ್ಷ್ಮವಿರುವದು. ಪರಂಪರಾಭಿಮಾನಿಗಳಾದ ಜನರ ಮನಸ್ಸು ಕ್ಷೋಭೆಗೊಳ್ಳುವಂತಹ ವರ್ತನವಿಡುವದು ಅಯೋಗ್ಯವು ಜನತೆಯ ನಡಾವಳಿಯಲ್ಲಿ ಸುಧಾರಣೆಯಾಗುವಂತೆ ಪ್ರಯತ್ನಿಸುವದು ಮುಖ್ಯ ಕರ್ತವ್ಯವಾಗಿರುವದು. ಅದು ಸುಧಾರಿಸಿದ ಮೇಲೆ ಇಂತಹ ಕ್ಷುಲ್ಲಕ ವಿಷಯಗಳಿಗೆ ಯಾರೂ ಮಹತ್ವ ಕೊಡುವದಿಲ್ಲ."

"ನಿಮ್ಮ ಮಾತು ನಿಜವು. ಆರ್ಯಜನಾಂಗವು ಧರ್ಮದಲ್ಲಿ ದೃಢವಾದ ವಿಶ್ವಾಸವುಳ್ಳದ್ದಾಗಿರುವದು. ಆಚರಣೆಯಲ್ಲಿ ಸ್ಥಿತ್ಯಂತರವು ಕಂಡು ಬಂದರೆ ಆ ಸಂಗತಿಯು ಹಿಂದುಗಳಿಗೆ ಸರಿದೋರುವದಿಲ್ಲ. ಮನಸ್ಸು ಸಿದ್ಧವಾದ ಮೇಲೆ ಎಂತಹ ಕೃತಿಗಳಾದರೂ ಮನಸ್ಸಿನ ವಿರುದ್ಧವಾಗಿ ತೋರುವದಿಲ್ಲ. ನಮ್ಮ ಜನರಿಗೆ ನಿಜವಾದ ಧರ್ಮದ ಮರ್ಮವು ಗೊತ್ತಿರುವದಿಲ್ಲ ಅಂತೆಯೆ ಇಂತಹ ಪ್ರಮಾದಗಳು ಘಟಿಸುವವು."

"ಮಹಾರಾಣಿಯವರೆ, ಅಜಿತಾನಂದ ಸ್ವಾಮಿಗಳು ಧರ್ಮದಲ್ಲಿ ಸುಧಾರಣೆಯಾಗಬೇಕೆಂದು ದೀರ್ಘಪ್ರಯತ್ನ ಮಾಡುತ್ತಲಿರುವರು. ಅವರ ಸಾಹಸಕ್ಕೆ ಅಲ್ಪ ಮಟ್ಟಿಗಾದರೂ ಆಗಲೊಲ್ಲದೇಕೆ ಯಶವು ಲಭಿಸುತ್ತಲಿರುವದು. ಸ್ವಾಮಿಮಹಾರಾಜರಂತಹ ಅಧಿಕಾರಿ ಜನರು ಪ್ರಯತ್ನ ಮಾಡತೊಡಗಿದರೆ ಧರ್ಮದ ಅಂಧಶ್ರದ್ಧೆಯಿಂದ ನಡೆಯುವ ಜನರಿಂದ ಪ್ರಮಾದಗಳು ಘಟಿಸಲಾರವು."

ವಿಜಯಲಾಲನು ಹೀಗೆ ನುಡಿಯುತ್ತಿರಲು, ಒಬ್ಬ ದಂಡಧಾರಿಯು ಅಲ್ಲಿಗೆ ಬಂದು—"ಮಹಾರಾಣಾಜಿಯವರು ರಾಣೀ ಅರುಣಕುಮಾರಿದೇವಿಯವರೊಬ್ಬರನ್ನೇ ಕರೆತರುವದಕ್ಕಾಗಿ ಆಜ್ಞಾಪಿಸಿರುವರು."

"ಅರುಣಾದೇವಿ, ಹೋಗಿಬಾರಮ್ಮಾ. ಏಕಾಂತದಲ್ಲಿ ನವದಂಪತಿಗಳ ಪ್ರೇಮಾಲಾಪವು ಜರಗಲಿ!" ಎಂದು ಸರೋಜಸುಂದರಿಯು ನಗುತ್ತ ನುಡಿದಳು.

'ಮಹಾದೇವಿ,' ಅರುಣಕುಮಾರಿಯು ಲಾವಣ್ಯವತಿ-ವಿಜಯಲಾಲರ ಕಡೆಗೆ ನೋಡುತ್ತ ಮುಗುಳು ನಗೆಯಿಂದ—"ಈ ಮಾತು ನನ್ನ ಮಟ್ಟಿಗೆ ಮಾತ್ರ ಪ್ರಚಾರದಲ್ಲಿ ಬರತಕ್ಕದ್ದೋ, ನವದಂಪತಿಗಳೆಲ್ಲರಿಗೂ ಸಂಬಂಧಿಸಿದ್ದೋ?"

"ಎಲ್ಲರಿಗೂ ಸಂಬಂಧಿಸಿಯೇ ಹೇಳಿದೆನು. ಲಾವಣ್ಯವತಿಯೂ ತನ್ನ ಪತಿರಾಜನೊಡನೆ ಸ್ವೇಚ್ಛೆಯಿಂದ ಕಾಲ ಕಳೆಯಲಿ."

ಲಾವಣ್ಯವತಿಯು ಮುಖವನ್ನು ಕೆಳಗೆ ಮಾಡಿದಳು. ಅವಳು ಮೆಲ್ಲನೆ— "ಮಹಾರಾಜ್ಞಿಯವರೇ, ವಿನೋದ ಮಾಡಬೇಡಿರಿ."

"ಲಾವಣ್ಯ, ಇದರಲ್ಲಿ ವಿನೋದವೇನು? ವಿಜಯಲಾಲರು ದಣಿದು ಬಂದಿರುವರು. ಅವರನ್ನು ರಾಜಮಂದಿರಕ್ಕೆ ಕರೆದೊಯ್ದು ಉಪಚರಿಸು.'

ಅರುಣಕುಮಾರಿಯು ಉದಯಸಿಂಹನ ಬಳಿಗೆ ಹೊರಟು ಹೋದ ಮೇಲೆ ಲಾವಣ್ಯವತಿಯೂ ವಿಜಯಲಾಲನನ್ನು ಕರೆದುಕೊಂಡು ಅರಮನೆಗೆ ಹೋದಳು. ಸರೋಜಸುಂದರಿಯಾದರೂ ತನ್ನ ಮಂದಿರಕ್ಕೆ ಹೋದಳು.

ಉದಯಸಿಂಹನು ಜಾತಿಮಂಟಪದ ಬಳಿಯಲ್ಲಿದ್ದ ಶಿಲಾಮಂಚದ ಮೇಲೆ ಕುಳಿತಿದ್ದನು. ಅರುಣಕುಮಾರಿಯು ಬಂದೊಡನೆಯೇ ಅವನು ಅವಳನ್ನು ಸತೃಷ್ಣ ನಯನಗಳಿಂದ ನೋಡಹತ್ತಿದನು ಅರುಣಳಾದರೂ ಉದಯಸಿಂಗನ ಚಿತ್ತವನ್ನು ಆಕರ್ಷಿಸಿಕೊಳ್ಳುವ ಕ್ರಿಯೆಗಳನ್ನು ಮಾಡತೊಡಗಿದ್ದಳು. ಅವಳ ನೇತ್ರ ಕಟಾಕ್ಷಗಳಿಂದ ರಾಣಾನು ಮೋಹವಶನಾದನು. ಇಬ್ಬರೂ ಕೆಲವು ವೇಳೆಯ ವರೆಗೆ ಸ್ತಬ್ಧರಾಗಿದ್ದರು. ಕೆಲವು ವೇಳೆಯ ಮೇಲೆ ಉದಯಸಿಂಹನು ಮೌನವನ್ನು ಭಂಗಪಡಿಸಿ 'ಮೋಹಿನಿ!'

'ನಾನು ಮೋಹಿನಿಯಲ್ಲ, ಅರುಣೆಯು!' ವೀಣಾವಿನಿಂದಿತ ಸ್ವರದಿಂದ ಅರುಣಕುಮಾರಿಯು ಮೃದುವಾಗಿ ಹೇಳಿದಳು.

"ಅರುಣೆಯೂ ಹೌದು, ಮೋಹಿನಿಯೂ ಹೌದು. ನನ್ನನ್ನು ಮೋಹಪಾಶದಲ್ಲಿ ಬಂಧಿಸಿ ಮನಬಂದತ್ತ ಎಳೆಯತೊಡಗಿದ ನೀನು ಮೋಹಿನಿಯಲ್ಲವೆಂದು ಯಾರು ಹೇಳುವರು?"

'ನನಲ್ಲಿ ಅಂತಹ ಶಕ್ತಿಯಿದ್ದರೆ ಇಷ್ಟು ಕೋಲಾಹಲವೇಳುತ್ತಿದ್ದಿಲ್ಲ.'

'ಕೋಲಾಹಲವೇನು ಎದ್ದಿರುವದು?'

"ಅಲ್ಲವೆ ಮತ್ತೆ? ನಾನು ಇಲ್ಲಿಗೆ ಬರಬೇಕಾದರೆ ಸುಖ ಸಮಾಧಾನಗಳಿಂದ ಬಂದಿರುವೆನೆ? ಇಷ್ಟು ದಿನಗಳ ವರೆಗೆ ಹಾದೀ ನೋಡಿ ಬೇಸತ್ತು, ಕಡೆಗೆ ಮಹಾರಾಣಿಯವರ ಪತ್ರದ ನಿಮಿತ್ಯದಿಂದ ಇಲ್ಲಗೆ ಬಂದೆನು."

"ಇರಲಿ ಬಿಡು. ಅರುಣ, ಹಿಂದಿನ ಮಾತುಗಳಿಂದ ಪ್ರಯೋಜನವೇನು? ಈಗಾದರೂ ನನ್ನ ಬಳಿಗೆ ಬಂದೆಯಲ್ಲವೆ?''

'ಹೇಗಾದರೂ ಒಮ್ಮೆ ಬಂದೆನು."

"ನಾನೇ ಇಲ್ಲಿಗೆ ಬಂದು ಕರೆಯದೆ ಅರಮನೆಗೆ ಬರಬಾರದೆಂದು ನೀನು ನಿಶ್ಚಯಿಸಿದ್ದೆಯೇನು?"

"ರಾಜ ಮಂದಿರದಲ್ಲಿ ನನ್ನ ಕೆಲಸವೇನಿರುವದು? ಅಲ್ಲಿ ವಾಸವಾಗಿರುವ ಉದ್ದೇಶದಿಂದ ನಾನು ಇಲ್ಲಿಗೆ ಬಂದಿಲ್ಲ."

'ಹಾಗಾದರೆ ಇಲ್ಲಿಯೇ ಇರುವೆಯಾ?'

"ಇಲ್ಲಿಯಾದರೂ ನನ್ನ ಕೆಲಸವೇನು?"

"ಹಾಗಾದರೆ ಇಲ್ಲಿಗೆ ಬಂದೆಯೇಕೆ?"

"ಕೇವಲ ರಾಣಿಯ ಇಚ್ಛೆಯನ್ನು ಪೂರ್ಣ ಮಾಡುವದಕ್ಕಾಗಿ. ಚಿತ್ತೋಡದ ಮಹಾರಾಜ್ಞಿಯ, ಅದರಲ್ಲಿ ಧರ್ಮ-ಶೀಲ ಆರ್ಯ-ಸಾಧ್ವಿಯ ಆಜ್ಞಾಪತ್ರಕ್ಕೆ ಮನ್ನಣೆ ಮಾಡದಿರುವದು ಅನುಚಿತವೆಂದು ಬಂದಿರುವೆನು"

"ರಾಣಿಯ ಇಚ್ಛೆಯನ್ನು ಪೂರ್ಣಮಾಡುವದಕ್ಕಾಗಿ ಬಂದಿರುವೆಯಾ? ನಿಜವಾಗಿ ಹೇಳು"

"ನಾನು ನಿಮ್ಮಂತೆ ಅಸತ್ಯ ಭಾಷಣ ಮಾಡುವದಿಲ್ಲ. ನಾನು ನಿಜವಾಗಿ ರಾಣಿಯ ಮನಸ್ಸು ಮುರಿಯಬಾರದೆಂದೇ ಬಂದಿರುವೆನು."

"ಈಗ ನೀನು ರಾಣಿಯನ್ನು ಕಂಡಿರುವೆ."

"ಹೌದು."

"ಅವಳ ಇಚ್ಛೆಯು ಪೂರ್ಣವಾಯಿತೇನು?"

"ಇಲ್ಲ. ನಮ್ಮ ಮಾತು-ಕಥೆಗಳು ನಡೆದಾಗ ನಿಮ್ಮ ಸೇವಕನು ಕರೆಯ ಬಂದನು. ಚಿತ್ತೋಡದ ಮಹಾರಾಣಾಜಿಯವರ ಆಜ್ಞಾಭಂಗವು ಅವರ ರಾಜ್ಯದಲ್ಲಿ, ಅವರ ಪರಿವಾರದೆದುರಿಗೆ ಆಗಬಾರದೆಂದು ಹೊರಟು ಬಂದೆನು."

"ನೀನು ನನ್ನ ಆಜ್ಞಾಭಂಗ ಮಾಡುವದಿಲ್ಲವೆಂಬದು ತಿಳಿಯಿತು; ಹಾಗಾದರೆ ನನ್ನ ಜೊತೆಗೆ ಬಂದು ರಾಣಿಯ ಇಚ್ಛೆಯನ್ನು ಪೂರ್ಣಮಾಡು."

"ಇಲ್ಲಿ ರಾಜಪರಿವಾರವಿಲ್ಲ. ಅಂದಮೇಲೆ ರಾಜಾಜ್ಞೆಯ ಪರಿವೆಯೇನು?"

"ನನ್ನ ವಿನಂತಿಯನ್ನಾದರೂ ಮನ್ನಿಸುವೆಯಾ?"

"ನಿಮ್ಮ ವಿನಂತಿಯೇನು?"

"ನನ್ನೊಡನೆ ಅರಮನೆಗೆ ನಡೆ."

"ನೀವೇನೂ ನನ್ನ ನೆನಪು ಮಾಡಿಲ್ಲವಷ್ಟೆ? ಕರೆಯದವರ ಮನೆಗ ಹೋಗುವ ಉದ್ದೇಶವೇನು? ರಾಣಿಯವರು ಕರೆಯಿಸಿದ್ದರಿಂದ ಅವರೊಡನೆ ನಾಲ್ಕು ಮಾತನಾಡಿ ನಾನು ಪ್ರಯಾಣಕ್ಕೆ ತೆರಳುವೆನು. ನಿಮ್ಮ ಭೆಟ್ಟಿಯು ಆವಶ್ಯಕವೆನಿಸಿದಾಗ ಅನುವು ದೊರೆತರೆ ಹಿಂದಿನಿಂದ ಎಂದಾದರೂ ಬಂದೇನು. ಅಷ್ಟೇಕೆ ಅವಸರವು? ಈಗಲೆ ಅಂತಹ ಮಹತ್ವದ ಕೆಲಸವೇನು?"

"ರಾಣೀ!"

"ನಾನು ಎಲ್ಲಿಯ ರಾಣಿಯು? ಉತ್ತರಾಣಿಯೇ ಸರಿ!"

"ಅರುಣಕುಮಾರಿ, ಹೀಗೆ ಮಾತಾಡಿ ನಾಚಿಸಬೇಡ. ಪ್ರಿಯೇ, ನಾನು ನಿನ್ನನ್ನು ಎಂದಾದರೂ ಮರೆಯಬಹುದೇ? ಕೆಲವು ತೊಂದರೆಗಳ ಮೂಲಕವಾಗಿ ಕರೆಯಿಸಲು ಸಾಧ್ಯವಾಗಲಿಲ್ಲ."

"ಅಧೀರಭಾವದವರಾದ ನಿಮಗೆ ನನ್ನನ್ನು ಕರೆಯಿಸುವದು ಈ ಜನ್ಮದಲ್ಲಿ

ಯಂತೂ ಸಾಧ್ಯವಾಗುತ್ತಿದ್ದಿಲ್ಲ. ರಾಣಿಯವರು ಏನೋ ಧೈರ್ಯ ಮಾಡಿದರೆಂದು ಪುನರ್ದರ್ಶನವಾಯಿತು."

"ಒಟ್ಟಿನ ಮೇಲೆ ನನ್ನನ್ನು ದೋಷಿಯೆಂದು ನಿರ್ಧರಿಸಿದೆಯೇನು?"

"ನಾನು ಅನ್ಯರ ಮೇಲೆ ದೋಷ ಹೊರಿಸುವದಿಲ್ಲ. ನನ್ನ ದೈವವೇ ದೋಷಿಯಾಗಿರುವಾಗ ಯಾರೇನು ಮಾಡುವರು? ತಮ್ಮ ಚರಣದರ್ಶನವಾಗುವದಿಲ್ಲವೆಂದು ನಾನು ಖಂಡಿತವಾಗಿ ತಿಳಿದಿದ್ದೆನು ರಾಣಿಯವರು ದೊಡ್ಡಿಸ್ತಿಕೆ ಮಾಡಿದ್ದರಿಂದ ನನ್ನ ಇಚ್ಛೆಯು ಪೂರ್ಣವಾಯಿತು. ತಮ್ಮ ಪದರೇಣುವನ್ನು ಶಿರಸಾ ವಹಿಸಿ ನಾನು ನಾಳೆಗೇ ಪ್ರಯಾಗಕ್ಕೆ ತೆರಳುವೆನು. ನೀವು ನನ್ನನ್ನು ಮರೆತರೇನಾಯಿತು? ನಿಮ್ಮ ಸಾಧ್ಯಾಸಾಧ್ಯಗಳ ಪಡಿಕಟ್ಟನ್ನು ನಾನೇನು ಬಲ್ಲೆನು? ನನಗಂತು ಈ ಜನ್ಮದಲ್ಲಿ ನಿಮ್ಮನ್ನುಮರೆಯುವದು ಸಾಧ್ಯವಿಲ್ಲ. ನಿಮ್ಮ ಸ್ಮರಣೆಯಲ್ಲಿ ಶೇಷಾಯುಷ್ಯವನ್ನು ಕಳೆಯಲಿಕ್ಕೆ ನನಗೇನಾಗಿದೆ? ತಮ್ಮ ಚರಣ ದರ್ಶನವಾಯಿತು. ಇಷ್ಟೇ ಸಾಕು. ನನ್ನ ಮನೆಗೆ ಹೋಗಲಿಕ್ಕೆ ನನಗೆ ಆಜ್ಞೆಕೊಡಿರಿ"

'ಅರುಣ, ನಿನ್ನ ಮನೆಯು ಮತ್ತೆಲ್ಲಿರುವದು? ಪ್ರಿಯಕರೆ, ನಿನ್ನ ನಿಕೇತನವು ನನ್ನ ಹೃದಯದಲ್ಲಿರುವದು ಅಲ್ಲಿ ನೀನು ಇರುವದಿಲ್ಲವೆ? ಆ ಮನೆಯು ವಾಸವಾಗಿರಲಿಕ್ಕೆ ನಿನಗೆ ತಕ್ಕದ್ದಾಗಿಲ್ಲವೆ?"

"ಮಹಾರಾಜರೆ, ನೀವು ನನ್ನಲ್ಲಿ ಈ ಬಗೆಯಾಗಿ ಆತ್ಮೀಯ ಭಾವನೆ ತಳೆದದ್ದು ನೋಡಿ ಆನಂದವಾಯಿತು. ಈ ಬಡದಾಸಿಯ ಮೇಲೆ ಇದೇ ಬಗೆಯ ಪ್ರೇಮವು ಕೊನೆಯ ವರೆಗೂ ಇರಲೆಂದರಾಯಿತು. ಇನ್ನು ಮೇಲೆ ನಾನು ಇಲ್ಲಿರಲಾರೆನು. ನಿರರ್ಥಕನಾಗಿ ನಿಮ ನ್ನು ತೊಂದರೆಯಲ್ಲಿ ಕೆಡಹಿದರೆ ನನಗೆ ಲಾಭವೇನು?"

'ರಾಣಿ!' ಉದಯಸಿಂಹನು ದೈನ್ಯದಿಂದ—"ನೀನು ಹೀಗೇಕೆ ಚುಚ್ಚಿ ಮಾತನಾಡತೊಡಗಿರುವೆ? ನೀನು ನನ್ನ ಅಪರಾಧವನ್ನು ಕ್ಷಮಿಸಲಾರೆಯಾ?"

'ಮಹಾರಾಣಾಜಿಯವರೆ!' ಅರುಣಕುಮಾರಿಯು ದುಃಖಕಾತರಳಾಗಿ—'ನೀವು ನನ್ನಲ್ಲಿ ಕ್ಷಮೆಯನ್ನು ಯಾಚಿಸುವ ಕಾರಣವೇನು? ನಾನು ದುರ್ದೈವಿಯಿರುವದರಿಂದ ದುಃಖಕ್ಕೊಳಗಾಗಿರುವೆನು. ಅದಕ್ಕೆ ನೀವು ಮಾಡುವದೇನು? ನಾಥರೆ, ನಾನು ಯಾರು? ನೀವು ಯಾರು? ನನ್ನ ರಹಸ್ಯವೆಲ್ಲವೂ ನಿಮಗೆ ತಿಳಿದಿರುವದು. ಮಹಾ ಪಾಪಿಯೂ, ನೀಚ ಕುಲೋತ್ಪನ್ನಳೂ ಆದ ನನ್ನನ್ನು ಅರಮನೆಯಲ್ಲಿರಿಸಿಕೊಂಡು ನಿಮ್ಮ ಉಜ್ವಲ ಕುಲಕ್ಕೆ ಕಲಂಕ ಹಚ್ಚಬೇಡಿರಿ ನನ್ನಿಂದ ನಿಮಗೆ ಬಹಳೇ ತೊಂದರೆಯುಂಟಾಗುವ ಸಂಭವವಿದೆ. ಅಂಧಶ್ರದ್ಧೆಯ ಸಮಾಜವು ನಮ್ಮಿಬ್ಬರನ್ನೂ ದುಃಖಸಾಗರದಲ್ಲಿ ಕೆಡಹಿತು. ಆಗಲಿ. ನಾನು ನಿಮಗೆ ಸೆರಗೊಡ್ಡಿ ಬೇಡಿಕೊಳ್ಳುವದೇನಂದರೆ, ತಮ್ಮ ಚರಣ ದರ್ಶನಕ್ಕೆ ಈ ದಾಸಿಯನ್ನು ವಂಚಿತಳನ್ನಾಗಿ ಮಾಡಬಾರದು. ಇಷ್ಟು ಕೃಪೆಯಾದರೆ, ನಾನು ಆನಂದದಿಂದ ಪ್ರಯಾಗಕ್ಕೆ ಹೊರಡುವೆನು"

'ಪ್ರಿಯೆ, ನೀನು ಪ್ರಯಾಗಕ್ಕೆ ಹೋದರೆ ನನ್ನ ದರ್ಶನಕ್ಕೆ ವಂಚಿತಳಾದಂತಾ-

ಯಿಂತಲ್ಲ?'

'ನಾಥರೆ, ನಾನು ಆಗಿಂದಾಗ ಬಂದು ತಮ್ಮ ಚರಣದರ್ಶನ ಹೊಂದುವೆನು.

'ಯಾಕೆ? ನೀನು ನನ್ನ ಸಹವಾಸದಲ್ಲಿರಲಿಕ್ಕೆ ಸಿದ್ಧಳಿಲ್ಲವೆ?'

'ನಾನು ಸಿದ್ಧಳಾದರೂ ಸಮಾಜದ ಅಡ್ಡಿಯಿರುವದು.'

'ಪ್ರಾಣೇಶ್ವರಿ, ನನಗೆ ಸಮಾಜದ ಪರಿವೆಯಿಲ್ಲ. ಪ್ರೇಮವಿವಾಹದಿಂದ ನಮ್ಮ ವಿವಾಹಕಾರ್ಯವು ಪೂರ್ತಿಯಾಗಿದೆ. ಅಂಥ ಜನರು ಬೇಕಾದಂತೆ ಹೆಸರಿಡಲಿ. ನಾನು ನಿನ್ನನ್ನು ಧರ್ಮಪತ್ನಿಯೆಂದೇ ತಿಳಿದಿರುವೆನು. ಈಗಾದರೂ ನಿನ್ನ ಮನಸ್ಸು ಸಮಾಧಾನವಾಯಿತೆ? ನಾನು ನಿನ್ನ ಸಲುವಾಗಿ ನಿಷ್ಠುರಭಾವದಿಂದ ನಡೆದೆನು. ನನ್ನನು ಕ್ಷಮಿಸು. ರಾಣಿ, ನೀನು ಘನವಂತಳಿರುವೆ; ಸ್ವರ್ಗಾಂಗನೆಯಿರುವೆ; ನಿಸ್ವಾರ್ಥ ಪ್ರೇಮದ ಮೂರ್ತಿಯಿರುವೆ!'

ಉದಯಸಿಂಹನು ಹೀಗೆ ನುಡಿದ ಕೂಡಲೆ ಅರುಣಕುಮಾರಿಯು ಅವನ ಚರಣಗಳನ್ನು ಹಿಡಿದು, ಆನಂದಾಶ್ರುಗಳಿಂದ ಅವನ ಪಾದಗಳನ್ನು ತೊಳೆಯುತ್ತ- 'ಮಹಾರಾಣಾಜೀ! ಇಷ್ಟು ವೇಳೆಯ ವರೆಗೆ ನಿಷ್ಠುರ ಮಾತುಗಳನ್ನಾಡಿ ನಿಮ್ಮ ಮನಸ್ಸನ್ನು ನೋಯಿಸಿದನು ಈ ತಮ್ಮ ದಾಸಿಯ ಅಪರಾಧವನ್ನು ಕ್ಷಮಿಸಿರಿ!'

'ಪ್ರಾಣೇಶ್ವರಿ!' ಉದಯಸಿಂಹನು ಅರುಣಕುಮಾರಿಯನ್ನು ಹಿಡಿದೆತ್ತಿ-'ನೀನು ಅಪರಾಧಿನಿಯಲ್ಲ. ನಿಜವಾದ ಅಪರಾಧಿಯು ನಾನು. ನೀನೇ ನನ್ನ ಅಪರಾಧವನ್ನು ಕ್ಷಮಿಸು. ಪ್ರಿಯೇ, ನಾನು ನಿನಗೆ ಒಂದು ಸುಂದರವಾದ ಮಂದಿರವನ್ನು ಕಟ್ಟಿಸಿ ಕೊಡುವೆನು. ಅಲ್ಲಿ ನೀನು ಆನಂದದಿಂದ ಕಾಲ ಕಳೆ. ನಿನ್ನ ಬಾಲಸ್ನೇಹಿತನಾದ ವಿಜಯಲಾಲನನ್ನು ಸೇನೆಯ ಒಂದು ಪಥಕದ ನಾಯಕನನ್ನಾಗ ಮಾಡುವೆನು. ನಿನ್ನ ತಂದೆಯವರಾದ ಕೃಷ್ಣಲಾಲರು ತೀರ್ಥಯಾತ್ರೆಗಾಗಿ ತೆರಳಿರುವರಂತೆ. ಅವರು ಬಂದರೆ ಸೇನಾಪತಿಯ ಸ್ಥಳದಲ್ಲಿ ನಿಯಮಿಸಬೇಕೆಂದು ಯೋಚಿಸಿರುವೆನು. ಅರುಣ, ನೀನಂತು ನನ್ನ ಅರ್ಧಾಂಗಿಯಾಗಿ ರಾಜ್ಞೀಪದವನ್ನು ಹೊಂದಿರುವೆ. ನಿನಗೆ ಇನ್ನೂ ಯಾವ ಸೌಕರ್ಯಗಳು ಬೇಕು?''

'ಅರಸು ಒಲಿದರೆ ಅರ್ಧರಾಜ್ಯ!' ಅರುಣಾದೇವಿಯು ನಗುತ್ತ ನುಡಿದಳು.

ಉದಯಸಿಂಗನು ತನ್ನ ಪ್ರಿಯೆಯನ್ನು ಬಿಗಿದಪ್ಪಿದನು.

---

# ದಿಲ್ಲಿಯ ಓಲಗದಲ್ಲಿ.

ಮೊಗಲ ಸಾಮ್ರಾಜ್ಯದ ರಾಜಧಾನಿಯಾದ ದಿಲ್ಲಿಯ ಸಿಂಹಾಸನದ ಮೇಲೆ ಸಮ್ರಾಟ ಅಕಬರ ಬಾದಶಹನು ವಿರಾಜಮಾನನಾಗಿದ್ದನು. ಅವನು ಅತ್ಯಂತ ಪ್ರಭಾವಶಾಲಿಯೂ, ಕಾರಸ್ಥಾನಿಯೂ, ಶೂರನೂ, ಧೀರನೂ, ಸಾಹಸಿಯೂ ಆಗಿ

ದ್ದನು ಅಕಬರ ಬಾದಶಹನಂತಹ ತೇಜಸ್ವಿಯಾದ ಅರಸನು ಮೊಗಲ ವಂಶದಲ್ಲಿ ಮತ್ತೊಬ್ಬನಾಗಲಿಲ್ಲ. ಇಡೀ ಭಾರತ ವರ್ಷವನ್ನು ಮೊಗಲ ಸಾಮ್ರಾಜ್ಯ ಛತ್ರದಲ್ಲಿ ತರಬೇಕೆಂದು ಅವನು ಮಹತ್ವಾಕಾಂಕ್ಷೆಯುಳ್ಳವನಾಗಿದ್ದನು. ಅವನ ಈ ಆಕಾಂಕ್ಷೆಯು ಬಹುಮಟ್ಟಿಗೆ ಈಡೇರಿದಂತಾಗಿತ್ತು ಯುದ್ಧಕಲಾನಿಪುಣನೂ ಕಷ್ಟಸಹಿಷ್ಣುವೂ ಆದ ಅಕಬರನು ಉತ್ತರ ಹಿಂದುಸ್ಥಾನದ ಬಹುಭಾಗವನ್ನು ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಂಡಿದ್ದನು. ಅವನು ಕೆಲವರನ್ನು ಸ್ನೇಹದಿಂದಲೂ, ಕೆಲವರನ್ನು ಸಂಗ್ರಾಮ ಶೂರತ್ವದಿಂದಲೂ, ಕೆಲವರನ್ನು ಐಶ್ವರ್ಯಲಾಲಸೆಯ ಯೋಗದಿಂದಲೂ ವಶಮಾಡಿಕೊಂಡಿದ್ದನು. ಕಟ್ಟುನಿಟ್ಟಿನ ಸ್ವಭಾವದವರೂ, ಸ್ವಾತಂತ್ರ್ಯಪ್ರಿಯರೂ, ಸ್ವಾಭಿಮಾನಿಗಳೂ, ಸ್ವದೇಶಪ್ರೇಮಿಗಳೂ ಆದ ಅಚ್ಚ ರಜಪೂತ ವಂಶದ ಅರಸರು ಜಡಸ್ವಾರ್ಥಕ್ಕೊಳಬಟ್ಟು ಶೀಲಭ್ರಷ್ಟರಾಗಿ ಅಕಬರ ಬಾದಶಹನ ವ್ಯೂಹದಲ್ಲಿ ಸಿಲುಕಿದ್ದರು. ರಾಜಕಾರಣಪಟುವಾದ ಮೊಗಲ ಬಾದಶಹನ ಹಿಡಿತ-ಹೊಡತಗಳಿಗೆ ಉತ್ತರಾಪಥವು ಅವನ ವಶವಾದಂತಾಗಿತ್ತು; ಆದರೆ ಮೇವಾಡದ ಮಹಾ ಪ್ರತಾಪಿಗಳೂ ಸ್ವಾಭಿಮಾನಿಗಳೂ ಆದ ರಜಪುತರು ಅವನ ಬಲೆಯಲ್ಲಿ ಸಿಲುಕಿರಲಿಲ್ಲ. ಉದಯಸಿಂಗ ಮಹಾರಾಜನು ಮೊಗಲ ಸಮ್ರಾಟನೆದುರಿಗೆ ಶಿರಬಾಗಲಿಕ್ಕೂ, ಅವನ ಮನೆತನದೊಡನೆ ಶರೀರಸಂಬಂಧ ಮಾಡಲಿಕ್ಕೂ ಸಿದ್ಧನಾಗಲಿಲ್ಲ. ಉದಯಸಿಂಗನ ಈ ವರ್ತನವು ಸ್ವಜಾತಿ ವಿಧ್ವಂಸಕರೂ ಸ್ವದೇಶದ್ರೋಹಿಗಳೂ ಆದ ರಜಪುತರಿಗೆ ಸರಿದೋರಲಿಲ್ಲ ಸ್ವಾತಂತ್ರ್ಯದ ಹಾಗು ಕುಲಪವಿತ್ರತೆಯ ಆಡಂಬರದಿಂದ ಮೆರೆಯುವ ಮೇವಾಡದ ರಾಣಾನನ್ನು ಅವರು ರೋಷಯುಕ್ತ ದೃಷ್ಟಿಯಿಂದ ನೋಡತೊಡಗಿದ್ದರು ಯಾವದೊಂದು ನಿಮಿತ್ತವು ದೊರೆತರೆ, ಚಿತೋಡದ ಮೇಲೆ ದಂಡೆತ್ತಿ ಹೋಗುವದಕ್ಕಾಗಿ ಬಾದಶಹನಿಗೆ ಪ್ರೇರಣೆಯನ್ನುಂಟುಮಾಡಬೇಕೆಂದು ಅವರು ಹೊಂಚು ಹಾಕಿದ್ದರು.

ಸಮ್ರಾಟ ಅಕಬರ ಬಾದಶಹನು ಓಲಗದಲ್ಲಿ ಕುಳಿತಿದ್ದನು. ರಾಜಾ ತೋಡರಮಲ್ಲ, ಅಬುಲಫಜಲ, ಸಮಶೇರಖಾನ, ಮುನಾಯಮ ಖಾನ, ಆಸಫಖಾನ, ಮಾನಸಿಂಗ ಮೊದಲಾದ ಮಂತ್ರಿ-ಸೇನಾಪತಿಗಳೂ ಸರದಾರರೂ ಕವಿ ಜನರೂ ತಮ್ಮ ತಮ್ಮ ಸ್ಥಾನಗಳನ್ನಲಂಕರಿಸಿದ್ದರು. ಆಗ ಬಾದಶಹನು ಸಭಿಕರನ್ನುದ್ದೇಶಿಸಿ-"ಹಿಂದು ಮುಸಲಮಾನ ಸರದಾರ-ಸೇನಾಪತಿಗಳೇ, ಮಂತ್ರಿಗಳೇ, ನೀವೆಲ್ಲರೂ ಮೊಗಲಬಾದಶಾಹೀ ಸಿಂಹಾಸನದಲ್ಲಿ ಏಕನಿಷ್ಠೆಯುಳ್ಳವರಾಗಿರುವದರಿಂದ ನಮಗೆ ಪರಮಾನಂದವಾಗಿದೆ. ನಾವು ದಿಗ್ವಿಜಯದಲ್ಲಿ ಯಶಸ್ವಿಗಳಾದದ್ದು ನಿಮ್ಮ ಪರಾಕ್ರಮ ಪ್ರಭಾವದಿಂದಲೇ. ನಿಮ್ಮ ಶೌರ್ಯವು ಮೊಗಲ ವಿಜಯ ದುಂದುಭಿಯನ್ನು ಆಸೇತು-ಹಿಮಾಚಲದ ವರೆಗೆ ಮೊಳಗುವಂತೆ ಮಾಡಿತೆಂದು ಹೇಳಲು ಈಗ ಎಡೆಯಾಗುತ್ತಲಿದೆ. ದಕ್ಷಿಣದಲ್ಲಿಯ ಕೆಲವು ದೇಶಗಳೂ, ಉತ್ತರದಲ್ಲಿಯ ಕೆಲವು ದೇಶಗಳೂ ಇನ್ನೂ ನಮಗೆ ಅಂಕಿತವಾಗಿಲ್ಲ. ಈ ಸಂಗತಿಯು ನಮ್ಮ ಗೌರವಮಂಡಿತವಾದ ಚಾರಿತ್ರ್ಯಕ್ಕೆ

ಕುಂದು ತರುವಂತಹದಾಗಿರುವದು. ಇಡೀ ಭರತ ವರ್ಷವು ಮೊಗಲ ಛತ್ರಕ್ಕೊಳ ಗಾಯಿತೆಂದರೆ, ನಮ್ಮ ಮಹತ್ವಾಕಾಂಕ್ಷಿಯಾದ ಹೃದಯವು ಶಾಂತವಾಗುವದು. ನಮ್ಮ ಯಶೋಗೌರವಗಳು ಬೆಳೆಯಲಿಕ್ಕೆ ಮಹಮ್ಮದೀಯರಿಗಿಂತಲೂ ಹಿಂದುಗಳೇ ಹೆಚ್ಚಾಗಿ ಸಹಾಯಕಾರಿಗಳಾದರೆಂದು ನಿರಾತಂಕವಾಗಿ ಹೇಳಬಹುದು. ಉತ್ತರಾ ಪಥದೊಳಗಿನ ವೀರಾಗ್ರಣಿಗಳಾದ ರಜಪುತರು ಮೊಗಲ ಸಿಂಹಾಸನದಲ್ಲಿ ನಿಷ್ಠೆಯುಳ್ಳವರಾದ್ದರಿಂದಲೇ ಸಾಮ್ರಾಜ್ಯದ ಅಭ್ಯುದಯವಾಯಿತು. ಮುಂದಾದರೂ ಅವರ ಸತ್ವವನ್ನವಲಂಭಿಸಿಯೇ ಸಾಮ್ರಾಜ್ಯ ವಿಸ್ತಾರ ಮಾಡಬೇಕಾಗಿದೆ. ರಜಪುತ ಬಂಧು ಗಳು ನಮ್ಮೊಡನೆ ಭಕ್ತಿ-ವಿಶ್ವಾಸಗಳಿಂದ ನಡೆದುಕೊಳ್ಳತೊಡಗಿದ್ದರಿಂದ ಪರಮಾನಂದ ವಾಗಿದೆ. ಮೇವಾಡದ ರಾಣಾನೂ ರಾಠೋಡ ವೀರರೂ ಇನ್ನೂ ನಮ್ಮ ಆಧಿಪತ್ಯ ಕ್ಕೊಳಗಾಗಿಲ್ಲ. ಅವರು ಮಾಂಡಲಿಕರಾಗಬೇಕಾದರೆ ನಮಗೆ ರಜಪುತ ಸರದಾರರ ಬೆಂಬಲವು ಆವಶ್ಯವಾಗಿ ಬೇಕು. ದಕ್ಷಿಣಕ್ಕೆ ಅಹಮ್ಮದನಗರದ ವರೆಗೆ ವಿಜಯ ಸಂಪಾದನೆ ಮಾಡಲಿಕ್ಕೆ ನಮಗೆ ರಜಪುತರಂತೆ ಮೊಗಲ ಸರದಾರರಾದರೂ ಚನ್ನಾಗಿ ನೆರವಾದರು. ನಾವು ರಜಪುತ-ಮೊಗಲ ಸರದಾರರ ಸ್ವಾಮಿನಿಷ್ಠೆಯನ್ನೂ ಪರಾ ಕ್ರಮವನ್ನೂ ನೋಡಿ ಸಂತುಷ್ಟರಾಗಿದ್ದೇವೆ. ಅಹಮ್ಮದನಗರದಲ್ಲಿ ನಾವು ವಿಜಯ ಸಂಪಾದನೆ ಮಾಡಿದ್ದರೂ, ಅಲ್ಲಿ ನಮ್ಮ ವರ್ಚಸ್ಸವು ಚನ್ನಾಗಿ ನೆಲೆಗೊಂಡಿಲ್ಲ. ಮೊದಲು ಯಾವ ನಿಟ್ಟಿಗೆ ದಂಡಯಾತ್ರೆಗಾಗಿ ಹೊರಡತಕ್ಕದ್ದೆಂಬದರ ಬಗ್ಗೆ ಇಂದು ನಿಮ್ಮ ಅಭಿಪ್ರಾಯ ತೆಗೆದುಕೊಳ್ಳಬೇಕಾಗಿದೆ ಸಮಶೇರಖಾನ, ಈ ವಿಷಯದಲ್ಲಿ ನಿಮ್ಮ ಅಭಿಪ್ರಾಯವೇನು?"

ಅಕಬರ ಬಾದಶಹನು ಹೀಗೆ ನುಡಿದ ಕೂಡಲೆ ಸಮಶೇರಖಾನನು ಎದ್ದು ನಿಂತು ವಂದನೆ ಮಾಡಿ-'ಜಹಾಂಪನಾಹ, ಖಾವಿಂದರವರ ಮತವೇ ಈ ದಾಸನ ಮತವು. ಹುಜೂರರವರ ಆಜ್ಞೆಯಂತೆ ನಡೆಯಲು ಈ ಕಿಂಕರನು ಸಿದ್ಧನಿರುವನು.'

'ಕಪಟಿಯಾದ ಮಾಲದೇವನು ನಮ್ಮೊಡನೆ ಅತ್ಯಂತ ನಿಷ್ಠುರತನದಿಂದ ನಡೆದನು. ಮೊದಲು ಅವನಿಗೆ ಯೋಗ್ಯ ಶಾಸನವನ್ನು ವಿಧಿಸಲಿಕ್ಕೆ ಬೇಕು."

ಅಕಬರಬಾದಶಹನು ಹೀಗೆ ನುಡಿದ ಕೂಡಲೆ ವೀರಪುಂಗವನಾದ ಮುನಾ ಯಮುಖಾನನು ಎದ್ದು ನಿಂತು ಅಭಿವಂದಿಸಿ-'ಗರೀಬ ಪರವರದಿಗಾರ! ನಡುವೆ ಮಾತಾಡಿದ ತಪ್ಪನ್ನು ಕ್ಷಮಿಸಬೇಕು. ಚಿತೋಡದ ಸಂಗತಿಯು ಖಾವಿಂದರವರ ಲಕ್ಷ್ಯದಲ್ಲಿರಬಹುದು."

"ಹೌದು, ಚನ್ನಾಗಿ ಲಕ್ಷ್ಯದಲ್ಲಿರುವದು. ಆ ಗರ್ವಿಷ್ಠ ಉದಯಸಿಂಗನ ಪಾರಿಪತ್ಯಗೊಳಿಸಲಿಕ್ಕೆ ಬೇಕು. ಅವನಿಗೆ ತನ್ನ ಸ್ವಾತಂತ್ರ್ಯಸಿಂಹಾಸನದ ಹಾಗು ಪವಿತ್ರ ಶಿಸೋದಿಯಾ ರಾಜಮನೆತನದ ಜಂಬವು ಬಹಳವಿರುವದು. ವಿಧರ್ಮಿಯ ಅರಸರೊಡನೆ ಶರೀರಸಂಬಂಧ ಮಾಡಲಿಕ್ಕಿಲ್ಲವೆಂದೂ, ಅವರೆದುರಿಗೆ ಶಿರಬಾಗಲಿಕ್ಕಿಲ್ಲ ವೆಂಗೂ ಅವನು ಪ್ರತಿಜ್ಞೆ ಮಾಡಿರುವನಂತೆ ಅವನ ಅಪಮಾನಕಾರಕ ಶಬ್ದಗ

ಳನ್ನೂ, ಎಚ್ಚರಗೇಡಿತನದ ವರ್ತನವನ್ನೂ ನಾನು ಎಂದೂ ಮರೆಯಲಾರೆನು."

ಬಾದಶಹನು ಹೀಗೆ ನುಡಿದ ಮೇಲೆ ಸರದಾರ ಆಸಫಖಾನನು ಎದ್ದು ನಿಂತು ಕೈ ಜೋಡಿಸಿ ವಿನಯದಿಂದ-"ಶಹೇನಶಾಹ! ಈ ಕಿಂಕರನ ವಿನಂತಿಯನ್ನು ಕೇಳ ಬೇಕು. ಮಾಳವಾದ ರಾಜಾರಾಯಬಹಾದ್ದೂರನಿಗೂ ಮಾರವಾಡಾಧಿಪತಿಗೂ ಚಿತ್ತೋಡಾಧಿಪತಿಯು ಆಶ್ರಯವಿತ್ತಿರುವನು. ಅವರಿಬ್ಬರೂ ಯಾವಿಂದರವರ ಕಟ್ಟಾ ವೈರಿಗಳು. ಉದಯಸಿಂಗನು ಎಂತಹ ಸಾಹಸವನ್ನು ಮಾಡಿರುವನು ನೋಡಿರಿ! ಹುಜೂರರವರ ಮಾನತಿಕ್ಷಗೆ ಇದಕ್ಕಿಂತ ಇನ್ನೂ ಎಂತಹ ಕಾರಣವು ಘಟಿಸಬೇಕು?"

ಆಸಫಖಾನನ ಮಾತುಗಳನ್ನು ಕೇಳಿ ಅಕಬರನು ಕ್ರೋಧಾಂಧನಾದನು. ಅವನ ಕಣ್ಣುಗಳು ಕೆಂಪಾದವು. ತುಟಿಗಳು ನಡುಗತೊಡಗಿದವು. ಆಗ ಅವನು ಹಲ್ಲು ಕಡಿಯುತ್ತ—"ಏನು? ಉದಯಸಿಂಹನು ನಮ್ಮೊಡನೆ ದೀರ್ಘವೈರ ಬೆಳೆಯಿ ಸಲುದ್ಯುಕ್ತನಾದನೆ? ನಮ್ಮ ವೈರಿಗಳಿಗೆ ಆಶ್ರಯವಿತ್ತದ್ದಕ್ಕೆ ಅವನಿಗೆ ಯೋಗ್ಯ ಶಾಸನ ವನ್ನು ವಿಧಿಸಲಿಕ್ಕೆಬೇಕು. ಮುನಾಯಮಖಾನರೆ, ನೀವು ನಾಳೆ ಚಿತ್ತೋಡದ ಮೇಲೆ ದಂಡೆತ್ತಿ ಹೋಗಿರಿ. ಚಿತ್ತೋಡವನ್ನು ಕೈವಶ ಮಾಡಿಕೊಂಡ ಹೊರತು ನನ್ನ ಮನಸ್ಸು ಸಮಾಧಾನ ಹೊಂದದು. ಉನ್ಮತ್ತನಾದ ಉದಯಸಿಂಹನಿಗೆ ಪ್ರಾಯಶ್ಚಿತ್ತ ವಿಧಿಸ ಲಿಕ್ಕೆಬೇಕು.

ಅಕಬರನ ಸಂತಪ್ತವಾಣಿಯನ್ನು ಕೇಳಿ ಸ್ವಜನದ್ರೋಹಿಗಳಾದ ಕೆಲವು ರಜ ಪುತ ಸರದಾರರಿಗೆ ಆನಂದವಾಯಿತು ಮೊಗಲರೊಡನೆ ಶರೀರಸಂಬಂಧ ಮಾಡದೆ ಅವರಿಗೆ ಶರಣಾಗತನಾಗದೆ ಒಳ್ಳೆಯ ಅಥವಾ ತೆಯಿಂದ ಮೆರೆಯುತ್ತಿರುವ ಮೇವಾಡದ ಮಹಾರಾಣಾನ ನೀರು ಇಳಿಸಬೇಕೆಂದು ಅವರು ಮನಸಾ ಇಚ್ಛಿಸುತ್ತಿದ್ದರು. ಅದ ಕ್ಕಾಗಿ ಅವರು ಬಾದಶಹನಿಗೆ ರಾಣಾನ ವಿರುದ್ಧವಾಗಿ ದೂರು ಹೇಳುತ್ತಿದ್ದರು. ಯೋಗ್ಯ ಕಾರಣವು ದೊರೆತ ಹೊರತು ಚಿತ್ತೋಡದ ಮೇಲೆ ದಂಡೆತ್ತಿ ಹೋಗಬಾರದೆಂದು ಅಕಬರನು ಯೋಚಿಸಿದ್ದನು. ಈಗ ದಂಡೆತ್ತಿ ಹೋಗಲಿಕ್ಕೆ ಕಾರಣವು ದೊರೆತದ್ದ ರಿಂದ ಅವನಿಗೆ ಆನಂದವಾಯಿತು. ಪರೋತ್ಕರ್ಷವನ್ನೂ ಸ್ವಜನರ ಗೌರವವನ್ನೂ ನೋಡಿ ಸಹಿಸಲಾರದ ರಜಪುತ ಸರದಾರರಿಗಾದರೂ ಅಕಬರನ ಆಜ್ಞೆಯನ್ನು ಕೇಳಿ ಸಂಭ್ರಮವಾಯಿತು. ರಾಜಾಜ್ಞೆಯಾದ ಕೂಡಲೆ ರಾಜಾ ತೋಡರಮಲ್ಲನು ಎದ್ದು ನಿಂತು ಅಭಿವಂದಿಸಿ—"ಜಹಾಂಪನಾಹ, ಚಿತ್ತೋಡದ ಮೇಲೆ ಒಮ್ಮೆಲೆ ದಂಡೆತ್ತಿ ಹೋಗುವದು ಯೋಗ್ಯವಲ್ಲ. ನಮ್ಮ ವೈರಿಗಳಿಗೆ ಆಶ್ರಯವಿತ್ತದ್ದು ಯೋಗ್ಯವಲ್ಲೆಂದೂ ಸಾಮ್ರಾಜ್ಯದ್ರೋಹಿಗಳನ್ನು ನಮ್ಮ ಕಡೆಗೆ ತೆಗೆದುಕೊಂಡು ಬರಬೇಕೆಂದೂ ಉದಯ ಸಿಂಗ ಮಹಾರಾಣಾಜಿಯವರಿಗೆ ಸೂಚನೆ ಕಳಿಸಬೇಕು. ಅವರು ಪತ್ರಕ್ಕೆ ಮಾನ್ಯತೆ ಕೊಟ್ಟರೆ ಒಳಿತಾಯಿತು; ಅವರು ಖಾವಂದರವರ ಆಜ್ಞೆಯನ್ನು ಉಪೇಕ್ಷಿಸಿದರೆ, ದಂಡೆತ್ತಿ ಹೋಗಲಿಕ್ಕೆ ಬರುವದು. ಸಾಮೋಪಾಯದಿಂದ ಕೆಲಸವಾಗುತ್ತಿದ್ದರೆ, ಒಮ್ಮೆಲೆ ದಂಡೋಪಾಯವನ್ನು ಕೈಕೊಳ್ಳುವದೇಕೆ? ನನ್ನ ಅಲ್ಪಬುದ್ಧಿಗೆ ಈ ಬಗೆ

ಯಾಗಿ ತೋಚುವದು. ಇದರ ಮೇಲೆ ಯಾವಿಂದರವರ ಮನಸ್ಸು."

ತೋಡರಮಲ್ಲನು ನಿಸ್ಪೃಹತೆಯಿಂದ ಹೇಳಿದ ಸೂಚನೆಯು ಅಕಬರನಿಗೆ ಯೋಗ್ಯವಾಗಿ ಕಂಡಿತು. ಉದಯಸಿಂಗನು ಮಾಳವಾಧಿಪತಿಯನ್ನೂ ಮಾರವಾಡಾಧಿಪತಿಯನ್ನೂ ತೆಗೆದುಕೊಂಡು ಬಂದು ಶರಣಾಗತನಾದರೆ ದಂಡಯಾತ್ರೆಯ ಕಾರಣವೇ ಇಲ್ಲೆಂದು ತಿಳಿದು, ಅವನು ಕರಣಿಕನಿಗೆ ಪತ್ರಬರೆಯ ಹೇಳಿದನು. ರಾಜಾ ತೋಡರಮಲ್ಲನ ಅಭಿಪ್ರಾಯದಂತೆ ಕರಣಿಕನು ಪತ್ರ ಬರೆದು, ಓದಲಾರಂಭಿಸಿದನು:

"ಮಹಾರಾಣಾ ಉದಯಸಿಂಗ, ರಾಜಧಾನಿ ಚಿತೋಡ ಇವರಿಗೆ:—

ರಾಜರಾಜೇಶ್ವರ ಅಕಬರ ಬಾದಶಹರ ಆಜ್ಞಾಪತ್ರವೇನಂದರೆ, ನೀವು ಇತ್ತೀಚೆಗೆ ಬಹಳೇ ಎಚ್ಚರಗೇಡಿತನದಿಂದ ನಡೆಯತೊಡಗಿರುವಿರಿ. ಇದು ನಿಮಗೆ ಭೂಷಣವಲ್ಲ; ಹಾಗು ಹಿತಾವಹವೂ ಅಲ್ಲ. ಇಷ್ಟು ವೇಳೆಯಲ್ಲಿ ನಿಮ್ಮನ್ನು ನಮ್ಮ ಮಾಂಡಲಿಕ ಮಾಲಿಕೆಯಲ್ಲಿ ಸೇರಿಸಿಕೊಳ್ಳಬೇಕಾಗಿತ್ತು; ಆದರೆ ರಾಜಸ್ಥಾನದಲ್ಲಿ ಮೇವಾಡದ ಗೌರವವು ಹೆಚ್ಚಾಗಿರುವದರಿಂದಲೂ, ನೀವು ನಮ್ಮ ಸಾಮ್ರಾಜ್ಯಕ್ಕೆ ಅಷ್ಟೊಂದು ಹಾನಿಯನ್ನುಂಟುಮಾಡಲು ಪ್ರವೃತ್ತರಾಗಿದ್ದಿಲ್ಲವಾದ್ದರಿಂದಲೂ ನಿಮ್ಮ ಮೇಲೆ ಇದು ವರೆಗೆ ದಂಡೆತ್ತಿ ಬರಲಿಲ್ಲ. ನೀವು ನಮ್ಮ ಈ ಬಗೆಯ ಉಪೇಕ್ಷೆಯ ಲಾಭಮಾಡಿಕೊಳ್ಳಲುದ್ಯುಕ್ತರಾದಿರಿ; ನಮ್ಮ ದೊಡ್ಡಿಸ್ತಿಕೆಯ ಹಾಗು ಸಹಾನುಭೂತಿಯ ದುರುಪಯೋಗ ಮಾಡಿಕೊಳ್ಳಲುಪಕ್ರಮಿಸಿರುವಿರಿ.

ಭರತ ವರ್ಷವನ್ನು ಏಕಛತ್ರದಲ್ಲಿ ತರಬೇಕೆಂಬ ನಮ್ಮ ಉದಾತ್ತವಾದ ತತ್ವಕ್ಕೆ ನೀವು ವಿರೋಧಿಗಳಾಗಿರುವಿರಿ ಘನವಂತರಾದ ಮೊಗಲ ಸಾಮ್ರಾಟರೊಡನೆ ಶರೀರಸಂಬಂಧ ಮಾಡಿ ಅವರ ಸ್ನೇಹವನ್ನೂ ಪ್ರೇಮವನ್ನೂ ಸಂಪಾದಿಸಿಕೊಳ್ಳಲಿಕ್ಕೆ ಮನಸ್ಸು ಮಾಡಲೊಲ್ಲಿರಿ. ಭರತ ವರ್ಷದ ಸಮ್ರಾಟರಿಗೆ ಕಪ್ಪ-ಕಾಣಿಕೆಯಿತ್ತು, ಅವರ ಆಧಿಪತ್ಯದಲ್ಲಿರಲಿಕ್ಕೆ ಸಮ್ಮತಿಸದಾಗಿರುವಿರಿ. ನಿಮ್ಮ ಈ ಬಗೆಯ ಉನ್ಮತ್ತತನದ ವರ್ತನವನ್ನು ನೋಡಿ ನಮ್ಮ ಹೃದಯದಲ್ಲಿ ಸಂತಾಪಾಗ್ನಿಯು ರಭಸದಿಂದ ಬೆಳೆಯತೊಡಗಿತ್ತು. ಇಂತಹ ಪರಿಸ್ಥಿತಿಯಲ್ಲಿ ನಿಮ್ಮಿಂದ ಮತ್ತೊಂದು ದೊಡ್ಡ ಪ್ರಮಾದವು ಘಟಿಸಿ ಉರಿಯಲ್ಲಿ ಸಿಡಿ ಹಾಕಿದಂತಾಗಿರುವದು. ಮೊಗಲ ರಾಜರಾಜೇಶ್ವರರು ವಿಕ್ರಮಶಾಲಿಗಳಾಗಿದ್ದರೂ ಸ್ವಪರಾಕ್ರಮದಿಂದ ಉನ್ಮತ್ತರಾಗುವಂತಹರಲ್ಲ. ವೈಭವಶಾಲಿಗಳಾಗಿದ್ದರೂ ಐಶ್ವರ್ಯಾಂಧರಾಗಿ ಮನಬಂದಂತೆ ನಡೆಯುವವರಲ್ಲ. ಅಂತೆಯೆ ವಿವೇಕಹೀನರಿಗೆ ಉಪದೇಶ ಮಾಡಿ ಸನ್ಮಾರ್ಗಪ್ರವೃತ್ತರಾಗುವಂತೆ ಮಾಡಲುದ್ಯುಕ್ತರಾಗಿರುವರು.

ಉದಯಸಿಂಹ ಮಹಾರಾಣಾಜೀ! ನೀವು ಮಾಳವಾಧಿಪತಿಯಾದ ರಾಜಬಹಾದ್ದೂರನಿಗೂ ಮಾರವಾಡಾಧಿಪತಿಗೂ ಆಶ್ರಯವಿತ್ತ ಉದ್ದೇಶವೇನು? ಅವರು ನಮ್ಮ ಕಡು ಹಗೆಗಳೆಂಬದನ್ನು ನೀವು ಅರಿತಿಲ್ಲವೆ? ನೀವು ಆ ರಾಜದ್ರೋಹಿಗಳಿಗೆ ಆಶ್ರಯವಿತ್ತು ನಮಗೆ ಅಪಮಾನ ಮಾಡಿದಿರಿ; ಹಾಗು ಮೊಗಲ ಸಾಮ್ರಾಜ್ಯದ ವಿರೋಧ

ಬಳಿಯಿಸಲುಪಕ್ರಮಿಸಿದಿರಿ. ಮೊಗಲ ಸಮ್ರಾಟನ ಹಗೆತನ ಬಳಿಯಿಸುವದರಿಂದ ಯಾವ ಪರಿಣಾಮ ಹೊಂದಬೇಕಾದೀತೆಂಬದರ ಪರಿವೆಯು ನಿಮಗೆ ಇದ್ದಂತೆ ತೋರುವದಿಲ್ಲ. ನಾವು ಒಮ್ಮೆಲೆ ನಿಮ್ಮ ಮೇಲೆ ದಂಡೆತ್ತಿ ಬರಬೇಕಾಗಿತ್ತು; ಆದರೆ ಜಗತ್ತಿನೊಳಗಿನ ಎಲ್ಲ ಮನುಷ್ಯರೂ ವಿಚಾರಪೂರ್ಣರಿರುವದಿಲ್ಲವೆಂಬದನ್ನು ನೆನೆದು, ನಿಮ್ಮನ್ನು ಜಾಗ್ರತಿಗೊಳಿಸುವದಕ್ಕಾಗಿ ಈ ಆಜ್ಞಾಪತ್ರವನ್ನು ಕಳುಹಿಸಿರುವೆವು.

ಈ ಆಜ್ಞಾಪತ್ರ ಮುಟ್ಟಿದೊಡನೆಯೆ ನೀವು ಶರಣಾಗತರಾದ ಸಾಮ್ರಾಜ್ಯ ದ್ರೋಹಿಗಳನ್ನೊಡಗೊಂಡು ಬಂದು ಬಾದಶಾಹೀ ಸಿಂಹಾಸನಕ್ಕೆ ಕುರ್ನಿಸಾತ ಮಾಡಬೇಕೆಂದು ಸೂಚಿಸುವೆವು. ಒಂದುವೇಳೆ ಈ ಆಜ್ಞೆಯು ಉಲ್ಲಂಘಿಸಲ್ಪಟ್ಟರೆ, ಮೊಗಲ ಸೇನಾಸಾಗರವು ಚಿತೋಡವನ್ನು ಉಧ್ವಸ್ತಗೊಳಿಸುವವೆಂಬದನ್ನು ಮರೆಯಬೇಡಿರಿ.

ದಿಲ್ಲಿ. ಮೊಗಲ ಸಮ್ರಾಟ, ಅಕಬರ ಬಾದಶಹ"

ಕರಣಿಕನು ಪತ್ರವನ್ನೋದಿದ ಮೇಲೆ ಅಕಬರ ಬಾದಶಹನು—"ಶಾಬಾಸ್! ತೋಡರಮಲ್ಲ ಸೇನಾಪತಿಗಳೆ, ನಿಮ್ಮ ಬುದ್ಧಿ ಕುಶಲತೆಯು ಅವರ್ಣನೀಯವಿರುವದು. ಉದಯಸಿಂಗನು ಈ ಪತ್ರವನ್ನೋದಿದ ಕೂಡಲೆ ಅಳ್ಳೊಡೆದು ಶರಣಾಗತನಾಗುವನೆಂಬದರಲ್ಲಿ ಸಂದೇಹವಿಲ್ಲ." ಎಂದು ಆನಂದೋದ್ಗಾರ ತೆಗೆದನು.

"ಜಹಾಂಪನಾಹ, ಅವನು ಯಾವ ಕೆಚ್ಚೆದೆಯವನು? ಅವನ ಕೈ ಕೆಳಗಿನ ಸೇನಾಪತಿಗಳೂ ಮಂತ್ರಿಗಳೂ ಸರದಾರರೂ ಒಳ್ಳೆಯ ಪ್ರತಿಭಾಸಂಪನ್ನರಿರುವದರಿಂದ ಅವರ ಬಲದಿಂದಲೆ ರಾಣಾನು ಉನ್ಮತ್ತತನದಿಂದ ವರ್ತಿಸುತ್ತಿರುವನು. ಅವನ ರಾಜಪರಿವಾರವು ಕರ್ತವ್ಯನಿಷ್ಠವಿಲ್ಲದಿದ್ದರೆ ಇಷ್ಟೊತ್ತಿಗೆ ಮೇವಾಡದ ರಾಜ್ಯವು ಇತ್ತೋ ಇಲ್ಲೋ ಎಂಬಂತಾಗುತ್ತಿತ್ತು." ಎಂದು ಮುಸಾಯಮಖಾನನು ಆಧ್ಯತೆಯಿಂದ ನುಡಿದನು.

ಖಾನನ ಆಡಂಬರದ ಮಾತುಗಳು ರಾಜಾ ತೋಡರಮಲ್ಲನಿಗೆ ಸರಿದೋರಲಿಲ್ಲ. ಆಗ ಅವನು ಖಾನನನ್ನು ಕುರಿತು—"ಸೇನಾಪತಿಗಳೆ, ರಾಜನೂ ಸೇನೆಯೂ ಸೇನಾಪತಿಗಳೂ ಹೇಡಿಗಳೂ ಕರ್ತವ್ಯ ಮೂಢರೂ ಆಗಿದ್ದರೆ, ಅವರನ್ನು ಪರಾಜಯಗೊಳಿಸಲಿಕ್ಕೆ ಮೊಗಲ ಸಾಮ್ರಾಜ್ಯ ಶಕ್ತಿಯು ಬೇಕಾಗುತ್ತಿರುವದಿಲ್ಲ. ಸುಮ್ಮನೆ ಕುಳಿತರೆ ಹೊಡೆಯುವೆನೆಂದು ಸಾರುವ ಮಾತಿನ ಮಲ್ಲನ ಅನುಕರಣ ಮಾಡಹೋಗುವದು ನಗೆಗೀಡಾದ ಮಾತು. ರಾಜನೂ ರಾಜ ಪರಿವಾರವೂ ಉತ್ತಮ ತರದ ರಾಜಕಾರಣ ಪಟುತ್ವವುಳ್ಳವರಿದ್ದರೆ ಅಂತಹ ರಾಷ್ಟ್ರವನ್ನು ಸ್ವಾಧೀನಪಡಿಸಿಕೊಳ್ಳುವದು ಮೊಗಲ ಸಾಮ್ರಾಜ್ಯದಂತಹ ಎಷ್ಟೋ ಸಾಮ್ರಾಜ್ಯ ಶಕ್ತಿಗಳಿಗೆ ಮೀರಿದ ಸಂಗತಿಯಾಗಿರುವದು. ಭಾರತ ವರ್ಷದಲ್ಲಿ ರಾಷ್ಟ್ರಾಭಿಮಾನವೂ ಐಕ್ಯವೂ ಕರ್ತವ್ಯ ನಿಷ್ಠೆಯೂ ಇರತಕ್ಕಷ್ಟು ಇಲ್ಲದ್ದರಿಂದ ಮುಹಮ್ಮದೀಯರ ವರ್ಚಸ್ಸವು ನೆಲೆಗೊಂಡಿತು. ಇಲ್ಲದಿದ್ದರೆ ಎತ್ತಿ ... ಒತ್ತಿನವ ವಸ್ತ್ರ ಜನರು ಘಟ್ಟದಿತ್ತೀಚೆಗೆ ಬರುತ್ತಿದ್ದಿಲ್ಲ.

ಮೇವಾಡದ ಸರದಾರ-ಸೇನಾಪತಿಗಳೂ ಮಂತ್ರಿಗಳೂ ಹೇಗೆ ರಾಜಕಾರಣಪಟು ಗಳೂ ಕರ್ತವ್ಯನಿಷ್ಠರೂ ಇರುವರೋ, ಅವರಂತೆ ಉದಯಸಿಂಹ ಮಹಾರಾಣಾಜಿಯು ವರ ವರ್ತನವಿದ್ದರೆ ಮೇವಾಡದ ಹೆಸರನ್ನು ಕನಸಿನಲ್ಲಿ ತೆಗೆಯುವ ಎದೆಯೂ ಮೊಗಲ ಸಮ್ರಾಟರಿಗಾಗುತ್ತಿರಲಿಲ್ಲ. ಮುನಾಯಮಖಾನ. ಏನು ಮಾಡುವದಿದ? ಕಾಲವು ಮಾತನಾಡಿಸುತ್ತದೆ; ನೀವು ಮಾತಾಡುವದಿಲ್ಲ!''

ತೋಡರಮಲ್ಲನ ಉದ್ವೇಗದ ಮಾತುಗಳನ್ನು ಕೇಳಿ. ಗುಣಗ್ರಾಹಿಯೆನಿಸಿ ಕೊಳ್ಳಲಿಕ್ಕೆ ಹವಣಿಸುತ್ತಿರುವ ಅಕಬರ ಬಾದಶಹನು ಅವನ ಪ್ರಶಂಸೆ ಮಾಡಬೇ ಕೆಂಬ ಇಚ್ಛೆಯಿಂದ "ರಾಜಾ! ನಿಮ್ಮ ಮಾತುಗಳು ನಿಜವಾದವುಗಳಿರುವವು. ಹಿಂದುಗಳಲ್ಲಿ ಸ್ವದೇಶಾಭಿಮಾನವಿದ್ದರೆ ಮಹಮ್ಮದೀಯರು ಇಲ್ಲಿಗೆ ಬರುತ್ತಿದ್ದಿಲ್ಲ." ಎಂದು ನುಡಿದು, ಸ್ವಲ್ಪ ಹೊತ್ತು ಸುಮ್ಮನೆ ಕುಳಿತು, ಅನಂತರದಲ್ಲಿ—"ತೋಡರ ಮಲ್ಲರೆ, ನೀವು ಇಷ್ಟು ಬಗೆಯ ಸ್ವದೇಶಾಭಿಮಾನ ಪ್ರೇರಿತರಿದ್ದರೂ ಮೊಗಲ ಸಿಂಹಾ ಸನದಲ್ಲಿ ನಿಷ್ಠೆಯುಳ್ಳವರಿಲ್ಲವೆ? ಇದೇ ಬಗೆಯಾಗಿ ವರ್ತನವಿಟ್ಟು, ಸಾಮ್ರಾಜ್ಯದ ಕೃಪೆಯನ್ನು ಸಂಪಾದಿಸಿಕೊಳ್ಳಲಿಕ್ಕೆ ಈ ಉನ್ಮತ್ತ ರಜಪುತರಿಗೇನಾಗಿದೆ?"

"ಅಂತಹ ಸದ್ಬುದ್ಧಿಯು ಅವರಲ್ಲಿಲ್ಲದ್ದರಿಂದ ಕೃತಕರ್ಮ ಪ್ರಾಯಶ್ಚಿತ್ತವನ್ನು ಅನುಭವಿಸುವರು."ಎಂದು ಮುನಾಯಮಖಾನನು ಜಂಬದಿಂದ ಮಾತಾಡಿದನು.

'ತೋಡರಮಲ್ಲ,' ವಿಷಯಾಂತರ ಮಾಡಬೇಕೆಂದು ಬಾದಶಹನು ವಿಚಾರ ಮಾಡಿ—'ಒಂಟಿಯ ಸ್ವಾರನೊಡನೆ ಈ ಆಜ್ಞಾಪತ್ರವನ್ನು ಚಿತೋಡಕ್ಕೆ ಕಳಿಸುವ ವ್ಯವಸ್ಥೆ ಮಾಡಿರಿ.'

ಬಾದಶಹನ ಆಜ್ಞಾಪತ್ರವು ಉಷ್ಟ್ರಾರೋಹಿಯ ಸ್ವಾಧೀನವಾಯಿತು. ಅನಂ ತರದಲ್ಲಿ ಸ್ವಲ್ಪ ವೇಳೆಯ ವರೆಗೆ ಇತರ ರಾಜಕಾರಣದ ವಿಷಯವಾಗಿ ಮಾತು-ಕಥೆ ಗಳು ನಡೆದು, ಸಭಾವಿಸರ್ಜನೆಯಾಯಿತು.

---

## ಮನೋರಂಜನ ಮಂದಿರದಲ್ಲಿ.

ಚಿತೋಡದ ಮಹಾರಾಣಾ ಉದಯಸಿಂಗನಲ್ಲಿ ರಾಜ್ಯ ಕರ್ತೃತ್ವಗುಣದ ಅಭಾವವಿತ್ತು. ಅವನು ವಿಲಾಸಿಯೂ ಅಳ್ಳೆದೆಯವನೂ ಆಗಿದ್ದನು. ಅವನ ಆಳಿ ಕೆಯು ದೇಶಕ್ಕೆ ಸುಖ-ಶಾಂತಿಗಳನ್ನೀಯುವದೆಂದು ಪ್ರಜಾಜನರು ಮೊದಲು ಮೊ- ದಲು ತಿಳಿದಿದ್ದರು; ಆದರೆ ಉದಯಸಿಂಗನು ಪಟ್ಟಾಭಿಷಿಕ್ತನಾದ ಸ್ವಲ್ಪದಿನಗಳಲ್ಲಿಯೆ ನಿಜಸ್ವರೂಪವು ತಿಳಿಯಿತು. ಚಿತೋಡದ ಓಲಗದೊಳಗಿನ ಅಧಿಕಾರಿವರ್ಗವು ಒಳ್ಳೆಯ ಕರ್ತವ್ಯನಿಷ್ಠವಿತ್ತು. ಪರಮ ಪವಿತ್ರವಾದ ಶಿಸೋದಿಯಾ ವಂಶದ ಕುಲ ಗೌರವವು ಸ್ಥಿರವಾಗಿ ಉಳಿಯಬೇಕೆಂದು ಅದು ಅವ್ಯಾಹತವಾಗಿ ಯತ್ನಿಸುತ್ತಿತ್ತು. ರಾಕ್ಷಸೀ ರಾಜ್ಯತೃಷ್ಣೆಯ ಅಕಬರ ಬಾದಶಹನು ಮಿಕ್ಕ ರಜಪುತ ಅರಸರನ್ನು

ಮಾಂಡಲಿಕರನ್ನು ಮಾಡಿಕೊಂಡಂತೆ ಮೇವಾಡಾಧಿಪತಿಯು ಮೇಲಾದರೂ ಅದೇ ಪ್ರಸಂಗ ತರುವನೆಂದು ರಾಜಕಾರಣಧುರಂಧರರಾದ ಮೇವಾಡದ ರಾಜಪರಿವಾರಕ್ಕೆ ಮೊದಲೇ ತಿಳಿದಿತ್ತು. ಉದಯಸಿಂಗನು ಹೇಡಿಯೂ ವಿಲಾಸಿಯೂ ಇದ್ದುದರಿಂದ ಮೇವಾಡ ರಾಷ್ಟ್ರವು ಸುಖಸ್ವಾತಂತ್ರ್ಯಗಳಿಗೆ ಎರವಾಗಿ, ಯಶೋಗೌರವವನ್ನು ಎಲ್ಲಿ ಕಳೆದುಕೊಳ್ಳುವದೋ ಎಂದು ಅದು ಹಗಲಿರುಳೂ ಕುದಿಯುತ್ತಿತ್ತು. ಶರಣಾಗತರಾದ ಮಾಲವೇವಸಿಗೂ ಮಾರವಾಡಾಧಿಪತಿಗೂ ಆಶ್ರಯವಿತ್ತದ್ದರಿಂದ ಬಾದಶಹನು ಮೇವಾಡದ ಮೇಲೆ ಸಿಟ್ಟಾಗಿ ಪತ್ರ ಬರೆದ ಮೇಲಂತು ಚಿತೋಡದ ಮೇಲೆ ಗಂಡಾಂತರವೊದಗುವದೆಂದು ಚಿತೋಡದ ರಾಜ್ಯಕರ್ತರು ದೃಢವಾಗಿ ನಂಬಿದರು. ಮೊದಲಿನ ಮಹಾಸಂಗ್ರಾಮಗಳಿಂದ ಚಿತೋಡದ ರಣದೇವತೆಯು ಸಂತುಷ್ಟಳಾಗಿರುವಳೆಂದೂ, ಮುಂದೆ ಯುದ್ಧಪ್ರಸಂಗಗಳು ಬೇಗನೆ ಒದಗಲಿಕ್ಕಿಲ್ಲವೆಂದೂ ಮೇವಾಡದ ಮಂತ್ರಿ-ಸೇನಾಪತಿಗಳು ತಿಳಿದಿದ್ದರು; ಆದರೆ ಬುಭುಕ್ಷಿತಳೂ ರಕ್ತಪಿಪಾಸುವೂ ಆದ ಚಿತೋಡದ ಸಂಗ್ರಾಮದೇವತೆಯು ಇನ್ನೂ ಸಂತೃಪ್ತಳಾಗಿಲ್ಲವೆಂದು ಅಕಬರನ ಪತ್ರದಿಂದ ಅವರ ಮನವರಿಕೆಯಾಯಿತು; ಆದರೆ ಯುದ್ಧದ ಅಂಜಿಕೆಯಿಂದ ಶತ್ರುಗಳಿಗೆ ಶರಣಾಗತರಾಗುವಂತಹ ಕೀಳುತನವು ಅವರಲ್ಲಿದ್ದಿಲ್ಲ. ಯಾವದೊಂದು ನಿಮಿತ್ತವನ್ನು ಮುಂದೆ ಮಾಡಿ ಕಾಳಗಕ್ಕೆಳೆಯಿಸುವ ಬಾದಶಹನ ತೋಳು ತಿಂಡಿಯನ್ನು ಕುಗ್ಗಿಸಬೇಕೆಂದು ಮೇವಾಡದ ಸರದಾರ-ಸೇನಾಪತಿಗಳು ನಿರ್ಧರಿಸಿಕೊಂಡು, ಬಾದಶಹನ ಪತ್ರಕ್ಕೆ ಯೋಗ್ಯವಾದ ಉತ್ತರವನ್ನು ಕಳಿಸಿದ್ದರು.

ಮೊದಲೇ ವಿಲಾಸಿಯಾಗಿದ್ದ ಉದಯಸಿಂಗನು ಅರುಣಕುಮಾರಿಯ ಆಗಮನವಾದಂದಿನಿಂದಂತು ಮತ್ತಿಷ್ಟು ವಿಲಾಸಿಯಾಗಿದ್ದನು. ಅವನು ಈಗ ರಾಜಕಾರಣವನ್ನು ಮರತೇ ಬಿಟ್ಟಿದ್ದನೆಂದರೂ ಸಲ್ಲುವದು ಒಳ್ಳೆಯ ಮಹತ್ವದ ರಾಜಕಾರಣವಿದ್ದಾಗ ಮಂತ್ರಿ-ಸೇನಾಪತಿಗಳ ಆಗ್ರಹಕ್ಕಾಗಿ ಒಂದು ಗಳಿಗೆಯ ಮಟ್ಟಿಗೆ ಅವನು ಓಲಗಕ್ಕೆ ಹೋಗುತ್ತಿದ್ದನು. ಅರುಣಕುಮಾರಿಯು ರಾಜಕಾರಣ ನಿಷ್ಣಾತಳೂ ಕ್ಷಾತ್ರತೇಜದಿಂದ ಯುಕ್ತಳಾದವಳೂ ಇದ್ದುದರಿಂದ ಅವಳ ಅಭಿಪ್ರಾಯದಂತೆ ನಡೆಯಬೇಕೆಂದು, ಉದಯಸಿಂಗನು ಮಂತ್ರಿ-ಸೇನಾನಾಯಕರಿಗೆ ಆಜ್ಞೆ ಮಾಡಿದ್ದನು. ಕರ್ತೃತ್ವಶಾಲಿನಿಯೂ ವಿಚಾರಿಯೂ ಆದ ಅರುಣಕುಮಾರಿಯು ರಾಜ್ಯಸೂತ್ರಗಳನ್ನು ಕೈಯಲ್ಲ ತೆಗೆದುಕೊಂಡು, ರಾಜಕಾರಣತಜ್ಞರಾದ ಅಧಿಕಾರಿ ವರ್ಗವು ದಂಗು ಬಡೆಯುವಂತೆ ರಾಜ್ಯಭಾರ ನಡೆಯಿಸಿದ್ದಳು.

ಅರುಣಕುಮಾರಿಯನ್ನು ಎಲ್ಲ ಜನರೂ ರಾಣಿಯೆಂದು ಸಂಬೋಧಿಸುತ್ತಿದ್ದರು. ಅವಳು ರಾಣಿಯೆಂಬ ಅಭಿಧಾನ ಹೊಂದಿದ್ದರೂ ಮೇವಾಡದ ಮಹಾರಾಣಾನ ಧರ್ಮಪತ್ನಿಯೆಂಬ ಗೌರವ ಪೂರ್ಣವಾದ ಹೆಸರು ಹೊಂದಿರಲಿಲ್ಲ ರಾಣಾನು ಮಾತ್ರ ಅವಳನ್ನು ಧರ್ಮಪತ್ನಿಯೆಂದು ಭಾವಿಸಿ ಮಾನ-ಮರ್ಯಾದೆ ಕೊಡುತ್ತಿದ್ದನು. ಮಿಕ್ಕವರು ಅವಳನ್ನು ಉದಯಸಿಂಗನ ಉಪಪತ್ನಿಯೆಂದೇ ತಿಳಿದಿದ್ದರು. ಅರುಣಕುಮಾರಿ

ಯು ಜನರ ಪ್ರಶಂಸೆಯ ಹಾಗು ನಿಂದೆಯ ಕಡೆಗೆ ಲಕ್ಷ್ಯಗೊಡದೆ, ತನ್ನ ಕರ್ತವ್ಯವನ್ನು ಯಥಾಸ್ಥಿತವಾದ ರೀತಿಯಿಂದ ನೆರವೇರಿಸುತ್ತಿದ್ದಳು. ಸ್ತ್ರೀಯು, ಅದರಲ್ಲಿ ವಾರವನಿತೆಯು ಯೋಗ್ಯತೆಯುಳ್ಳವಳು ರಾಜ್ಯ ಸೂತ್ರಗಳನ್ನು ಸ್ವಾಧೀನಪಡಿಸಿಕೊಂಡದ್ದು ಯಾವ ಜನರಿಗೂ ಸರಿಯಾಗಿ ತೋರಲಿಲ್ಲ. ಅವರು ಉದಯಸಿಂಗನನ್ನೂ ಅರುಣಕುಮಾರಿಯನ್ನೂ ವಿಶಿಷ್ಟವಾದ ದೃಷ್ಟಿಯಿಂದ ನೋಡತೊಡಗಿದ್ದರು.

ಅರುಣಕುಮಾರಿಯು ತನ್ನ ಮನೋರಂಜನ ಮಂದಿರದಲ್ಲಿ ಒಬ್ಬಳೇ ಕುಳಿತಿದ್ದಳು. ಅವಳು ಪ್ರಯಾಗದಲ್ಲಿಯ ತನ್ನ ಸಹಚರಿಯಾದ ಮಾಲತಿಯ ಪತ್ರವನ್ನೋದತೊಡಗಿದ್ದಳು. ಕೃಷ್ಣಲಾಲನು ತೀರ್ಥ-ಯಾತ್ರೆಗಳನ್ನು ಮುಗಿಸಿಕೊಂಡು, ತನ್ನ ಕೈ ಕೆಳಗಿನ ಸೈನ್ಯದೊಡನೆ ಅಕಬರ ಬಾದಶಹನನ್ನು ಕೂಡಿರುವನೆಂದು ಅವಳು ಪತ್ರದಲ್ಲಿ ಬರೆದಿದ್ದಳು. ತನ್ನ ತಂದೆಯು ಸ್ವಜನಾನುರಾಗವನ್ನೂ ಸ್ವಾಭಿಮಾನವನ್ನೂ ತೊರೆದು, ಸಾಮ್ರಾಜ್ಯ ಲಾಲಸೆಯ ಅಕಬರ ಬಾದಶಹನ ಶಕ್ತಿಯನ್ನು ವೃದ್ಧಿಗೊಳಿಸುವದಕ್ಕೆ ತೆರಳಿದ್ದನ್ನು ನೋಡಿ ಅವಳಿಗೆ ಬಲು ಖೇದವೆನಿಸಿತು. ವನರಾಜನಂತಹ ಕೊಲೆಗಡಕನೂ ಸುಲಿಗೆಗಾರನೂ ತನ್ನ ಸ್ವತ್ತು ಸ್ವದೇಶಕಾರ್ಯಕ್ಕಾಗಿ ಉಪಯೋಗವಾಗಬೇಕೆಂದು ಅಂತಿಮ ಇಚ್ಛೆಯನ್ನು ಪ್ರಕಟಿಸಿರುವಾಗ, ಅಜಿತಾನಂದರಂತಹ ಮಹಾತ್ಮರ ಶಿಷ್ಯನೆನಿಸಿಕೊಂಡು, ಸದೈವ ಸ್ವಜನಹಿತಕ್ಕಾಗಿ ದೇಹವನ್ನು ಸವೆಯಿಸುವ ಉದ್ದೇಶವನ್ನಿಟ್ಟುಕೊಂಡ ತನ್ನ ತಂದೆಯು, ಈಗ ಒಬ್ಬ ರಾಕ್ಷಸೀ ರ್‍ಯಾಜ್ಯತೃಷ್ಣೆಯ ವಿಧರ್ಮೀಯ ಅರಸನ ಬಲವನ್ನು ಹೆಚ್ಚು ಮಾಡಲಿಕ್ಕೆ ಕಾರಣೀಭೂತನಾಗಿರುವದನ್ನು ನೋಡಿ ಅವಳ ಮನಸ್ಸು ಒಳ್ಳೆಯ ಉದಾಸವಾಯಿತು. ಆಗ ಅವಳು ಉಪದೇಶಪರವಾದ ಒಂದು ಪತ್ರ ಬರೆದು, ಗುಪ್ತಚರರ ಮುಖಾಂತರವಾಗಿ ಕೃಷ್ಣಲಾಲನಿಗೆ ಕಳುಹಿಸಿದಳು. ಬಾದಶಹನು ಚಿತೋಡದ ಮೇಲೆ ದಂಡೆತ್ತಿ ಬರುವನೆಂದೂ, ಆ ಸಮಯದಲ್ಲಿ ಜನ್ಮಭೂಮಿಯಾದ ರಾಜಸ್ತಾನದ ಅಭಿಮಾನ-ಗೌರವಗಳನ್ನು ಕಾಯುವದು ನಿಜವಾದ ರಜಪುತನ ಕರ್ತವ್ಯವಿರುವದೆಂದೂ ಬರೆದು, ಪತ್ರ ಮುಟ್ಟಿದೊಡನೆಯೆ ಘನ ಸೈನ್ಯ ಸಹಿತವಾಗಿ ಚಿತೋಡಕ್ಕೆ ಹೊರಡಬೇಕೆಂದು ಅವಳು ಕೃಷ್ಣಲಾಲನಿಗೆ ತಿಳಿಸಿದ್ದಳು.

ಅರುಣಕುಮಾರಿಯು ತನ್ನ ತಂದೆಯಾದ ಕೃಷ್ಣಲಾಲನಿಗೆ ಪತ್ರ ಕಳುಹಿಸಿದ ಮೇಲೆ ಭಾವೀ ವಿಪತ್ತಿನ ಬಗ್ಗೆ ವಿಚಾರಿಸುತ್ತ ಕುಳಿತಳು. ಚಿತೋಡದ ಓಲಗದಿಂದ ಕಳುಹಿಸಲ್ಪಟ್ಟ ಅಪಮಾನಕಾರಕ ಪತ್ರದಿಂದ ಅಕಬರ ಬಾದಶಹನು ಸಂತಪ್ತನಾಗಿ ಹೇರಳವಾದ ಸೈನ್ಯದೊಡನೆ ಹೊರಟು ಬರುವನೆಂದು ಅವಳು ನಿರ್ಧರ ಮಾಡಿಕೊಂಡಿದ್ದಳು. ದಿಲ್ಲಿಯ ಬಾದಶಹನ ಸೇನಾಸಾಗರದೊಡನೆ ಕಾದಿ ವಿಜಯ ಸಂಪಾದನೆ ಮಾಡಿಕೊಳ್ಳಬೇಕಾದಕೆ ಸೈನ್ಯದ ಸಿದ್ಧತೆಯು ಚನ್ನಾಗಿ ಆಗಬೇಕೆಂದು ಅವಳ ಅಭಿಪ್ರಾಯವಿತ್ತು. ಉದಯಸಿಂಗನು ರಾಜಕಾರಣವನ್ನು ತೀರ ದುರ್ಲಕ್ಷಿಸಿದ್ದರಿಂದ ರಜಪುತರ ಬಲವು ಕಡಿಮೆಯಾಗಿತ್ತು. ಉದಯಸಿಂಗನಿಗೆ ಉಪದೇಶಿಸಿ ಅವನನ್ನು

ಕರ್ತವ್ಯರತನನ್ನು ಮಾಡಬೇಕೆಂದೂ, ಅವನು ಪ್ರಾಪ್ತಪರಿಸ್ಥಿತಿಯಲ್ಲಿ ಕರ್ತವ್ಯಪರಾಙ್ಮುಖನಾದರೆ ಸಂಪೂರ್ಣರಾಜ್ಯ ಸೂತ್ರಗಳನ್ನು ಕೈಯಲ್ಲಿ ತೆಗೆದುಕೊಂಡು ಸಂಗ್ರಾಮ ಸಿದ್ಧತೆ ಮಾಡಬೇಕೆಂದೂ ಅರುಣಕುಮಾರಿಯು ನಿಶ್ಚಯಿಸಿಕೊಂಡಳು. ಅಷ್ಟರಲ್ಲಿ ಪಟ್ಟಮಹಿಷಿಯಾದ ಮಹಾರಾಣೀ ಸರೋಜಸುಂದರಿ ದೇವಿಯು ತನ್ನ ಸಹಚರಿಯಾದ ಲಾವಣ್ಯವತಿಯೊಡನೆ ಅಲ್ಲಿಗೆ ಬಂದಳು. ಅರುಣಕುಮಾರಿಯು ಸರೋಜಸುಂದರಿಯನ್ನು ಸನ್ಮಾನಿಸಿ ಮಂಚದ ಮೇಲೆ ಕುಳ್ಳಿರಿಸಿದಳು. ಅನಂತರದಲ್ಲಿ ಅವಳು "ದೇವೀ, ಇದೇನು? ಎಂದೂ ಬಾರದೆ ಇದ್ದ ನೀವು ಇಂದು ಅಕಲ್ಪಿತವಾಗಿ ಬಂದಿರಿ? ಹೊಸದಾಗಿ ಕಟ್ಟಲ್ಪಟ್ಟ ನನ್ನ ಈ ಮನೋರಂಜನ ಮಂದಿರದ ಸೊಬಗನ್ನು ನಿರೀಕ್ಷಿಸಲಿಕ್ಕೆ ಬರೋಣಾಯಿತೇನು?"

"ರಾಣಿ, ಮನೋರಂಜನದ ವೇಳೆಯಲ್ಲಿ ಮನೋರಂಜನ ಮಂದಿರದ ಸೊಬಗು ಯಥಾಸ್ಥಿತವಾಗಿ ಕಾಣುವದು. ಈಗಿನ ವಿಮನಸ್ಕ ಸ್ಥಿತಿಯಲ್ಲಿ ಯಾವ ಶೋಭೆಯನ್ನು ನೋಡಿದರೆ ಮನೋರಂಜನವಾಗುವದು? ಸ್ವಚ್ಛಂದವೃತ್ತಿಯಲ್ಲಿ ಕಾಲ ಕಳೆಯತೊಡಗಿದ ನಿನಗೆ ಮಾತ್ರ ಶೋಭೆ-ಸೌಂದರ್ಯಗಳಿಂದ ಆನಂದವಾಗುವದು. ಅಂತಹ ಆನಂದವನ್ನು ಪಡೆಯುವದು ನನ್ನ ದೈವದಲ್ಲಿಲ್ಲವಲ್ಲ!"

ಸರೋಜಸುಂದರಿಯು ಮಾತಿನ ಭಾವವು ಅರುಣಕುಮಾರಿಯ ಮನಸ್ಸಿಗೆ ವಿಪರೀತವಾಗಿ ಹೊಳೆಯಿತು ಆಗ ಅವಳು ಕ್ಲೇಶಯುಕ್ತ ಹೃದಯಿಯಾಗಿ—"ಮಹಾರಾಜ್ಞಿ, ನಿಮ್ಮ ಮನಸ್ಸು ವಿಕಲ್ಪಕ್ಕೊಳಗಾಗಿರುವದು. ನನಗೆ ಭಾಗ್ಯೋದಯವನ್ನುಂಟು ಮಾಡಿದವರು ನೀವೇ. ಹೀಗಿರಲು ನಿಮ್ಮ ಸೌಖ್ಯವನ್ನು ನಾಶಗೊಳಿಸಲಿಕ್ಕೆ ನಾನು ಯತ್ನಿಸುವೆನೆ? ನನ್ನನ್ನು ಅಂತಹ ನೀಚಕೋಟಿಯಲ್ಲಿ ಗಣಿಸಬೇಡಿರಿ. ಈ ಅರುಣಾಳು ಕಾಲತ್ರಯದಲ್ಲಿಯೂ ಕೃತಘ್ನಳಾಗಲಾರಳು. ಮಹಾರಾಜರ ಚಿತ್ತವೃತ್ತಿಯೇ ಇತ್ತೀಚೆಗೆ ವಿಲಕ್ಷಣತರದ್ದಾಗಿರುವದು. ಅವರು ಈ ಮನೋರಂಜನ ಮಂದಿರವನ್ನು ಬಿಟ್ಟು ಎಲ್ಲಿಗೂ ಹೋಗದಾಗಿರುವರು. ಅವಶ್ಯವಿದ್ದಾಗ ಸ್ವಲ್ಪ ವೇಳೆ ಮಾತ್ರ ಓಲಗಕ್ಕೆ ಹೋಗುವರು ಹೋದರೂ ರಾಜಕಾರಣದ ಕಡೆಗೆ ಮನಸ್ಸು ಹಾಕುತ್ತಿರುವದಿಲ್ಲ ಮಹಾದೇವಿ, ನಿಮ್ಮಂತಹ ಉದಾತ್ತ ಹೃದಯದ ಸಾಧ್ವೀಮಣಿಗಳಿಗೆ ದುಃಖವೀಯಬೇಕೆಂದು ನಾನು ಸಾಹಸ ಮಾಡಿಲ್ಲ; ಆದರೆ ನನ್ನ ಆಗಮನದಿಂದ ಅಂತಹ ಪರಿಸ್ಥಿತಿಯು ಒದಗಿರುವದೆಂಬದು ನನಗೆ ತಿಳಿದಿದೆ. ಅದಕ್ಕೆ ನಾನು ನಿರುಪಾಯಳಾಗಿರುವೆನು. ನಾನು ಮಹಾರಾಜರಿಗೆ ಬಹು ಪರಿಯಾಗಿ ಉಪದೇಶಿಸಿ ಬೇಸತ್ತೆನು. ಇನ್ನೂ ಕೆಲವು ದಿನಗಳ ವರೆಗೆ ಪ್ರಯತ್ನಿಸಿ, ಕಡೆಗೆ ಅವರು ದಾರಿಗೆ ಬರದಿದ್ದರೆ ನಾನೇ ಪ್ರಯಾಗಕ್ಕೆ ಹೊರಟು ಹೋಗುವೆನು. ದೇವಿ, ನೀವು ಜಾಲೀ ಬಿತ್ತಿ ಕಾಲಿಗೆ ಶೂಲ ಮಾಡಿಕೊಂಡಂತಾಯಿತು!"

"ನಾನು ಈ ಮಾತನ್ನು ಮಹಾರಾಜ್ಞಿಯವರಿಗೆ ಎಂದೋ ಹೇಳಿರುವೆನು ಲಾವಣ್ಯವತಿಯು ನಗುತ್ತ ನುಡಿದಳು.

“ಲಾವಣ್ಯ, ಇದು ಉಪಹಾಸದ ವೇಳೆಯೆ?” ಎಂದು ಸರೋಜಸುಂದರಿಯು ನುಡಿದು, ಅರುಣಕುಮಾರಿಯನ್ನು ಕುರಿತು—“ಅರುಣದೇವಿ, ನಿನ್ನ ಕಲ್ಪನೆಯು ತಪ್ಪಾಗಿರುವದು. ಮಹಾರಾಜರು ಯಾವಾಗಲೂ ಮನೋರಂಜನ ಮಂದಿರದಲ್ಲಿ ರುವರೆಂದು ನಾನು ಅಸೂಯೆಗೊಂಡಿಲ್ಲ. ಎಲ್ಲಿದ್ದರೇನು? ಅವರ ಮನರಂಜನವಾಯಿ ತೆಂದರೆ ನನಗೂ ಮನೋರಂಜನವಾಗುವದು. ಅರುಣ, ಮಹಾರಾಜರನ್ನು ನನ್ನ ಪ್ರಮೋದಮಂದಿರಕ್ಕೆ ಕಳುಹಿಸಬೇಕೆಂದು ತಿಳಿಸಲಿಕ್ಕೆ ನಾನು ಇಲ್ಲಿಯ ವರೆಗೆ ಬಂದಿಲ್ಲ. ದಿಲ್ಲಿಯ ಬಾದಶಹನು ಚಿತೋಡದ ಮೇಲೆ ದಂಡೆತ್ತಿ ಬರುವನೆಂಬ ವಾರ್ತೆಯಿದೆ. ಇಂತಹ ಆಯಕಟ್ಟಿನ ಪ್ರಸಂಗದಲ್ಲಿ ಅವರು ತಟಸ್ಥರಾಗಿ ಕುಳಿತದ್ದ ರಿಂದ ಮನಸ್ಸು ತಡೆಯದೆ ಇಲ್ಲಿಗೆ ಬಂದೆನು. ಅವರು ನನಗೆ ಭೆಟ್ಟಿಯಾಗುತ್ತಿದ್ದರೆ, ಸಾಧ್ಯವಾ ದಮಟ್ಟಿಗೆ ಉಪದೇಶಿಸುತ್ತಿದ್ದೆನು. ಈ ಸಂಧಿಯಲ್ಲಿ ನೀನು ಅವರ ಕಣ್ಣಲ್ಲಿ ಚನ್ನಾಗಿ ಅಂಜನ ಹಾಕಲಿಕ್ಕೆಬೇಕು. ಮೇವಾಡದ ಅಭಿಮಾನ-ಗೌರವಗಳು ಉಳಿಯಬೇಕೆಂಬ ಇಚ್ಛೆಯಿದ್ದರೆ, ಮಹಾರಾಜರ ಮನಸ್ಸು ಒಲಿಸಿಕೊಂಡು ಅವ ರನ್ನು ಕರ್ತವ್ಯರತರನ್ನಾಗ ಮಾಡು ರಾಣಿ, ಶಿಸೋದಿಯಾ ಮನೆತನವೂ, ಪೂಜ ನೀಯ ಬಾಪ್ಪಾರಾವಳನ ಪವಿತ್ರ ಸಿಂಹಾಸನವೂ, ಗೌರವ ಮಂಡಿತವಾದ ಚಿತೋಡ ರಾಜಧಾನಿಯೂ ಉಧ್ವಸ್ತವಾಗಬಾರದೆಂದು ನಿನ್ನ ಉತ್ಕಟೇಚ್ಛೆಯಿದ್ದರೆ ನನ್ನ ಮಾ ತನ್ನು ಲಾಲಿಸು. ಮಹಾರಾಜರು ನಿನ್ನ ಮಾತುಗಳಿಗೆ ವೇದವಾಕ್ಯಕ್ಕಿಂತಲೂ ಮಹತ್ವ ಕೊಡುತ್ತಿರುವರು. ಅವರನ್ನು ದಾರಿಗೆ ಹಚ್ಚುವ ಕೆಲಸವು ನಿನ್ನಿಂದಲೇ ಚನ್ನಾಗಿ ಸಾಧಿಸುವದೆಂದು ತಿಳಿದು ಇಲ್ಲಿಗೆ ಬಂದೆನು.”

‘ಮಹಾದೇವಿ!’ ಅರುಣಕುಮಾರಿಯು ಗಂಭೀರತೆಯಿಂದ —“ಮಹಾರಾಜರ ಹೇಡಿತನವನ್ನು ನೋಡಿ ನನಗೆ ಕ್ಲೇಶವುಂಟಾಗುತ್ತಲಿರುವದು. ಅವರು ಯಾವಾ ಗಲೂ ನನ್ನ ಸಹವಾಸದಲ್ಲಿ ಕಾಲಕಳೆಯುತ್ತಿರುವರೆಂದು ನಾನು ಸಂಭ್ರಮಗೊಂಡಿಲ್ಲ. ಅವರ ವೃತ್ತಿಯಿಂದ ನನ್ನ ಹೃದಯಕ್ಕೆ ಬಲವಾದ ನೋವು ಉಂಟಾಗಿದೆ. ನಿಜವಾದ ಕ್ಷಾತ್ರವೀರರಲ್ಲಿರತಕ್ಕ ಗುಣಗಳು ಅವರಲ್ಲಿಲ್ಲ ಅವರು ಚಿತೋಡದ ರಾಜಮನೆತ ನಕ್ಕೆ ಕಲಂಕ ಹಚ್ಚುವ ಸಾಹಸದಲ್ಲಿರುವರು. ಪ್ರಬಲ ಪ್ರತಾಪಿಯಾದ ಅಕಬರ ಬಾದಶಹನಂತಹ ಕಡು ಹಗೆಯು ಅಮೋಘವಾದ ಸೈನ್ಯದೊಡನೆ ದಂಡೆತ್ತಿ ಬರುವ ನೆಂಬ ವಾರ್ತೆಯನ್ನು ಕೇಳಿಯೂ ತಟಸ್ಥವೃತ್ತಿಯಿಂದ ಕುಳಿತುಕೊಳ್ಳುವದೆಂದರೆ, ಇದೆಂತಹ ರಾಷ್ಟ್ರದ್ರೋಹವು ನೋಡಿರಿ. ಪ್ರಸಂಗವೊದಗಿದರೆ ಪಲಾಯನ ಮಾ- ಡುವ ಸರ್ವೋತ್ಕೃಷ್ಟವಾದ ಸಾಧನವಿರುವದೆಂದು ಸಂಭ್ರಮಗೊಂಡಿರುವ ಹೇಡಿಗ ಳಿಗೆ ಯಾರ ಉಪದೇಶದಿಂದ ಏನು ಪ್ರಯೋಜನವಾಗುವದು? ನಾನು ಸಾಧ್ಯವಾದ ಮಟ್ಟಿಗೆ ಮಹಾರಾಜರನ್ನು ಕರ್ತವ್ಯಕ್ಕೆ ತೊಡಗಿಸಲು ಯತ್ನಿಸುವೆನು. ಯಾವ ಉಪಾಯಗಳಿಂದಲೂ ಅವರು ತಮ್ಮ ಹುಟ್ಟುಗುಣವನ್ನು ಬಿಡದಿದ್ದರೆ, ಸ್ವಾತಂತ್ರ್ಯದ ಹಾಗು ಸ್ವಧರ್ಮದ ರಕ್ಷಣೆಗಾಗಿಯೂ, ಮೇವಾಡದ ಗೌರವವನ್ನು ಕಾಯುವದಕ್ಕಾ

ಗಿಯೂ ಕೈಯಲ್ಲಿ ಶಸ್ತ್ರ ಹಿಡಿದು ಧಾರಾತೀರ್ಥದಲ್ಲಿ ತಾಂಡವನೃತ್ಯವನ್ನು ಮಾಡಲಿಕ್ಕೆ ಈ ರಣಚಂಡಿಯು ಹಿಂದು ಮುಂದೆ ನೋಡುವವಳಲ್ಲವೆಂಬದನ್ನು ದಿಟವಾಗಿ ನಂಬಿರಿ. ಮಹಾರಾಣಿಯವರೆ, ಈ ಅರುಣಕುಮಾರಿಯು ಕೇವಲ ವಿಲಾಸ ಸೌಖ್ಯವನ್ನನು ಭವಿಸಲಿಕ್ಕಾಗಲಿ, ರಾಣಿಯೆನಿಸಿಕೊಂಡು ರಾಜ್ಯ ವೈಭವಗಳನ್ನು ಹೊಂದಲಿಕ್ಕಾಗಲಿ ಇಲ್ಲಿಗೆ ಬಂದಿರುವದಿಲ್ಲ. ನಿಜವಾದ ಕ್ಷಾತ್ರ ರಮಣಿಯರಲ್ಲಿರತಕ್ಕ ಗುಣಗಳನ್ನು ದಿಗ್ದರ್ಶನಕ್ಕೆ ತರದಿದ್ದರೆ, ಜನರಲ್ಲಿ ನನ್ನ ವಿಷಯಕ್ಕೆ ಹರಡಿರುವ ಕುಲಕಲಂಕಿನಿ ಯೆಂಬ ಹೆಸರು ಸ್ಥಿರವಾಗಿ ಉಳಿಯಬಹುದು. ಪತಿಯು ಕರ್ತವ್ಯಮೂಢನಿದ್ದರೆ, ಒಳ್ಳೇ ಯೋಗ್ಯತೆಯ ಪತ್ನಿಯು ಆವನ ಕಾರ್ಯವನ್ನು ಈಡೇರಿಸುವದು ಅನುಚಿತ ವಾಗಲಿಕ್ಕಿಲ್ಲವಷ್ಟೆ?"

ಅರುಣಕುಮಾರಿಯ ಮಾತುಗಳನ್ನು ಕೇಳಿ ಸರೋಜಸುಂದರಿಗೆ ಪರಮಾನಂದ ವಾಯಿತು. ಅವಳು ಅರುಣಳ ಸದ್ಗುಣಗಳನ್ನು ಚನ್ನಾಗಿ ಅರಿತಿದ್ದಳು; ಆದರೆ ಅವ ಳಲ್ಲಿ ಉಚ್ಚತರಗತಿಯ ವೀರಶ್ರೀಯ ಸಾನಿಧ್ಯವಿರುವದೆಂಬದು ಮಾತ್ರ ಸರೋಜ ಸುಂದರಿಗೆ ಗೊತ್ತಾಗಿದ್ದಿಲ್ಲ. ಪ್ರಸಂಗದಲ್ಲಿ ಶಸ್ತ್ರ ಹಿಡಿದು ಪರಾಕ್ರಮ-ಪ್ರಭಾವವನ್ನು ತೋರಿಸುವ ಪ್ರತಿಭಾಸಂಪನ್ನಳು ಅರುಣಳಾಗಿರುವಳೆಂಬದು ಮಹಾರಾಣಿಗೆ ಆಗ ಗೊತ್ತಾಗಿ, ಅವಳ ಕಣ್ಣುಗಳು ಆನಂದಾಶ್ರುಪರಿಪೂರ್ಣವಾದವು.

'ರಾಣಿ!' ಸರೋಜಸುಂದರಿಯು ಆನಂದಾತಿರೇಕದಿಂದ ಬಿಗಿದ ಕಂಠವುಳ್ಳವ ಳಾಗಿ—"ನೀನು ಬರಿಯ ರಾಣಿಯಷ್ಟೇ ಏಕೆ, ಮಹಾರಾಣಿಯಾಗಲಿಕ್ಕೆ-ಚಿತೋಡದ ಪಟ್ಟ ಮಹಿಷಿಯಾಗಲಿಕ್ಕೆ-ಯೋಗ್ಯಳಿರುವೆ. ನಿನ್ನ ವೀರಶ್ರೀಯುಕ್ತ ಭಾಷಣದಿಂದ ನಿರಾಶಾಯುಕ್ತವಾದ ನನ್ನ ಹೃದಯವು ಆಶಾಪೂರ್ಣವಾಯಿತು. ಚಿತೋಡದ ಗೌರವವೂ ಅಭಿಮಾನವೂ ನಿನ್ನಿಂದ ಕಾಯಲ್ಪಡುವವೆಂಬದರ ನಂಬಿಗೆಯಾಯಿತು."

'ಮಹಾರಾಜ್ಞಿಯವರೆ,' ಇಷ್ಟು ವೇಳೆಯ ವರೆಗೆ ಸುಮ್ಮನೆ ಕುಳಿತ ಲಾವಣ್ಯ ವತಿಯು—"ರಾಣೀ ಅರುಣಕುಮಾರಿ ದೇವಿಯವರು ಒಳ್ಳೆಯ ತೇಜಸ್ವಿಗಳಿರುವರು. ರಾಜಕಾರಣದಲ್ಲಿಯೂ ರಣಕಾರಣದಲ್ಲಿಯೂ ನಿಷ್ಣಾತರಿರುವರೆಂದು ನನ್ನ ಪತಿಗಳು ಅನೇಕ ಸಾರೆ ನನ್ನೆದುರಿಗೆ ಅಂದಿರುವರು"

'ಲಾವಣ್ಯಾ!' ಅರುಣಕುಮಾರಿಯು ನಗುತ್ತ—"ನೂತನ ಪತ್ನಿಯಾದ ನಿನ್ನೆ ದುರಿಗೆ ಆ ಸಂನ್ಯಾಸಿಯು ಏನಾದರೊಂದು ಹೇಳುತ್ತಿರಬಹುದು. ಸಂಸಾರದಲ್ಲಿ ತೊಡ ಗಿದ ಸಂನ್ಯಾಸಿಯ ಮಾತುಗಳು ನಿಜವೆಂದು ಗ್ರಹಿಸಲಿಕ್ಕೆ ಬರುವದಿಲ್ಲ. ಸಂನ್ಯಾಸಿನಿ! ನನ್ನ ಮಾತು ಸತ್ಯವಷ್ಟೆ?"

'ರಾಣಿಯವರೆ, ನನ್ನನ್ನು ಸಂನ್ಯಾಸಿನಿಯನ್ನು ಮಾಡಿದವರು ನೀವೇ ಅಲ್ಲವೆ? ಹೀಗಿದ್ದು ನನ್ನನ್ನು ಸಂನ್ಯಾಸಿನಿಯೆಂದು ಸಂಬೋಧಿಸಿ ನೋಯಿಸುವಿರೇಕೆ?"

"ಲಾವಣ್ಯಾ, ರಾಣಿಯು ನಿನ್ನನ್ನು ಸಂನ್ಯಾಸಿನಿಯನ್ನು ಮಾಡಿಲ್ಲ. ಸಂನ್ಯಾಸಿ ಯನ್ನು ಸಂಸಾರಿಯನ್ನಾಗಿ ಮಾಡಿರುವಳು." ಎಂದು ಸರೋಜಸುಂದರಿಯು ನುಡಿ

ದಳು. ಅನಂತರದಲ್ಲಿ ಅರುಣಕುಮಾರಿಯು ಲಾವಣ್ಯವತಿಯನ್ನು ಕುರಿತು-"ನೀನು ವಿಜಯಲಾಲರನ್ನು ಇಲ್ಲಿಗೆ ಕಳುಹಿಸು. ರಾಜಕಾರಣದ ವಿಷಯವಾಗಿ ಕೆಲವು ಮಾತುಗಳನ್ನಾಡಬೇಕಾಗಿದೆ. ಯುದ್ಧದ ಗೊಂದಲವು ತೀರುವ ವರೆಗೆ ನೀನು ಅವನನ್ನು ಮನೆಯಲ್ಲಿ ಕಟ್ಟಿಹಾಕಬೇಡ."

ಲಾವಣ್ಯವತಿಯು ಪತಿಯನ್ನು ಕಳುಹಿಸುವದಕ್ಕಾಗಿ ಅಲ್ಲಿಂದ ತೆರಳಿದಳು. ಸ್ವಲ್ಪ ವೇಳೆಯಲ್ಲಿ ವಿಜಯಲಾಲನು ಬಂದನು. ಅನಂತರದಲ್ಲಿ ಸಂಗ್ರಾಮದ ಸಿದ್ಧತೆಯ ಸಲುವಾಗಿ ಕೆಲವು ವೇಳೆಯ ವರೆಗೆ ಮಾತು-ಕಥೆಗಳು ನಡೆದವು. ತರುವಾಯ ಸರೋಜಸುಂದರಿಯೂ ವಿಜಯಲಾಲನೂ ಅರುಣಕುಮಾರಿಯ ಮನೋರಂಜನ ಮಂದಿರವನ್ನು ಬಿಟ್ಟು ಹೊರಟರು.

---

## ರಾಣಿಯ ಉತ್ಸಾಹ.

ಮಹಾರಾಣಾ ಉದಯಸಿಂಗನ ತೇಜಸ್ವಿತಾಪೂರ್ಣವಾದ ಪತ್ರವು ದಿಲ್ಲೀಶ್ವರನ ಕೈಗೆ ತಲುಪಿದೊಡನೆಯೆ ಅವನು ಕ್ರೋಧಾಂಧನಾದನು. ಯಃಕಶ್ಚಿತ ಹಿಂದುರಾಜನೊಬ್ಬನು ಅಹಂಕಾರದಿಂದ ಅಪಮಾನಕಾರಕವಾದ ಪತ್ರ ಕಳುಹಿಸಿದ್ದಕ್ಕಾಗಿ ಅವನು ನಖಶಿಖಾಂತವಾಗಿ ಉರಿಯಹತ್ತಿದನು. ರಾಜ-ರಾಜೇಶ್ವರನಾದ ತನ್ನ ಆಜ್ಞಾಭಂಗ ಮಾಡಿದ್ದಕ್ಕಾಗಿ ಚಿತೋಡವನ್ನೂ ಮೇವಾಡದ ರಾಜಸಿಂಹಾಸನವನ್ನೂ ವಿಧ್ವಂಸಗೊಳಿಸಿ, ಆ ರಾಜ್ಯವನ್ನು ಮೊಗಲ ಸಾಮ್ರಾಜ್ಯಕ್ಕೆ ಸೇರಿಸಿಕೊಳ್ಳಬೇಕೆಂದು ಅವನು ನಿರ್ಧರಿಸಿದನು. ಬಾದಶಹನ ಶೀಘ್ರತರದ ಆದೇಶದಿಂದ ಸೇನಾಸನ್ನಾಹವು ದಿಲ್ಲಿಯಿಂದ ಹೊರಟು ಚಿತೋಡದ ಸೀಮೆಯನ್ನು ತಲುಪಿತು.

ಮೊಗಲ ಸೇನಾ ಮಹಾಸಾಗರವು ಚಿತೋಡವನ್ನು ಸಮೀಪಿಸಿದ ವಾರ್ತೆಯು ಚಾರರ ಮುಖದಿಂದ ಉದಯಸಿಂಗನಿಗೆ ತಿಳಿಯಿತು. ಕೂಡಲೆ ಅವನಲ್ಲಿಯ ಮೊದಲಿನ ಧೈರ್ಯವೂ ಸಂಗ್ರಾಮಸ್ಫೂರ್ತಿಯೂ ಮಾಯವಾದವು. ತಲೆತಿರುಕ ರಾಜಪರಿವಾರದ ಮಾತು ಕೇಳಿ ದಿಲ್ಲಿಗೆ ಅಪಮಾನಕಾರಕ ಪತ್ರ ಬರೆದದ್ದು ವಿಹಿತವಾಗಲಿಲ್ಲೆಂದು ಅವನು ತಿಳಿದನು. ಮೊಗಲ ಸೈನ್ಯವು ಬಹು ಸಂಖ್ಯಾಕವಿದ್ದು, ಅದು ತನ್ನ ಸೈನ್ಯಕ್ಕಿಂತ ಪ್ರಬಲವಾಗಿರುವದರಿಂದ ಸಂಗ್ರಾಮದಲ್ಲಿ ಜಯ ದೊರೆಯುವದೊತ್ತಟ್ಟಿಗುಳಿದು, ತನ್ನ ಹಾಗು ಚಿತೋಡದ ನಾಶವು ಮಾತ್ರ ಆಗುವದೆಂದು ಅವನು ಗಟ್ಟಿಯಾಗಿ ತಿಳಿದನು. ಕೂಡಲೆ ಅವನು ದಿಙ್ಮೂಢನಾದನು. ಹೇಗಾದರೂ ಮಾಡಿ ಒಡಂಬಡಿಕೆ ಮಾಡಿಕೊಳ್ಳಬೇಕೆಂದರೆ, ಅವನ ಸ್ವಾಭಿಮಾನಿಯಾದ ರಾಜಪರಿವಾರಕ್ಕೆ ಈ ಮಾತು ಒಪ್ಪಿಗೆಯಾಗುವಂತಿದ್ದಿಲ್ಲ. ಮೇವಾಡದ ಸ್ವಾಮಿನಿಷ್ಠ-ಸ್ವದೇಶನಿಷ್ಠ ರಾಜಪರಿವಾರವು ಅಕಬರ ಬಾದಶಹನೊಡನೆ ನಿಕರವಾದ ಕಾಳಗ ಮಾಡಬೇಕೆಂದು

ನಿರ್ಧಾರ ಮಾಡಿತ್ತು. ಚಿತೋಡದೊಳಗಿನ ಎಲ್ಲ ಕ್ಷತ್ರಿಯ ಯೋಧರು ಧಾರಾತೀರ್ಥ ದಲ್ಲಿ ಶಯನ ಮಾಡುವ ವರೆಗೆ ಸಂಗ್ರಾಮವು ನಡೆಯತಕ್ಕದ್ದೇ ಎಂದು ಸರದಾರರೂ ಸೇನಾಪತಿಗಳೂ ಉದಯಸಿಂಹನಿಗೆ ಖಂಡಿತವಾಗಿ ಹೇಳಿದರು. ಆಗ ಮಾತ್ರ ರಾಣಾನು ನಿರುಪಾಯನಾದನು. ಅವನ ಎದೆಯು ಅಳ್ಳೊಡೆಯಿತು. ಪಲಾಯನದ ಹೊರತು ಪ್ರಾಣರಕ್ಷಣೆಗೆ ಬೇರೆ ಹಂಚಿಕೆಯಿಲ್ಲೆಂದು ಅವನ ತಿಳುವಳಿಕೆಯಾಯಿತು. ಮುಂದೆ ಏನು ಮಾಡಬೇಕೆಂಬು ಅವನು ಚಿಂತಿಸತೊಡಗಿದನು. ಚಿತೋಡದ ಸ್ವಾಮಿನಿಷ್ಠ ಸರದಾರರೂ ಸೇನಾಪತಿಗಳೂ ಬೇಕಾದ ಹಾಗೆ ಯುದ್ಧ ಮಾಡಲೊಲ್ಲರೇಕೆ, ತಾನು ಮಾತ್ರ ಮೊಗಲರ ಮುತ್ತಿಗೆಯಲ್ಲಿ ಸಿಗದೆ ಸುರಕ್ಷಿತವಾದ ಸ್ಥಳಕ್ಕೆ ಪರಿವಾರ ಸಹಿತ ವಾಗಿ ಹೋಗಬೇಕೆಂದು ನಿಶ್ಚಯಿಸಿದನು. ಅವನು ಈ ವಿಷಯದಲ್ಲಿ ರಾಜಕಾರಣ ಕುಶಲಳಾದ ಅರುಣಕುಮಾರಿಯನ್ನು ಕೇಳಬೇಕೆಂದು ಅವಳ ಮನೋರಂಜನ ಮಂದಿರಕ್ಕೆ ಬಂದನು.

ಉದಯಸಿಂಗನು ಬಂದ ಕೂಡಲೆ ಅರುಣಕುಮಾರಿಯು ನಗೆ ಮೊಗದಿಂದ ಎದುರ್ಗೊಂಡು ಅವನನ್ನು ಮಂಚದ ಮೇಲೆ ಕುಳ್ಳಿರಿಸಿದಳು. ಕೈಯಲ್ಲಿ ಬೀಸಣಿಕೆ ತೆಗೆದುಕೊಂಡು ತಾನೇ ಅವನಿಗೆ ಗಾಳಿ ಹಾಕುತ್ತ ಕುಳಿತಳು. ಆಗ ಅವಳು ಮಂದ ಹಾಸದಿಂದ—"ಮಹಾರಾಣಾಜೀ, ಇಂದು ನೀವು ಓಲಗಕ್ಕೆ ಹೋಗಿ ಬಂದದ್ದರಿಂದ ನನಗೆ ಆನಂದವಾಗಿದೆ. ಆಕಬರನು ದಂಡೆತ್ತಿ ಬರುವನೆಂಬ ವಾರ್ತೆಯಿತ್ತು. ಅವನು ದಿಲ್ಲಿಯಿಂದ ಹೊರಟಿರುವನೇ?"

'ದಿಲ್ಲಿಯಿಂದ ಹೊರಟು ಚಿತೋಡದ ಸೀಮಾಂತರವನ್ನು ಕೂಡ ತಲುಪಿರುವನು! ಬಹಳ ಮಾಡಿ ನಾಳೆ ರಾಜಧಾನಿಯನ್ನು ಮುತ್ತಬಹುದಾಗಿದೆ!' ಎಂದು ಉದಯ ಸಿಂಗನು ಗಾಬರಿಗೊಂಡು ನುಡಿದು, ನಿಟ್ಟುಸಿರು ಬಿಟ್ಟನು!

"ಯಾಕೆ, ಮಹಾರಾಜರೆ! ಮುಖದ ಮೇಲೆ ವಿಷಾದ-ಭಯಗಳ ಚಿಹ್ನಗಳು ತೋರುತ್ತಿರುವವು? ಅಕಬರನು ದಂಡೆತ್ತಿ ಬಂದದ್ದಕ್ಕಾಗಿ ನಿಮ್ಮ ಮನೋವೃತ್ತಿಯು ಹೀಗಾಗಿರಲಿಕ್ಕಿಲ್ಲವಷ್ಟೆ?"

'ಪ್ರಿಯೆ,' ಉದಯಸಿಂಗನು ಔದಾಸೀನ್ಯದಿಂದ—"ನನ್ನಿಂದ ದೊಡ್ಡ ಪ್ರಮಾದವು ಘಟಿಸಿತು. ಮಂತ್ರಿ-ಸೇನಾನಾಯಕರ ದುರಾಗ್ರಹಕ್ಕೆ ಒಳಪಟ್ಟದ್ದರಿಂದ ಅನರ್ಥ ವಾಯಿತು. ಆತ್ಮ ಬುದ್ಧಿ ಸುಖಂ ಚೈವ!"

'ಮಹಾರಾಣಾಜಿಯವರೆ!' ಅರುಣಕುಮಾರಿಯು ವಿಸ್ಮಯದಿಂದ—"ಮಂತ್ರಿ ಸೇನಾಪತಿಗಳು ನಿಮಗೆ ಯಾವ ಅನುಚಿತವಾದ ಸಲಹೆಗಳನ್ನು ಕೊಟ್ಟರು? ಅವರ ಮಾತು ಕೇಳಿದ್ದಕ್ಕಾಗಿ ನಿಮಗೆ ಯಾವ ಕೇಡುಂಟಾಗಿರುವದು?"

"ಅರುಣ, ಇನ್ನೂ ಎಷ್ಟು ಕೇಡಾಗಬೇಕು? ಬಾದಶಹನ ಸೈನ್ಯವು ಚಿತೋಡ ವನ್ನು ಮುತ್ತುವದೆಂದರೇನು ಹಿತಾವಹ ಘಟನೆಯೆ?"

"ಇದೇನು ಮಾತಾಡುವಿರಿ? ಬಾದಶಹನು ಚಿತೋಡವನ್ನು ಮುತ್ತಿದ್ದು ವಿಹಿತ

ಕಾರಕವೆಂದು ಈಗಲೆ ಹೇಗೆ ನಿರ್ಧರಿಸಿದಿರಿ? ಇನ್ನೂ ಯಾರೂ ಬಾಣ ಹೂಡಿಲ್ಲ; ಖಡ್ಗ ಹಿಡಿದಿಲ್ಲ; ಒಂದು ರಕ್ತಬಿಂದುವಾದರೂ ಭೂಮಿಗೆ ಬಿದ್ದಿಲ್ಲ. ಹೀಗಿರಲು, ನಿಮ್ಮ ಕಲ್ಪನೆಯು ಈ ಬಗೆಯಾಗಿ ವಿಚಿತ್ರವಾದ ಕಾರಣವೇನು?"

"ಅರುಣಕುಮಾರಿ, ಬಾದಶಹನ ಸೈನ್ಯವು ಪ್ರಚಂಡವಾದದ್ದಿರುವದು. ಆ ಸೈನ್ಯದೊಡನೆ ಕಾದಿ ವಿಜಯಸಂಪಾದನೆ ಮಾಡುವೆನೆಂಬ ಹೆಮ್ಮೆ ತಾಳುವದೆಂದರೆ, ಮೇರುಗಿರಿಗೆ ಹಗ್ಗ ಹಾಕಿ ಜಗ್ಗುವಂತೆಯೆ ಸರಿ."

"ನಿಮ್ಮ ವಿಚಿತ್ರವಾದ ವಿಚಾರಗಳಿಗೆ ನಗಬೇಕೋ, ಅಳಬೇಕೋ? ಕ್ಷತ್ರಿಯರು, ಅದರಲ್ಲಿ ಅವನೀಪತಿಗಳಾದ ನೀವು ಪ್ರಾಪ್ತವಾದ ಸಂಗ್ರಾಮಕ್ಕಾಗಿ ಹೀಗೆ ಅಳ್ಳೆದೆಯುಬೇಕೆ? ಈಗ ಅಂತಹ ಪ್ರಸಂಗವೇನು ಬಂದಿದೆ? ನಿಮ್ಮಲ್ಲಿ ಹೆಸರಾದ ಸರದಾರ-ಸೇನಾಪತಿಗಳಿಲ್ಲವೆ? ಸೈನ್ಯವಿಲ್ಲವೆ? ಸಹಾಯಕ ರಾಜರಿಲ್ಲವೆ? ಬಾದಶಹನು ಚಿತ್ತೋಡವನ್ನು ತಲುಪುವದರೊಳಗೆ ನನ್ನ ತಂದೆಯವರಾದ ಕೃಷ್ಣಲಾಲರೂ ಇನ್ನೂ ಅನೇಕ ಜನ ರಜಪುತ ದೊರೆಗಳೂ ಸಸೈನ್ಯರಾಗಿ ಬರುವರು. ನೀವು ನಿಶ್ಚಿಂತರಾಗಿರಬೇಕು."

"ಅರುಣ, ಈ ಸಂಗತಿಯನ್ನು ನಿನಗೆ ಯಾರು ಹೇಳಿದರು?"

"ನಾನು ಸ್ವಸ್ಥವಾಗಿ ಕುಳಿತಿರುವೆನೆಂದು ಭಾವಿಸಿರುವಿರೇನು? ಬಾದಶಹನು ದಿಲ್ಲಿಯನ್ನು ಬಿಟ್ಟು ಸೈನ್ಯಸಹಿತನಾಗಿ ಹೊರಟ ಸಂಗತಿಯೂ, ಅವನು ಚಿತ್ತೋಡದ ಸೀಮಾಂತರವನ್ನು ತಲುಪಿದ ಸಂಗತಿಯೂ ನನಗೆ ತಿಳಿದಿದೆ. ನಾನು ಅಲ್ಲಲ್ಲಿ ಗುಪ್ತ ಚರರ ಜಾಲವನ್ನು ಪಸರಿಸಿರುವೆನು. ಭಾವೀ ಸಂಗ್ರಾಮದಲ್ಲಿ ಸಹಾಯ ಮಾಡಬೇಕೆಂದು ಚಿತ್ತೋಡದ ಸಿಂಹಾಸನಾಭಿಮಾನಿಗಳಾದ ರಜಪುತ ರಾಜರಿಗೆ ಪತ್ರ ಬರೆದಿರುವೆನು ನೀವು ರಾಜಕಾರಣವನ್ನು ದುರ್ಲಕ್ಷಿಸಿರುವಿರೆಂದು ತಿಳಿದದ್ದರಿಂದ, ನಾನು ಆ ಕೆಲಸ ನೆರವೇರಿಸಲಿಕ್ಕೆ ಟೊಂಕ ಕಟ್ಟಿರುವೆನು."

ಅರುಣಕುಮಾರಿಯ ಮಾತುಗಳನ್ನು ಕೇಳಿ ಉದಯಸಿಂಗನಿಗೆ ವಿಸ್ಮಯವಾಯಿತು. ಅವಳ ಕೈಯಲ್ಲಿ ರಾಜ್ಯ ಸೂತ್ರಗಳನ್ನು ಇಷ್ಟು ಮಟ್ಟಿಗೆ ಕೊಟ್ಟದ್ದರಿಂದ ತನ್ನ ಮೇಲಿನ ಕರ್ತವ್ಯ ಭಾರವು ಕಡಿಮೆಯಾಯಿತೆಂದೂ, ಅವಳನ್ನೇ ಎಲ್ಲ ಕೆಲಸಗಳಿಗೆ ಮುಖ್ಯಳನ್ನು ಮಾಡಿದರೆ ಸ್ವಚ್ಛಂದ ವೃತ್ತಿಯಿಂದ ಕಾಲ ಕಳೆಯಲಿಕ್ಕೆ ಅನುಕೂಲವಾಗುವದೆಂದೂ ಅವನು ಬಗೆದನು.

"ಅರುಣ, ನೀನು ಈ ಬಗೆಯ ಕರ್ತವ್ಯದಕ್ಷಳಿರುವೆಯೆಂದು ಇದು ವರೆಗೆ ನಾನು ತಿಳಿದಿದ್ದಿಲ್ಲ. ಯುದ್ಧದ ಗೊಂದಲವು ತೀರಿತೆಂದರೆ ಎಲ್ಲ ರಾಜ್ಯಸೂತ್ರಗಳನ್ನು ನಿನ್ನ ಕಡೆಗೇ ಒಪ್ಪಿಸಿ, ನಿಶ್ಚಿಂತನಾಗಿ ಕಾಲ ಕಳೆಯತೊಡಗುವೆನು. ಅಕಬರನೊಡನೆ ಒಡಂಬಡಿಕೆ ಮಾಡಿಕೊಳ್ಳಲಿಕ್ಕೆ ರಾಜಪರಿವಾರವು ಸಿದ್ಧವಿಲ್ಲ ಅವರಿಂದ ಅದು ಮನಬಂದಂತೆ ವರ್ತಿಸಲಿ. ಯುದ್ಧದ ಕೋಲಾಹಲವು ನಿಲ್ಲುವ ವರೆಗೆ ರಾಜಮನೆತನದವರೆಲ್ಲರನ್ನೂ ಕರೆದುಕೊಂಡು ಚಿತ್ತೋಡವನ್ನು ಬಿಟ್ಟು, ಸುರಕ್ಷಿತವಾದ ಸ್ಥಳಕ್ಕೆ ಹೋಗಬೇಕೆಂದು ಸಾಹಸ ಮಾಡಿರುವೆನು. ಶತ್ರುಗಳು ಚಿತ್ತೋಡವ ವಿಧ್ವಂಸ ಮಾಡುವದು ನಿಶ್ಚಿತವು.

ಇಂತಹ ಭೀಷಣ ಪ್ರಸಂಗದಲ್ಲಿ ಇಲ್ಲಿ ಇದ್ದರೆ ನಮ್ಮ ಜೀವಿತಗಳು ಸುರಕ್ಷಿತವಾಗುವವೆ?"

"ನಾಥರೆ! ನಾನು ಇದನ್ನೇನು ಕೇಳುತ್ತಿರುವೆನು!" ರಾಣಿಯು ಉದ್ವಿಗ್ನತೆಯಿಂದ ಮಾತನಾಡತೊಡಗಿದಳು:—"ಮೇವಾಡದ ಮಹಾರಾಣಾಜಿಯವರ ಬಾಯಿಂದ ಹೊರಟ ಶಬ್ದಗಳೇ ಇವು? ಛೆ! ಅಚ್ಚ ರಜಪುತರೂ, ಸುಪ್ರಸಿದ್ಧರಾದ ಬಾಪ್ಪಾ ರಾವಳರ ವಂಶಜರೂ ಆದ ಚಿತೋಡಾಧಿಪತಿಗಳ ಮುಖದಿಂದ ಇಂತಹ ಅಭದ್ರವಾದ ಮಾತುಗಳು ಎಂದೂ ಹೊರಡಲಾರವು ರಾಣಾಜಿಯವರೆ, ನೀವು ನನ್ನ ಮನಸ್ಸನ್ನು ಪರೀಕ್ಷಿಸುವದಕ್ಕೆ ಹೀಗೆ ಮಾತನಾಡುತ್ತಿರುವಿರಲ್ಲವೆ? ಸಾಕು ಮಾಡಿರಿ, ಈ ಬಗೆಯ ಪರಿಹಾಸವನ್ನು ನಾನು ಕೇಳಲಾರೆನು. ಯಾವ ಸಂಗತಿಗಳು ಪರಿಹಾಸೋಚಿತಗಳೆಂಬದನ್ನು ತಿಳಿಯದೆ ನೀವು ತಟ್ಟನೆ ಏನಾದರೊಂದು ಮಾತಾಡಿ ನನ್ನ ಮನಸ್ಸಿಗೆ ನೋವನ್ನುಂಟು ಮಾಡುವಿರಿ."

'ರಾಣಿ!' ಉದಯಸಿಂಗನು ನಿಶ್ಚಯಯುಕ್ತವಾಣಿಯಿಂದ—"ನಾನು ಉಪಹಾಸಕ್ಕಾಗಿ ಹೀಗೆ ಮಾತನಾಡಿಲ್ಲ; ಮನಃಪೂರ್ವಕವಾಗಿ ಆಡಿದ ಮಾತುಗಳಿವು. ಭೀಷಣವಾದ ಯುದ್ಧದಲ್ಲಿ ಭಾಗ ತೆಗೆದುಕೊಂಡು ಜೀವವನ್ನು ಗಂಡಾಂತರದಲ್ಲಿ ತೊಡಗಿಸಿದರೆ, ಯಾವ ಪುರುಷಾರ್ಥ ಸಾಧಿಸಿದಂತಾಗುವದು? ನನ್ನ ಮಾತುಗಳು ಯಥಾಸ್ಥಿತವಾದವುಗಳೆಂಬದು ನಿನಗೆ ವಿಚಾರಾಂತ್ಯದಲ್ಲಿ ತಿಳಿಯುವದು ಈ ಉದಯಸಿಂಗನು ಎಷ್ಟೇ ವಿಲಾಸಿಯೂ ಕರ್ತವ್ಯಮೂಢನೂ ಆಗಿದ್ದರೂ, ಅಷ್ಟೊಂದು ಅದೂರದರ್ಶಿಯಲ್ಲವೆಂಬದನ್ನು ದಿಟವಾಗಿ ನಂಬು."

'ನಿಮ್ಮ ದೂರ ದೃಷ್ಟಿಗೆ ಧಿಃಕಾರವು!' ಅರುಣಕುಮಾರಿಯು ಸಂತಾಪದಿಂದ:- "ನೀವು ನಿಮ್ಮ ಪೂರ್ವಜರನ್ನು ಚನ್ನಾಗಿ ನೆನಪಿಗೆ ತಂದುಕೊಂಡು ವರ್ತಿಸಿರಿ. ತಮ್ಮ ಪ್ರಶಂಸನೀಯ ಪರಾಕ್ರಮದಿಂದ ವಂಶವನ್ನು ಉಜ್ವಲಗೊಳಿಸಿದ ಸಂಗ್ರಾಮಸಿಂಹರೇ ಮೊದಲಾದ ಹಿರಿಯರ ಚರಿತ್ರವನ್ನು ಕಣ್ಣಮುಂದಿಟ್ಟುಕೊಳ್ಳಿರಿ. ನಿಮ್ಮ ಹೇಡಿತನದ ಕೃತಿಯಿಂದ ನಿಮ್ಮ ಉಜ್ವಲವಾದ ಕುಲಕ್ಕೆ ಕಲಂಕವು ತಗಲುವದಲ್ಲದೆ, ಮೇವಾಡ ರಾಷ್ಟ್ರಕ್ಕೆ ಪಾರತಂತ್ರ್ಯದ ಅಪಮಾನಕಾರಕ ಶೃಂಖಲೆಯು ಜೋಡಿಸಲ್ಪಡುವದೆಂಬದನ್ನು ಲಕ್ಷ್ಯದಲ್ಲಿ ತಂದುಕೊಳ್ಳಿರಿ. ಶತ್ರುಗಳು ಯುದ್ಧಕ್ಕಾಗಿ ಬಂದಿರುವಾಗ ಹೆಂಗಳೆಯರಿಗಿಂತಲೂ ಬೆದರಿ, ಪಲಾಯನದ ಆಲೋಚನೆಯನ್ನು ತೆಗೆಯಲಿಕ್ಕೆ ನಿಮಗೆ ಏಕೆ ನಾಚಿಕೆ ಬರಲಿಲ್ಲ? ನಿಜವಾದ ಕ್ಷತ್ರಿಯರು ರಣಕ್ಕೆ ಹೊರಡುವದಕ್ಕಾಗಿ ಉತ್ಸಾಹಗೊಂಡವರಾಗಿರಬೇಕು. ರಜಪುತ ವಂಶಕ್ಕೆ ಲಾಂಛನಾಸ್ಪದವಾದ ಕ್ಷುದ್ರ ವಿಚಾರಗಳಿಂದ ಕೂಡಿಕೊಂಡ ನಿಮಗೆ ಏನನ್ನ ಬೇಕೋ ನನಗೆ ತಿಳಿಯದಾಗಿದೆ ನೀವು ನನ್ನ ಪರಮ ದೈವತಗಳಿರುವಿರಿ. ಮನಸ್ಸು ತಡೆಯದೆ ಕಟು ಭಾಷಣಗಳನ್ನಾಡುತ್ತಿರುವೆನು. ನೀವು ನನ್ನ ಮೇಲೆ ತ್ವೇಷಗೊಳ್ಳಬೇಡಿರಿ. ಚಿತೋಡದ ವೀರ ಕ್ಷತ್ರಿಯರು ಯುದ್ಧದ ಪ್ರಸಂಗವೊದಗುವದೆಂದು ಎಷ್ಟು ಉತ್ಸಾಹಗೊಂಡಿರುವರು! ಎಷ್ಟು ಆನಂದಮಯರಾಗಿರುವರು! ಎಷ್ಟು ಯುದ್ಧಾತುರರಾಗಿರುವರು! ಅವರನ್ನು ನೋಡಿದರೆ

ನನ್ನ ಮನಸ್ಸು ಆನಂದಗೊಳ್ಳುತ್ತಲಿದೆ; ಆದರೆ ಚಿತೋಡಾಧಿಪತಿಗಳಾದ ನೀವು ತೀರ ಗರ್ಹಣೀಯ ವರ್ತನವನ್ನಿಡತೊಡಗಿರುವಿರಿ ಒಂದು ವೇಳೆ ಅಪಜಯವೊದಗಿದರೆ ಅದಕ್ಕಾಗಿ ಅಷ್ಟೊಂದು ಭಯಪಡುವದೇಕೆ? ಯುದ್ಧದಲ್ಲಿ ಜಯಾಪಜಯಗಳು ದೈವಾಧೀನವಾದವುಗಳು. ಕ್ಷತ್ರಿಯರು ಧಾರಾತೀರ್ಥದಲ್ಲಿ ದೇಹವಿಡಲಿಕ್ಕೆ ಆನಂದದಿಂದ ಸಿದ್ಧರಾಗಬೇಕು. ರಣದಲ್ಲಿ ಮೈಗೊಟ್ಟು ವೀರಸ್ವರ್ಗವನ್ನು ಹೊಂದುವ ಭಾಗ್ಯವು ಪೂರ್ವಸುಕೃತದಿಂದ ಲಭಿಸುವಂತಹದಾಗಿದೆ. ಚಿತೋಡವು ದುರ್ಭಾಗಿಯಾಗಿದ್ದರೆ ಅಪಜಯವು ಬರುವದು. ಅಪಜಯವೊದಗಿ ರಾಜಧಾನಿಯು ನಿಃಕ್ಷತ್ರಿಯವಾಯಿತೆಂದರೆ ನಿಮ್ಮ ರಾಣೀ ಪರಿವಾರವು ಜೋಹಾರವ್ರತವನ್ನು ಕೈಕೊಂಡು, ವೀರಸ್ವರ್ಗಪಥವನ್ನು ಹಿಡಿದು ನಿಮ್ಮನ್ನು ಹಿಂಬಾಲಿಸುವದೆಂದು ಖಂಡಿತವಾಗಿ ತಿಳಿಯಿರಿ ಮಹಾರಾಣಾಜಿಯವರೆ, ವೀರ ಕ್ಷತ್ರಿಯ ವಂಶದಲ್ಲಿ ಜನಿಸಿ ಪಲಾಯನದ ವಿಷಯವನ್ನು ಇನ್ನು ಮೇಲೆ ನನ್ನೆದುರಿಗೆ ತೆಗೆಯಲಾಗದು. ಕೈಯಲ್ಲಿ ಶಸ್ತ್ರವನ್ನು ಹಿಡಿದು ಅಪ್ರತಿಹತ ಪ್ರಭಾವದಿಂದ ಕಾದಿ ನೀವು ಮೊಗಲವಿಜಯಿಗಳಾಗಬೇಕೆಂದು ನನ್ನ ಉತ್ಕಟೇಚ್ಛೆಯುಂಟು ಆದಾಗದಿದ್ದರೆ ಸ್ವಸ್ಥವಾಗಿ ಕುಳಿತುಕೊಂಡು ನೋಡುತ್ತಿರಬೇಕು. ಈ ಅರುಣಕುಮಾರಿಯು ಖಡ್ಗಪಾಣಿಯಾಗಿ ವೈರಿದಳವನ್ನು ನಿರಸ್ತಗೊಳಿಸದಿದ್ದರೆ, ಚಿತೋಡದ ರಾಣೀಪದವನ್ನು ಹೊಂದಿದ್ದು ಅಸಾರ್ಥಕವೇ ಸರಿ. ನೀವಾಡದ ಸರದಾರ-ಸೇನಾಪತಿಗಳು ನನ್ನ ಅಭಿಪ್ರಾಯದಂತೆ ನಡೆದರೆ, ನಾನು ನಿಮಗೆ ವಿಜಯ ಸಂಪಾದನೆ ಮಾಡಿ ಕೊಡುವೆನು. ನನ್ನಿಂದ ಈ ಕಾರ್ಯವಾಗದಿದ್ದರೆ, ನಾನು ಕ್ಷತ್ರಿಯ ಲಲನೆಯಲ್ಲ; ಕುಲಕಲಂಕಿನಿಯಾಗುವೆನು ಮಹಾರಾಜರೆ, ಇದಕ್ಕೂ ಹೆಚ್ಚಿಗೆ ಇನ್ನೇನು ಹೇಳಲಿ?"

ಅರುಣಕುಮಾರಿಯ ಆವೇಶಪೂರ್ಣವಾದ ಮಾತುಗಳನ್ನು ಕೇಳಿ ಉದಯಸಿಂಗನಿಗೆ ಆನಂದವಾಯಿತು. ಸೇನಾಧಿಪತ್ಯವನ್ನೂ ಸಂಗ್ರಾಮದ ಎಲ್ಲ ಭಾಗಗಳ ಅಧ್ಯಕ್ಷತೆಯನ್ನೂ ಅವಳಿಗೆ ಒಪ್ಪಿಸಿದರೆ ಭಾವೀಸಂಗ್ರಾಮದಲ್ಲಿ ಯಶಸ್ಸು ದೊರೆಯಬಹುದೆಂದು ಅವನು ತಿಳಿದನು. ಒಂದುವೇಳೆ ಅಪಜಯವೊದಗುವ ಪ್ರಸಂಗ ಕಂಡರೆ ಗುಪ್ತಮಾರ್ಗದಿಂದ ಪಲಾಯನ ಮಾಡಲಿಕ್ಕೆ ಬರುವದೆಂದು ಅವನು ಧೈರ್ಯ ತಾಳಿ, ಅರುಣಕುಮಾರಿಯನ್ನು ಕುರಿತು—"ಪ್ರಿಯೆ, ನಿನ್ನ ಉತ್ಸಾಹಯುಕ್ತವಾದ ಮಾತುಗಳಿಂದ ನನಗೆ ಸಂತೋಷವಾಯಿತು. ನನ್ನ ರಾಣಿಯಾದ ನೀನು ಸಂಗ್ರಾಮಕಾರ್ಯ ನೆರವೇರಿಸಿದರೆ ಅದು ನನಗೆ ಭೂಷಣವೇ ಸರಿ. ರಾಣೀ, ನೀನು ಆದರ್ಶ ಕ್ಷಾತ್ರಲಲನೆಯಿರುವೆ; ತೇಜಸ್ವಿಯಿರುವೆ; ಖಡ್ಗಪಟುವಿರುವೆ; ಧೈರ್ಯದ ಮಹಾಮೇರುವಾಗಿರುವೆ. ನಾನು ನಿನ್ನ ಮಾತಿನ ಮೇಲೆ ವಿಶ್ವಾಸವಿಟ್ಟು ಯುದ್ಧ ಪ್ರಾರಂಭಿಸುವ ಬಗ್ಗೆ ಒಪ್ಪುವೆನು. ಇಂದಿನಿಂದ ಯುದ್ಧಮುಗಿಯುವವರೆಗೆ ನಿನ್ನನ್ನು ರಜಪುತ ಸೈನ್ಯದ ಮುಖ್ಯ ಸೇನಾನಾಯಕಳನ್ನು ಮಾಡುವೆನು. ನಿನ್ನ ಆಜ್ಞೆಯಂತೆ ಎಲ್ಲ ಸರದಾರರೂ ದಳವಾಯಿಗಳೂ ಸಾಮಂತರಾಜರೂ ವರ್ತಿಸುವ ಬಗ್ಗೆ ಆಜ್ಞಾ

ಪತ್ರ ಹೊರಡಿಸುವೆನು.

ಉದಯಸಿಂಗನು ಹೀಗೆ ನುಡಿದ ಕೂಡಲೆ ಅರುಣಕುಮಾರಿಯಲ್ಲಿ ಒಂದು ವಿಧದ ಯೋಚನೆಯು ತಲೆದೋರಿತು. ಚಿತೋಡದ ಸರದಾರರೂ ಮಂತ್ರಿಸೇನಾನಾಯಕರೂ ತನ್ನ ಆಧಿಪತ್ಯಕೊಳಗಾಗುವರೋ ಇಲ್ಲವೋ ಎಂಬ ಸಂಶಯವು ಮೊದಲೇ ಅವಳಲ್ಲಿ ಹುಟ್ಟಿತ್ತು. ಆದ್ದರಿಂದ ಬಹಿರಂಗವಾಗಿ ಹಾಗೆ ಆಜ್ಞಾಪತ್ರ ಹೊರಡಿಸಿದರೆ ರಾಜಪರಿವಾರಕ್ಕೆ ಈ ಸಂಗತಿಯು ಅಪಮಾನಕಾರಕವಾಗಿ ಕಂಡು, ಅಸಂತುಷ್ಟರಾಗಬಹುದೆಂದು ಅರುಣಾಳ ಗ್ರಹಿಕೆಯಾಯಿತು. ಆಗ ಅವಳು ಉದಯಸಿಂಗನನ್ನು ಕುರಿತು—"ಮಹಾರಾಜರೆ, ನೀವು ಆಜ್ಞಾಪತ್ರ ಹೊರಡಿಸುವ ಕಾರಣವಿಲ್ಲ. ನನ್ನನ್ನು ಯಃಕಶ್ಚಿತಳಾದ ವಾರವನಿತೆಯ ಸ್ಥಾನದಲ್ಲಿ ನೋಡುತ್ತಿರುವ ನಿಮ್ಮ ರಾಜಪರಿವಾರವು ನನ್ನ ಆಧಿಪತ್ಯದಲ್ಲಿ ಕೆಲಸ ಮಾಡಲಿಕ್ಕೆ ಒಪ್ಪಲಿಕ್ಕಿಲ್ಲ. ನಾನು ನಿಮ್ಮ ದೃಷ್ಟಿಯಿಂದ ಕ್ಷತ್ರಿಯ ರಮಣಿಯಾಗಿ ಕಾಣುತ್ತಿದ್ದರೂ, ಅವರು ನನ್ನನ್ನು ಕುಲಕಲಂಕಿನಿಯೆಂದೇ ಭಾವಿಸಿರುವರು. ಇಂತಹ ಸಂದರ್ಭದಲ್ಲಿ ನಿಮ್ಮ ನಿರ್ದೇಶವು ಅವರಿಗೆ ಅಪಮಾನಕಾರಕವಾಗಿ ತೋರುವ ಸಂಭವವು ಹೆಚ್ಚು. ಜನರಲ್ಲಿ ಸಮತಾಬುದ್ಧಿಯು ಹುಟ್ಟುವ ವರೆಗೆ ಅವರ ಮನಸ್ಸಿನಂತೆ ನಡೆಯಬೇಕು. ಪ್ರಜಾಕ್ಷೋಭೆಯುಂಟಾಗಬಾರದೆಂದು ನೀವು ನನ್ನನ್ನು ಸಂಸ್ಕಾರಯುಕ್ತವಾಗಿ ವರಿಸಲಿಲ್ಲ. ವಸ್ತುಸ್ಥಿತಿಯು ಹೀಗಿರಲು, ನನ್ನ ಪ್ರತಿಷ್ಠೆಯಾಗಬೇಕೆಂದು ಇಚ್ಛಿಸಲೇಕೆ? ನಿಜವಾಗಿ ಹೇಳಬೇಕಾದರೆ ನನಗೆ ಹೆಚ್ಚಿನ ಗೌರವ-ಮಾನಗಳ ಅಪೇಕ್ಷೆಯಿಲ್ಲ. ಹೇಗಾದರೂ ರಾಷ್ಟ್ರಕಾರ್ಯವೊಂದು ನೆರವೇರಿದರಾಯಿತು. ರಾಷ್ಟ್ರಕಾರ್ಯಕ್ಕೆ ವ್ಯಾಹತಿಯುಂಟಾಗುವ ಕೃತಿಗಳೊಂದೂ ಜರುಗಬಾರದೆಂದು ನಾನು ಸಾಹಸ ಮಾಡುತ್ತಿರುವೆನು. ನನ್ನ ತಂದೆಯವರಾದ ಕೃಷ್ಣಲಾಲರು ತಮ್ಮ ಪಡೆಯೊಡನೆ ಇಂದೇ ಇಲ್ಲಿಗೆ ಬರುವೆವೆಂದು ತಿಳಿಸಿರುವರು. ಇದಲ್ಲದೆ ವಿಜಯಲಾಲ ಸೇನಾಪತಿಗಳು ನನ್ನ ಆಜ್ಞೆಯಂತೆ ವರ್ತಿಸಲಿಕ್ಕೆ ಸಿದ್ಧರಿರುವರು. ಅವಶ್ಯವೆನಿಸಿದರೆ, ಇನ್ನೂ ಸ್ವಲ್ಪ ಸೈನ್ಯವನ್ನು ನಾನು ಕೈಯಲ್ಲಿ ತೆಗೆದುಕೊಳ್ಳುವೆನು. ಇಷ್ಟು ಅಧಿಕಾರವು ನನಗೆ ದೊರೆತರೆ ಸಾಕು. ಪ್ರಸಂಗವೊದಗಿದಾಗ ನೀವು ನಿಯಮಿಸುವ ಮುಖ್ಯ ಸೇನಾಪತಿಗಳಿಗೆ ತಕ್ಕ ಸಲಹೆಯನ್ನು ಕೊಡುತ್ತಿರುವೆನು. ಆಯಕಟ್ಟಿನ ಪ್ರಸಂಗವಲ್ಲಿ ನನ್ನ ಅಭಿಪ್ರಾಯ ತೆಗೆದುಕೊಳ್ಳಬೇಕೆಂದು ನೀವು ಮುಖ್ಯ ಸೇನಾಪತಿಗಳಿಗೆ ಮೊದಲೇ ಗುಪ್ತ ಸೂಚನೆ ಮಾಡಿರಿ."

"ಅರುಣಕುಮಾರಿ, ನಿನ್ನ ಇಚ್ಛೆಯಂತೆ ಎಲ್ಲ ಬಗೆಯ ವ್ಯವಸ್ಥೆ ಮಾಡುವೆನು. ಚಿತೋಡದ ಭಾವೀ ವಿಜಯವು ನಿನ್ನ ಸತ್ವವನ್ನೇ ಅವಲಂಬಿಸಿರುವದು. ಮೇವಾಡದಲ್ಲಿ ಶೂರ ಕ್ಷತ್ರಿಯರೇನು ಕಡಿಮೆಯಿರುವರೆಂದು ನಾನು ತಿಳಿದಿಲ್ಲ. ನಿನ್ನಂತಹ ಧೈರ್ಯಶಾಲಿಗಳೂ ರಾಜಕಾರಣ ಪಟುಗಳೂ ಇಡೀ ಮೇವಾಡದಲ್ಲಿ ಬೆರಳಿನಿಂದ ಎಣಿಸುವಷ್ಟು ಮಾತ್ರ ದೊರೆಯಬಹುದು. ಬಾದಶಹನ ಅಮೋಘ ಸೇನೆಯೊಡನೆ ಕಾದಿ, ವಿಜಯ ಸಂಪಾದನೆ ಮಾಡುವೆನೆಂಬ ಉತ್ಸಾಹವಾಣಿಯೇನು ಸಾಮಾನ್ಯವಾದ

ದ್ದಿಲ್ಲ. ರಾಣೀ, ನೀನು ಸಂಗ್ರಾಮದಲ್ಲಿ ಕಲಿತನ ತೋರಿಸುವದನ್ನು ದುರ್ಗದ ದೊಡ್ಡ ಕೊತ್ತಳದ ಮೇಲೆ ಕುಳಿತು ನಿರೀಕ್ಷಿಸಿ ಆನಂದಪಡುವೆನು. ನಿನ್ನ ಶಸ್ತ್ರಾಸ್ತ್ರ ಪಾಂಡಿತ್ಯವನ್ನು ನೋಡುವ ಸುವರ್ಣಸಂಧಿಯು ಈಗ ದೊರೆತಂತಾಯಿತು"

ಬಳಿಕ ರಾಣಾನೂ ಅರುಣಕುಮಾರಿಯೂ ಸೈನ್ಯದ ವ್ಯವಸ್ಥೆಯನ್ನು ನಿರೀಕ್ಷಿಸುವದಕ್ಕಾಗಿ ಮನೋರಂಜನ ಮಂದಿರದಿಂದ ಹೊರಟರು.

---

## ಅಪೂರ್ವ ವಿಜಯ.

ಮೊಗಲ ಸೈನ್ಯವು ಚಿತೋಡವನ್ನು ಮುತ್ತಿತು. ಅತ್ಯಂತ ಗುಪ್ತವಾಗಿದ್ದ ನೆಲಮಾರ್ಗದ ಹೊರತು ಒಳಗಿನ ಜನರು ಹೊರಗೆ ಹೋಗಲಿಕ್ಕೂ, ಹೊರಗಿನ ಜನರು ಒಳಗೆ ಬರಲಿಕ್ಕೂ ಮಾರ್ಗವಿಲ್ಲದಾಯಿತು. ಅರುಣಕುಮಾರಿಯ ಮುಂಜಾಗ್ರತೆಯ ಮೂಲಕ ಮುತ್ತಿಗೆಯು ಬೀಳುವದರೊಳಗಾಗಿ ಇಶರೀದಾಸ ರಾಠೋಡ, ಸಾಳುಂಬ್ರೆಯ ಸಾಹಿದಾಸ ಚೋಂಡಾ, ಕೃಷ್ಣಲಾಲ ಮೊದಲಾದ ಸರದಾರರು ಸಸೈನ್ಯರಾಗಿ ಚಿತೋಡವನ್ನು ಸೇರಿದ್ದರು. ಮುತ್ತಿಗೆಯು ಎಷ್ಟೇ ಬಲವಾದದ್ದಿದ್ದರೂ, ಮೊಗಲ ಸೈನ್ಯವು ಎಷ್ಟೇ ಹೆಚ್ಚಾಗಿದ್ದರೂ ಕೆಚ್ಚೆದೆಯ ರಜಪುತರು ಅಳ್ಳೊಡೆಯಲಿಲ್ಲ. ವೀರತನದಿಂದ ಕಾದಿ ವಿಜಯ ಸಂಪಾದನೆ ಮಾಡಿಕೊಂಡೇ ತೀರಬೇಕೆಂದು ಎಲ್ಲರೂ ಕೃತಸಂಕಲ್ಪರಾಗಿದ್ದರು. ರಾಣಾನ ಮನಃಸ್ಥಿತಿಯು ಮಾತ್ರ ವಿಚಿತ್ರವಾಗಿತ್ತು. ರಾಣಿಯ ಸ್ಫೂರ್ತಿಪ್ರದ ಮಾತುಗಳಿಂದ ಅವನು ಅಲ್ಪಮಟ್ಟಿಗೆ ಧೈರ್ಯಗೊಂಡಿದ್ದರೂ, ಆ ಧೈರ್ಯವು ಕಡೆತನಕ ಉಳಿಯುವಂತಿದ್ದಿಲ್ಲ; ಯಾಕಂದರೆ ಅವನು ಸ್ವಭಾವದಿಂದಲೇ ಭೀರುವಾಗಿದ್ದನು. ರಾಣಿಯು ಕರ್ತವ್ಯಪ್ರಭಾವವನ್ನು ತೋರಿಸಿದರೆ ದುರ್ಗದಲ್ಲಿರಬೇಕೆಂತಲೂ, ತನ್ನ ಪಾಲಿಗೆ ಅಪಯಶವು ಬರುವಂತೆ ತೋರಿದರೆ ಗುಪ್ತ ಮಾರ್ಗದಿಂದ ಪಲಾಯನ ಮಾಡಬೇಕೆಂತಲೂ ಅವನು ಹಂಚಿಕೆ ಹಾಕಿದ್ದನು.

ಉದಯಸಿಂಗನು ತನ್ನ ಸರದಾರ-ಸೇನಾಪತಿಗಳನ್ನೂ ಮಾಂಡಲಿಕ ಸಹಾಯಕ ರಾಜರನ್ನೂ ಮಂತ್ರಣಾಗಾರಕ್ಕೆ ಕರೆಯಿಸಿದ್ದನು. ಯುದ್ಧದ ವಿಷಯವಾಗಿ ಚರ್ಚೆ ಮಾ[illegible]ಗಿ ಅವನು ಎಲ್ಲರನ್ನೂ ಬುದ್ಧಿಪೂರ್ವಕವಾಗಿ ಕರೆಯಿಸಿದ್ದನು. ರಾಣಿಯು ಒ[illegible]ಳೂ ಶಸ್ತ್ರನಿಪುಣಳೂ ರಾಜಕಾರಣತಜ್ಞಳೂ ಇರುವದರಿಂದ ಎಲ್ಲರೂ ಅವಳ ಅನುಮತಿಯಂತೆ ವರ್ತಿಸಬೇಕೆಂದು ತಿಳಿಸುವದಕ್ಕೆ ಅವನು ಮನಸ್ಸು ಮಾಡಿದ್ದನು. ಎಲ್ಲ ಸರದಾರ ಸೇನಾಪತಿಗಳು ಬಂದ ಮೇಲೆ ಉದಯಸಿಂಗನು ಅವರನ್ನು ಕುರಿತು:—"ಚಿತೋಡದ ಪರಮಪೂಜ್ಯ ಸಿಂಹಾಸನದ ಏಕನಿಷ್ಠ ಸೇವಕರೆ, ಮಾಂಡಲಿಕ ಅರಸರೆ, ಮಿತ್ರ ರಾಜರೆ, ದಿಲ್ಲೀಶ್ವರನ ಅಪಾರವಾದ ಸೈನ್ಯವು ಚಿತೋಡವನ್ನು ಬಲವಾಗಿ ಮುತ್ತಿರುವದು. ಮೊಗಲ ಸೇನಾಸಾಗರದ ಮುಂದೆ ನಮ್ಮ ಸೈನ್ಯವು ಎಷ್ಟೇ ಚಿಕ್ಕದಾಗಿದ್ದರೂ, ಶೌರ್ಯ-ಸಾಹಸಗಳು ಮೊಗಲರಿಗಿಂತ

ನಮ್ಮ ಸೈನಿಕರಲ್ಲಿ ಹೆಚ್ಚಾಗಿದ್ದುದರಿಂದ ವಿಜಯ ಸಂಪಾದನೆಯಾಗುವದೆಂಬ ಆಶೆಯಿದೆ. ಪ್ರಸ್ತುತಯುದ್ಧದಲ್ಲಿ ಎಲ್ಲರೂ ವೀರತನದಿಂದ ಕಾದುವಿರೆಂಬ ಆತ್ಮವಿಶ್ವಾಸವು ನನಗಿರುವದು. ನೀವೆಲ್ಲರೂ ಶೂರರಿರುವಿರಿ; ಸಾಹಸಿಗಳಿರುವಿರಿ. ಸಂಗ್ರಾಮದಲ್ಲಿ ಚನ್ನಾಗಿ ನುರಿತವರಾದ ನೀವು ಒಬ್ಬ ಯೋಗ್ಯ ಸೇನಾಧ್ಯಕ್ಷರ ನೇತೃತ್ವದಲ್ಲಿದ್ದರೆ ಹೆಚ್ಚಿನ ಲಾಭವುಂಟು. ಅದಕ್ಕಾಗಿಯೆ ನಾನು ಸದ್ಯದ ಯುದ್ಧದ ಪ್ರಸಂಗದ ಮಟ್ಟಿಗೆ ರಾಣೀ ಅರುಣಕುಮಾರಿಯನ್ನು ಸೇನಾಧ್ಯಕ್ಷಳನ್ನಾಗಿ ನಿಯಮಿಸಿರುವೆನು. ರಾಣಿಯು ರಾಜಕಾರಣ ಪಟುವೂ, ಶಸ್ತ್ರಾಸ್ತ್ರ ನಿಪುಣಳೂ, ಅಖಂಡ ಧೈರ್ಯಶಾಲಿನಿಯೂ, ದೀರ್ಘ ಸಾಹಸಿಯೂ ಇರುವಳೆಂಬದು ನಿಮ್ಮ ಅನುಭವಕ್ಕೆ ಬೇಗನೆ ಬರುವದಿದ್ದುದರಿಂದ ಅವಳ ವಿಷಯವಾಗಿ ನಾನು ಹೆಚ್ಚಾಗಿ ಹೇಳಬೇಕಿಲ್ಲ. ಅವಳು ಪ್ರತಿಯೊಂದು ವಿಷಯದಲ್ಲಿ ಮೇವಾಡದ ಸಾಮಾಂಕಿಕ ಯೋಧರಿಗಿಂತ ಮಿಗಿಲಾಗವಳಿರುವಳೆಂಬದನ್ನಷ್ಟು ಹೇಳದಿರಲಾರೆನು ಯುದ್ಧದಲ್ಲಿ ನೀವೆಲ್ಲರು ಅವಳ ಅನುಮತಿಯಂತೆ ವರ್ತಿಸಬೇಕೆಂದು ಸೂಚಿಸುವೆನು.''

ಉದಯಸಿಂಗನ ಮಾತುಗಳು ಬಹು ಜನ ಸರದಾರ-ಸೇನಾಪತಿಗಳಿಗೂ ರಾಜರಿಗೂ ಮಾಂಡಲಿಕರಿಗೂ ರುಚಿಸಲಿಲ್ಲ. ಉದಯಸಿಂಗನ ಯೋಜನೆಯು ತಮಗೆ ಅಪಮಾನಕಾರಕವಾಗಿರುವದೆಂದು ಅವರು ತಿಳಿದರು. ಮಹಾರಾಣಾನು ಅರುಣಕುಮಾರಿಯನ್ನು ಧರ್ಮಪತ್ನಿಯೆಂದು ಭಾವಿಸಿ, ಇಲ್ಲದ ಪ್ರತಿಷ್ಠೆ ಬೆಳೆಯಿಸಿದ್ದಕ್ಕಾಗಿ ಎಷ್ಟೋ ಸರದಾರ ಹಾಗು ಮಂತ್ರಿ-ಸೇನಾನಾಯಕರ ಮನಸ್ಸು ಕಲುಷಿತವಾಗಿದ್ದವು. ಇಂತಹ ಸ್ಥಿತಿಯಲ್ಲಿ ಅರುಣಕುಮಾರಿಯಂತಹ ಸಾಮಾನ್ಯ ಸ್ತ್ರೀಯನ್ನು, ಅದರಲ್ಲಿ ನೀಚ ಕುಲೋತ್ಪನ್ನಳನ್ನು ತಮ್ಮೆಲ್ಲರಿಗೆ ನಾಯಕಳನ್ನಾಗಿ ಮಾಡಿದ್ದರಿಂದ ಅವರು ಕ್ರುದ್ಧರಾದರು ಪ್ರಸ್ತುತದ ಮಹಾಯುದ್ಧಪ್ರಸಂಗದಲ್ಲಿ ಇಲ್ಲದ ಗೊಂದಲವೆಬ್ಬಿಸುವದರಿಂದ ಅನರ್ಥವುಂಟಾದೀತೆಂದು ಎಲ್ಲರೂ ಆತ್ಮಸಂಯಮನ ಮಾಡಿಕೊಂಡರು ಆಗ ಚೋಂಡಾವತ ಸರದಾರನು ಪ್ರಕ್ಷುಬ್ಧ ಮನಸ್ಕರಾದ ಜನರನ್ನು ಸಾಂತ್ವನಗೊಳಿಸಬೇಕೆಂದು-'ರಾಣೀಅರುಣಕುಮಾರಿದೇವಿಯವರು ಅತ್ಯಂತ ಪ್ರಭಾವಶಾಲಿಗಳಿರುವದರಿಂದ ಅವರು ಸದ್ಯದ ಯುದ್ಧಪ್ರಸಂಗದಲ್ಲಿ ಉಪಯುಕ್ತವಾದ ಯೋಜನೆ ಮಾಡಿದರೆ ಅದರಂತೆ ಎಲ್ಲರೂ ನಡೆಯಲಿಕ್ಕೆ ಅಡ್ಡಿಯಿಲ್ಲ. ಇಲ್ಲಿ ಕೂ[illegible] ಚಿತೋಡದ ಸಿಂಹಾಸನದ ಅಭಿಮಾನಿಗಳಿರುವರೆಂಬದನ್ನು ಹೇ[illegible] ತಮ್ಮ ಪ್ರಾಣಗಳನ್ನು ತೃಣಸಮಾನವೆಂದು ತಿಳಿದು ಯುದ್ಧ ಮಾ[illegible] ಕ್ಷತ್ರಿಯ ವೀರರಿಗೆ ಬಹಳ ಮಾಡಿ ಅರುಣಕುಮಾರಿದೇವಿಯವರ ಸಲಹೆ ತೆಗೆದುಕೊಳ್ಳುವ ಪ್ರಸಂಗವೊದಗಲಿಕ್ಕಿಲ್ಲ ಒಬ್ಬ ವೀರಾಂಗನೆಯು ಉತ್ಸಾಹದಿಂದ ಯುದ್ಧದಂತಹ ಕೆಲಸದಲ್ಲಿ ಭಾಗ ತೆಗೆದುಕೊಳ್ಳುವದನ್ನು ನೋಡಿ ಎಲ್ಲ ಜನರೂ ಅಭಿಮಾನ ತಳೆಯಲಿಕ್ಕೆ ಬೇಕು. ಸ್ತ್ರೀಯ ನೇತೃತ್ವದಲ್ಲಿರಬೇಕಾಗುವದೆಂದು ಯಾರೂ ಔದಾಸೀನ್ಯ ಹೊಂದಬಾರದೆಂದು ನನ್ನ ಆಗ್ರಹದ ವಿನಂತಿಯುಂಟು.''

# ರಾಣೀ ಅರುಣ ಕುಮಾರಿ.

ಚೋಂಡಾವತ ಸರದಾರನ ಮಾತುಗಳಿಂದ ರಜಪುತ ಸರದಾರರ ಹೃದಯಗಳು ಅಲ್ಪವಟ್ಟಿಗೆ ಶಾಂತವಾದವು ಉದಯಸಿಂಗನು ಜನರ ಒಲವು ತಿಳಿದು, ಅರುಣಕುಮಾರಿಯು ಆಧಿಪತ್ಯಕ್ಕೊಳಗಾಗುವದಕ್ಕೆ ಯಾರು ಗೊಳ್ಳಬಾರದೆಂದು ತಿಳಿಸಿದನು. ಅನಂತರದಲ್ಲಿ ಸಭೆ ವಿಸರ್ಜನೆಯಾಯಿತು.

ಮಾರನೆಯ ದಿವಸ ಯುದ್ಧ ಪ್ರಾರಂಭವಾಯಿತು. ಸಾಹಿದಾಸ ಚೋ ಜಯಮಲ್ಲ, ಕೇಳವಾದ ಪಟ್ಟಾ, ಇಶರೀದಾಸ ರಾಠೋಡ ಮೊದಲಾದ ಸರದಾ ಕೃಷ್ಣಲಾಲ ವಿಜಯಲಾಲ ಮೊದಲಾದ ಉಪಸೇನಾನಾಯಕರೂ ಜೀವದ ದೊರೆದು ಕಾದತೊಡಗಿದರು ಮೊಗಲರ ಸೇನಾಸಾಗರದ ಮುಂದೆ ರ ಸೈನ್ಯವು ಆನೆಯ ಮುಂದಿನ ಆಡಿನಂತೆ ಕಾಣುತ್ತಿತ್ತು; ಆದರೆ ವೀರ ರಜಪ ಒಳ್ಳೆಯ ಪರಾಕ್ರಮದಿಂದ ಕಾದಿ ಶತ್ರುಸಂಹಾರವನ್ನು ನಡೆಯಿಸಿದ್ದರು. ಮೊದಲನೆಯ ಆವೇಶಕ್ಕೇ ಮೊಗಲ ಸೈನಿಕರು ಹಿಂದೆ ಸರಿದರು. ರಜಪುತ ಸೈನ್ಯ ವೀರಾವೇಶವು ದ್ವಿಗುಣಿತವಾಯಿತು. ಅಲ್ಪ ಸಂಖ್ಯಾಕರಾದ ರಜಪುತ ಸೈನ್ಯ ವಿಜಯಿಯಾಗಿ, ತನ್ನ ಸೈನ್ಯವು ಪರಾಭವಗೊಳ್ಳುವದೆಂದು ಬಾದಶಹನು ಚಿಂ ತೊಡಗಿದನು ಅಕಬರ ಬಾದಶಹನೇನೂ ಸಾಮಾನ್ಯನಿದ್ದಿಲ್ಲ ಅವನ ಸೇನಾಪತಿಗಳಾ ತೋಡರಮಲ್ಲ, ಮನಾಯಿಮಜುನ ಮೊದಲಾದ ವೀರರೂ ನಾಮಾಂಕಿತರಾಗಿದ್ದರು ಅವರು ತಮ್ಮ ಸೈನ್ಯಕ್ಕೆ ಉತ್ಸಾಹವೀಯುತೊಡಗಿದರು. ಬಾದಶಹನ ಪ್ರಯತ್ನದಿಂ ಮೊಗಲ ಸೈನಿಕರಲ್ಲಿ ಸ್ಫೂರ್ತಿಯೂ ಹುಟ್ಟಿತು. ಅವರು ಜೀವದ ವ್ಯಾಮೋಹವನ್ನು ಬಿಟ್ಟು ಕಾದತೊಡಗಿದರು. ಮುಂದೆ ಸ್ವಲ್ಪ ಹೊತ್ತಿನಲ್ಲಿಯೆ ಮೊದಲಿನ ಸ್ವರೂಪವು ಬೇರೆಯಾಯಿತು. ಮೊಗಲರು ವೀರಾವೇಶದಿಂದ ಮುಂದೆ ಬಿದ್ದು, ರಜಪುತ ಸೈನಿಕ ರನ್ನು ಹಣ್ಣುಗಾಯಿ-ನೀರುಗಾಯಿ ಮಾಡಿದರು. ರಜಪುತರು ಎಷ್ಟು ವೀರತನ ದಿಂದ ಯುದ್ಧ ಮಾಡಿದರೂ ಅಮೋಘವಾದ ಮೊಗಲಸೈನ್ಯವನ್ನು ಪರಾಭವಗೊಳಿ ಸಲಿಕ್ಕೆ ಸಮರ್ಥರಾಗಲಿಲ್ಲ ಬರಬರುತ್ತ ಮೊಗಲರ ಬಲವು ಹೆಚ್ಚಾಯಿತು. ರಜ ಪುತರು ದುರ್ಬಲರಾಗತೊಡಗಿದರು. ಅರುಣಕುಮಾರಿಯು ಸೈನ್ಯದ ಹಿಂಭಾಗದಲ್ಲಿ ಅಶ್ವಾರೋಹಿಯಾಗಿ ಅತ್ತಿತ್ತ ಸಂಚರಿಸುತಲಿದ್ದಳು. ಅವಳು ರಜಪುತ ಸರದಾರ ರಿಗೆ ಸೈನ್ಯದ ಚಲನವಲನ ಮಾಡುವದಕ್ಕಾಗಿ ಉಪಯುಕ್ತವಾದ ಸೂಚನೆಗಳನ್ನು ತಿಳಿಸಹತ್ತಿದ್ದಳು. ಕೆಲವರು ಅವಳ ಸೂಚನೆಯಂತೆ ನಡೆಯುತ್ತಿದ್ದರು; ಕೆಲವರು ಅಭಿಮಾನದಿಂದ ತಮ್ಮ ಮನಸ್ಸಿಗೆ ತಿಳಿದಂತೆ ವರ್ತಿಸುತ್ತಿದ್ದರು. ಬರಬರುತ್ತ ರಜ ಪುತ ಸೈನ್ಯವು ನಾಶವಾಗಹತ್ತಿತು. ಮೊಗಲರು ವಿಜಯಿಗಳಾಗುವರೆಂಬ ಲಕ್ಷಣವು ನಿಚ್ಚಳವಾಗಿ ಕಾಣಲಾರಂಭಿಸಿತು. ಕೂಡಲೆ ಅರುಣಕುಮಾರಿಯು ಕಾಯ್ದಿಟ್ಟ ನಾಲ್ಕು ಸಾವಿರ ಸೈನಿಕರನ್ನು ತೆಗೆದುಕೊಂಡು ಯುದ್ಧಕ್ಕೆ ಸಿದ್ಧಳಾದಳು. ವಿಜಯ ಲಾಲನೂ ಕೃಷ್ಣಲಾಲನೂ ಅವಳಿಗೆ ನೆರವಾಗುವದಕ್ಕೆ ಹಿಂಬಾಲಿಸಿದರು. ಅರುಣ ಕುಮಾರಿಯು ಅಶ್ವಾರೋಹಿಯಾಗಿ ಕೈಯಲ್ಲಿ ನಗ್ನಖಡ್ಗವನ್ನು ಹಿಡಿದು ಶತ್ರುದಳ

ೞಕ್ಕಳು; ಮತ್ತೆ ತುಮುಲವಾದ ಯುದ್ಧವು ನಡೆಯಿತು. ಅರುಣಕುಮಾ ಪ್ರತಾಪಲ್ಯವನ್ನೂ ಶೂರತನವನ್ನೂ ನೋಡಿ ರಜಪುತರಷ್ಟೇ ಅಲ್ಲ, ಮೊಗ ರರಗಾಗಿ ಧನ್ಯೋದ್ಗಾರ ತೆಗೆಯಲಾರಂಭಿಸಿದರು. ರಜಪುತ ಸರದಾರರು ತಮ್ಮ ಸೈನ್ಯದೊಡನೆ ಒಳ್ಳೆಯ ಉತ್ಸಾಹದಿಂದ ಕಾದತೊಡಗಿದರು. ರಾಣಿಯು ನವನ್ನು ನೋಡಿ ರಜಪುತಸೈನ್ಯದಲ್ಲಿ ನವಸ್ಫೂರ್ತಿಯೂ ಶಕ್ತಿಯೂ ಉತ್ಪನ್ನ ತು. ಒಂದೆರಡು ಗಳಿಗೆಗಳಲ್ಲಿ ಸಂಗ್ರಾಮದ ಸ್ವರೂಪವೇ ಬೇರೆಯಾಯಿತು ರಜ ಆವೇಶಯುಕ್ತವಾದ ಖಡ್ಗಾಘಾತದಿಂದ ಮೊಗಲಸೈನಿಕರು ಬಹಳವಾಗಿ ನಾಶ ದತೊಡಗಿದರು. ಅರುಣಕುಮಾರಿಯಂತು ತನ್ನ ಸೈನ್ಯದೊಡನೆ ಮಹಿಷಾ ಮರ್ದಿನಿಯಂತೆ ಕಾದುತಲಿದ್ದಳು. ಅಕಬರಬಾದಶಹನೂ ಅವನ ಸೈನಿಕರೂ ಸರಿಯತೊಡಗಿದ ತಮ್ಮ ಸೈನಿಕರನ್ನು ಮುಂದುವರಿಸಲಿಕ್ಕೆ ಎಷ್ಟು ಬಗೆಯಾಗಿ ಎತ್ನಿಸಿದರೂ, ಅವರಿಗೆ ಯಶವು ಲಭಿಸಲಿಲ್ಲ. ಅಲ್ಪಸಂಖ್ಯಾಕನಾದ ರಜಪುತರು ಯಶಾಲಿಗಳಾದರು. ಮೊಗಲರ ಮಹಾ ದಳವು ದಿಕ್ಕಾಪಾಲಾಗಿ ಓಡತೊಡಗಿತು. ಜಪುತ ಸೈನ್ಯದಲ್ಲಿ ವಿಜಯ ದುಂದುಭಿಗಳು ಮೊಳಗಿದವು.

ರಾಣಿಯು ವಿಜಯಶಾಲಿನಿಯಾದಳು. ಉದಯಸಿಂಗನೂ, ಸರೋಜಸುಂದ ರಿಯೂ, ಉಳಿದ ರಾಜಪರಿವಾರದವರೂ ವಿಜಯಿಯಾದ ಅರುಣಕುಮಾರಿಯನ್ನು ಎದುರ್ಗೊಂಡು ಕರೆದೊಯ್ದರು. ಅರುಣಕುಮಾರಿಯಿಂದಲೇ ತಮಗೆ ವಿಜಯವು ದೊರೆಯಿತೆಂದು ಉದಯಸಿಂಗನೂ ಕೆಲವು ರಜಪುತ ಸರದಾರರೂ ಅವಳ ಪ್ರಶಂಸೆ ಮಾಡಿದರು; ಆದರೆ ಈ ಪ್ರಶಂಸೆಯು ಕೆಲವು ರಜಪುತ ಸರದಾರರ ಮನಸ್ಸಿಗೆ ಬರ ಲಿಲ್ಲ. ವಿಜಯಾನಂದದ ಸಮಯದಲ್ಲಿ ತಮ್ಮ ಮನಸ್ತಾಪವನ್ನು ವ್ಯಕ್ತ ಮಾಡು ವದು ಅನುಚಿತವೆಂದು ಅವರು ಸ್ತಬ್ಧರಾದರು.

ಚಿತೋಡ ರಾಜಧಾನಿಯಲ್ಲಿಯ ಪ್ರಜಾಜನರು ರಾಣೀ ಅರುಣಕುಮಾರೀದೇವಿ ಯನ್ನು ಮನಸೋಕ್ತವಾಗಿ ಕೊಂಡಾಡತೊಡಗಿದ್ದರು. ಎಕ್ಕ ನೋಡಿದತ್ತ ಅವಳ ಗುಣಗಾನವೇ ನಡೆಯಿತು. ಉದಯಸಿಂಗನಂತೂ ಅತಿರೇಕವಾದ ಆನಂದದಿಂದ ಉನ್ಮತ್ತನಂತಾಗಿದ್ದನು. ಪಟ್ಟಮಹಿಷಿಯಾದ ಸರೋಜಸುಂದರಿ ದೇವಿಯು ಅರುಣ ಕುಮಾರಿಯ ವಿಷಯವಾಗಿ ಅನಂತ ಧನ್ಯೋದ್ಗಾರಗಳನ್ನು ತೆಗೆದಳು.

ಚಿತೋಡ ರಾಜಧಾನಿಯಲ್ಲಿ ಸಡಗರದ ಸಮಾರಂಭಗಳು ನಡೆದವು. ಯುದ್ಧ ದಲ್ಲಿ ಶೂರತನ ತೋರಿಸಿದ ಸರದಾರ-ಸೇನಾಪತಿಗಳಿಗೂ ಸೈನಿಕರಿಗೂ ಯೋಗ್ಯ ವಾದ ಪಾರಿತೋಷಕಗಳು ಕೊಡಲ್ಪಟ್ಟವು. ಈ ಸಮಾರಂಭಕ್ಕೆ ಸ್ವಾಮೀ ಅಜಿತಾ ನಂದರು ಆಗಮಿಸಿದ್ದರು. ಗುಪ್ತಪುರಿಯೊಳಗಿನ ಅಗಣಿತವಾದ ಧನದಲ್ಲಿಯ ಬಹು ಭಾಗವನ್ನು ಅವರು ಕೃಷ್ಣಲಾಲನಿಂದ ರಜಪುತ ಸೈನಿಕರಿಗೆ ಸಂಭಾವನೆ ಕೊಡಿಸಿದರು.

ಕಪೋತಾಕ್ಷೀ ತೀರದಲ್ಲಿಯ ಒಂದು ಸಣ್ಣ ಗುಡಿಸಲಲ್ಲಿ ಭಿಕ್ಷುಕಿಯಂತೆ ವಾಸವಾಗಿದ್ದ ಅರುಣಾ ಈಗ ರಾಣೀ ಅರುಣಕುಮಾರಿಯಾಗಿ, ಮೊಗಲ ಬಾದಶಹ

ದರೆ, ವಿಜಯ ಲಾಭ ಮಾಡಿ ಕೊಡುವೆನು. ರಜಪುತ ಸರದಾರರು ಹೇಡಿಗಳಿರುವರೆಂದು ನನ್ನ ಅಭಿಪ್ರಾಯವಿಲ್ಲ. ಅವರು ವಿಲಕ್ಷಣ ಶೂರರೂ ಸಾಹಸಿಗಳೂ ಇರುವರು; ಆದರೆ ಯುಕ್ತಿ ಪ್ರಯುಕ್ತಿಗಳಿಂದ ಶತ್ರುಗಳ ವ್ಯೂಹವನ್ನು ನಾಶಮಾಡುವ ಕಲೆಯು ಪ್ರತಿಯೊಬ್ಬರಿಗೂ ಗೊತ್ತಾಗುತ್ತಿರುವದಿಲ್ಲ; ಹಾಗು ಎಲ್ಲ ಪಥಕಗಳಲ್ಲಿ ಸುವ್ಯವಸ್ಥೆಯೂ ಒಕ್ಕಟ್ಟಿನಿಂದ ನಡಕೊಳ್ಳುವಂತೆ ಮಾಡುವ ಪದ್ಧತಿಯೂ ಪ್ರಚಾರದಲ್ಲಿ ಬಂದರೆ ಮಹಾ ಸೈನ್ಯವನ್ನು ಸಹ ಗೆಲ್ಲಬಹುದು."

ಅರುಣಕುಮಾರಿಯು ಉದಯಸಿಂಗನಿಗೆ ತನ್ನ ಅಭಿಪ್ರಾಯ ತಿಳಿಸುವಷ್ಟರಲ್ಲಿ ಒಬ್ಬ ಸೇವಕನು ಅಲ್ಲಿಗೆ ಬಂದು—"ಮಹಾರಾಣಾಜಿಯವರೆ, ಅಕಬರ ಬಾದಶಹನ ಸೈನ್ಯವು ಚಿತೋಡವನ್ನು ಮುತ್ತುವದಕ್ಕಾಗಿ ಹೊರಟಿದೆ. ಅದು ನಾಳೆ ಸಂಜೆಯೊಳಗಾಗಿ ಬರಬಹುದು." ಎಂದು ಹೇಳಿದನು.

ಅರುಣಕುಮಾರಿಯ ಶೌರ್ಯ-ಸಾಹಸಗಳ ವಿಷಯವಾಗಿ ಉದಯಸಿಂಗನು ಎಷ್ಟೇ ನಂಬಿಗೆಯುಳ್ಳವನಾಗಿದ್ದರೂ, ಅವನು ಸಂಗ್ರಾಮಭೀರುವಾದ್ದರಿಂದ ಬಾದಶಹನ ದಂಡಯಾತ್ರೆಯ ಸುದ್ದಿಯನ್ನು ಕೇಳಿ ಅಂಜಿದನು. ಆಗ ಅವನು—'ಅರುಣ, ಮತ್ತೆ ಗಂಡಾಂತರವು ಬಂದಿತು. ನನ್ನ ಗ್ರಹದಶೆಯು ಚನ್ನಾಗಿಲ್ಲ."

"ಮಹಾರಾಣಾಜಿಯವರೆ, ನೀವು ಇಷ್ಟೇಕೆ ಅಂಜುವಿರಿ? ಕ್ಷತ್ರಿಯರು ರಣಕ್ಕೂ ಮರಣಕ್ಕೂ ಅಂಜಬಾರದು. ನಾನು ಜೀವದಿಂದಿರುವವರೆಗೆ ನಿಮಗೂ, ಚಿತೋಡ ಸಿಂಹಾಸನಕ್ಕೂ, ಮೇವಾಡದ ಸ್ವಾತಂತ್ರ್ಯಕ್ಕೂ ಭಯವಿಲ್ಲವೆಂದು ತಿಳಿಯಿರಿ."

"ರಾಣಿ, ಈ ಸಾರೆ ನಾನು ಯಾವ ಸರದಾರ-ಸೇನಾಪತಿಗಳನ್ನೂ ಲೆಕ್ಕಿಸದೆ, ನಿನಗೆ ಸರ್ವಾಧಿಪತ್ಯವನ್ನು ಕೊಡುವೆನು. ನಿನಗೆ ಸರ್ವಾಧಿಪತ್ಯ ಕೊಟ್ಟ ಬಗ್ಗೆ ಇಂದೇ ಓಲಗದಲ್ಲಿ ಪ್ರಕಟಗೊಳಿಸುವೆನು. ನಿನ್ನ ಆಜ್ಞೆಯನ್ನು ಯಾರು ಮೀರುವರೋ ಅವರು ಭಯಂಕರವಾದ ದಂಡನೆಯನ್ನು ಹೊಂದಬೇಕಾಗುವದೆಂಬದನ್ನಾದರೂ ತಿಳಿಸುವೆನು."

"ಮಹಾರಾಣಾಜಿಯವರೆ, ನಿಮ್ಮ ಈ ಆದೇಶವು ರಜಪುತ ಸರದಾರರಿಗೆ ರುಚಿಸುವದಿಲ್ಲ. ಹಿಂದಿನ ಯುದ್ಧದಂತೆ ಈ ಯುದ್ಧದಲ್ಲಾದರೂ ನಾನು ಜಾಣ್ಮೆಯಿಂದ ಎಲ್ಲ ಸರದಾರರನ್ನು ಆಧೀನದಲ್ಲಿ ತೆಗೆದುಕೊಳ್ಳಲಿಕ್ಕೆ ಪ್ರಯತ್ನ ಮಾಡುವೆನು. ನನ್ನ ಅಧಿಕಾರಕ್ಕೊಳಗಾಗಿ ಕೆಲಸ ಮಾಡಬೇಕೆಂದು ಬಹಿರಂಗವಾಗಿ ಆಜ್ಞೆ ಮಾಡಿದರೆ, ಅಭಿಮಾನಿಗಳಾದ ರಜಪುತರಲ್ಲಿ ಅಸಂತೋಷವು ಉತ್ಪನ್ನವಾಗುವ ಸಂಭವವುಂಟು.

"ರಾಣೀ, ಇದೇನು ಹೇಳುವೆ? ನಿನ್ನಂತಹ ಆದರ್ಶ ಕ್ಷತ್ರಿಯ ರಮಣಿಯ ಆಧಿಪತ್ಯಕ್ಕೊಳಗಾಗಿ ಕೆಲಸ ಮಾಡುವದಕ್ಕೆ ಪ್ರತಿಯೊಬ್ಬ ರಜಪುತನು ಆನಂದದಿಂದ ಸಿದ್ಧನಾಗಲಿಕ್ಕೆ ಬೇಕು. ದುರಾಗ್ರಹಿಗಳೂ ದುರಭಿಮಾನಿಗಳೂ ಆದ ಜನರು ನಿನ್ನ ಕೀರ್ತಿ ಬೆಳೆದದ್ದಕ್ಕಾಗಿ ಅಸೂಯಾಪರರಾಗಿರುವರೆಂಬದನ್ನು ನಾನು ಬಲ್ಲೆನು; ಆದರೆ ಅಂತಹ ಜನರ ಪರಿವೆಯು ನನಗಿಲ್ಲ. ಆ ದುರಾಗ್ರಹಿಗಳಾದ ಜನರನ್ನು ಬಲುಮೆ

ನಂತಹ ಪ್ರಚಂಡ ಬಲಶಾಲಿಯೊಡನೆ ಕಾದಿ ವಿಜಯ ಲಾಭಮಾಡಿಕೊಂಡದ್ದನ್ನು ನೋಡಿ, ಸ್ವಾಮಿ ಅಜಿತಾನಂದರೂ ಕೃಷ್ಣಲಾಲ-ವಿಜಯಲಾಲರೂ ಎಷ್ಟು ಆನಂದ ಗೊಂಡಿದ್ದರೆಂಬದನ್ನು ವರ್ಣಿಸುವದು ಅಸದಳವೇ ಸರಿ.

---

## ದುರ್ದೈವಿಯಾದ ಚಿತೋಡ.

"ರಾಣಿ!" "ಯಾಕೆ ನಾಥಾ!"

"ಅಕಬರ ಬಾದಶಹನು ಚಿತೋಡದ ಮೇಲೆ ಮತ್ತೆ ದಂಡೆತ್ತಿ ಬರುವನೆಂಬ ವಿಶ್ವಸನೀಯವಾದ ವಾರ್ತೆ ಬಂದಿದೆ."

"ಅವಶ್ಯವಾಗಿ ಬರಲಿ. ಅದಕ್ಕೇಕೆ ಇಷ್ಟು ಯೋಚನೆಯು?"

"ಈ ಸಾರೆ ಅವನು ತನ್ನ ಸಾಮ್ರಾಜ್ಯ ಶಕ್ತಿಯನ್ನೇ ಚಿತೋಡದ ಮೇಲೆ ಪ್ರಯೋಗ ಮಾಡುವ ಲಕ್ಷಣವಿದೆ."

"ಬಹಳೇ ಒಳಿತಾಯಿತು." "ಒಳಿತು ಹೇಗೆ?"

"ಒಮ್ಮೆ ಅವನ ಸಾಮ್ರಾಜ್ಯ ಶಕ್ತಿಯು ಸಮೂಲವಾಗಿ ನಾಶವಾಯಿತೆಂದರೆ, ಮತ್ತೆ ಮತ್ತೆ ದಂಡೆತ್ತಿ ಬರುವನೆಂಬ ಭಯವು ಉಳಿಯುವದಿಲ್ಲ."

"ಅವನ ಪ್ರಚಂಡವಾದ ಶಕ್ತಿಯನ್ನು ನಾಶಗೊಳಿಸುವ ಯೋಗ್ಯತೆಯು ಮೇ-ವಾಡ ರಾಷ್ಟ್ರದಲ್ಲಿರುವದೆ?"

"ಅಖಂಡವಾದ ಧೈರ್ಯವಿದ್ದರೆ ಯಾವ ಕೆಲಸವಾದರೂ ಈಡೇರುವದು.

"ರಾಣಿ, ನಿನ್ನ ಸತ್ವದಿಂದಲೆ ಮೇವಾಡದ ಗೌರವವು ಉಳಿದಿದೆ. ಮುಂದೆ ಯಾದರೂ ನಿನ್ನಿಂದಲೆ ಚಿತೋಡ ಸಿಂಹಾಸನದ ಹಾಗು ಮೇವಾಡದ ಅಭಿಮಾನದ ರಕ್ಷಣೆಯಾಗಬೇಕಾಗಿದೆ. ಕುಲಕಲಂಕಿನಿಯೆಂದು ಜರಿಯುತ್ತಿದ್ದ ದುರಭಿಮಾನದ ಜನರ ಕಣ್ಣಲ್ಲಿ ನೀನು ಚನ್ನಾಗಿ ಅಂಜನವನ್ನು ಹಚ್ಚಿದೆ."

"ಪ್ರಾಣನಾಥ! ಜನರು ನನ್ನನ್ನು ಕೀಳು ಕುಲದವಳೆಂದು ತಿಳಿದುಕೊಳ್ಳುತ್ತಿರುವರೆಂದು ನಾನು ಖಿನ್ನಳಾಗಿಲ್ಲ; ಸ್ತ್ರೀಯೆಂಬ ಕಾರಣದಿಂದಲೂ, ಅಚ್ಚ ರಜಪುತ ವಂಶದವಳಲ್ಲವೆಂಬ ನಿಮಿತ್ತದಿಂದಲೂ, ನಿಮ್ಮ ಸರದಾರ-ಸೇನಾಪತಿಗಳೂ ಮಾಂಡಲಿಕರೂ ನನ್ನನ್ನು ಬಹಳವಾಗಿ ತಿರಸ್ಕರಿಸುತ್ತಿರುವರು. ಕಾಳಗದಲ್ಲಿ ಎಲ್ಲ ಸರದಾರರು ನನ್ನ ಹೇಳಿಕೆಯಂತೆ ನಡೆದಿದ್ದರೆ, ಚಿತೋಡದ ಹೆಸರನ್ನು ಕನಸಿನಲ್ಲಿ ತೆಗೆಯಲಿಕ್ಕೂ ದಿಲ್ಲೀಶ್ವರನು ಅಂಜುವಂತೆ ಮಾಡುತ್ತಿದ್ದೆನು. ಬಾದಶಹನು ಮತ್ತೊಮ್ಮೆ ದಂಡೆತ್ತಿ ಬರುವನೆಂಬದನ್ನು ಎಂದಿನಿಂದಲೋ ನಾನು ಅರಿತಿರುವೆನು ಅವನು ಈ ಸಾರಿ ಅಪೂರ್ವವಾದ ಸೇನಾಸಿದ್ಧತೆ ಮಾಡಿಕೊಂಡು ಬರುವನೆಂಬದೂ ನನಗೆ ತಿಳಿದಿದೆ; ಆದರೆ ಚಿತೋಡದ ಸರದಾರರು ಒಕ್ಕಟ್ಟಿನಿಂದ ನನ್ನ ಅನುಮತಿಯಂತೆ ನಡೆ

ಒಂದ ನಿನ್ನ ಕೈಯಲ್ಲಿ ಕೊಡುವೆನು. ಮೇವಾಡದ ಸ್ವಾತಂತ್ರ್ಯದ ರಕ್ಷಣೆಯು ಯಾವ ವಿಧದಿಂದಲಾಗುವದೆಂಬದನ್ನು ಕಂಡು ಹಿಡಿದು ಅದರಂತೆ ವರ್ತಿಸಲಿಕ್ಕೆ ನನಗೆ ಅಧಿಕಾರವಿದೆ. ಪ್ರಿಯೆ, ನೀನು ಈ ವಿಷಯದಲ್ಲಿ ಯೋಚಿಸಬೇಡ. ನಾನು ಎಲ್ಲ ಬಗೆಯ ವ್ಯವಸ್ಥೆ ಮಾಡುವೆನು."

"ರಾಣಾಜಿಯವರೆ, ಎಲ್ಲ ರಜಪುತ ಸರದಾರರು ನನ್ನ ಅಧಿಕಾರಕ್ಕೊಳಗಾಗ ಬೇಕೆಂದು ನನ್ನ ಇಚ್ಛೆಯಿಲ್ಲ. ಹೇಗಾದರೂ ಮೇವಾಡದ ಸ್ವಾತಂತ್ರ್ಯ ರಕ್ಷಣೆಯಾದರಾಯಿತು. ಮಾನವಂತರಾದ ಜನರ ಅಂತಃಕರಣಗಳು ನೋಯುವಂತಹ ಕೃತಿಯನ್ನು ಮಾಡಬಾರದೆಂದು ಸೆರಗೊಡ್ಡಿ ಬೇಡಿಕೊಳ್ಳುವೆನು. ನಾನು ಯುಕ್ತಿ ಪ್ರಯುಕ್ತಿಗಳಿಂದ ಎಲ್ಲ ಸರದಾರ-ಸೇನಾಪತಿಗಳ ಮನವೊಲಿಸುವೆನು. ಚಿತೋಡದ ಸ್ವಾಮಿನಿಷ್ಠ ಸರದಾರರು ತಮ್ಮ ಪ್ರಾಣಗಳನ್ನು ತೃಣಸಮಾನವೆಂದು ತಿಳಿದು ಯುದ್ಧ ಮಾಡುವರೆಂಬದು ನನಗೆ ಗೊತ್ತಾಗಿದೆ. ಪ್ರಸಂಗದಲ್ಲಿ ಅವರಿಗೆ ಯೋಗ್ಯ ಸಲಹೆ ಕೊಟ್ಟು ರಣಕೌಶಲ್ಯವನ್ನು ವ್ಯಕ್ತಪಡಿಸುವಂತೆ ಮಾಡುವೆನು."

"ಪ್ರಿಯೆ, ನೀನು ರಾಜಕಾರಣ ಕುಶಲಳೂ ಶೂರಳೂ ಇರುವೆ; ಆದರೆ ಈಗ ಮಾತ್ರ ಕರ್ತವ್ಯವನ್ನು ಮರೆತು ಬಿಟ್ಟಿರುವಂತೆ ತೋರುವದು. ನೀನು ಚಿತೋಡದ ರಾಣಿಯಿದ್ದು ಈ ಬಗೆಯ ಭೀರುತನವು ಹೇಗೆ ನೆಲೆಗೊಂಡಿತು? ನೀನು ಸಾಮಾನ್ಯ ಸ್ತ್ರೀಯಂತೆ ಭಾವಿಸಿಕೊಂಡು ಈ ಬಗೆಯಾಗಿ ಮಾತಾಡುತ್ತಿರುವೆ. ಎಲ್ಲ ಸರದಾರರು ನಿನ್ನ ಅಧಿಕಾರಕ್ಕೊಳಪಟ್ಟರೆ ಭಾವೀ ಯುದ್ಧದಲ್ಲಿ ಬೇಗನೆ ವಿಜಯಸಂಪಾದನೆಯಾಗುವದು. ಎಲ್ಲರನ್ನು ಸ್ವಾಧೀನದಲ್ಲಿ ತೆಗೆದುಕೊಂಡು ರಣಕಾರ್ಯ ನಡೆಯಿಸುವದು ನಿನ್ನ ಕರ್ತವ್ಯವಲ್ಲವೆ?"

ಉದಯಸಿಂಗನು ತನ್ನ ಹಟವನ್ನೇ ನಡೆಯಿಸಿದನು. ಅಂದಿನ ಸಭೆಯಲ್ಲಿ ಅವನು ತನ್ನ ಯೋಜನೆಯಂತೆ ಎಲ್ಲ ಸರದಾರರಿಗೆ ಆಜ್ಞೆ ಮಾಡಿದನು. ಹಿಂದಿನ ಯುದ್ಧದಲ್ಲಿ ತಾವು ಎಷ್ಟು ಪೌರುಷದಿಂದ ಕಾದಿದರೂ ವಿಜಯದ ಕೀರ್ತಿಯು ಮಾತ್ರ ಒಬ್ಬ ಯಃಕಶ್ಚಿತ ಸ್ತ್ರೀಗೆ ದೊರಕಿ, ತಮ್ಮ ಮಾನಕ್ಕೂ ಕೀರ್ತಿಗೂ ಕಲಂಕವು ತಟ್ಟಿತೆಂದು ಅವರ ಭಾವನೆಯಾಗಿತ್ತು. ಆದ್ದರಿಂದ ಅವರು ಉದಯಸಿಂಗನ ಆಜ್ಞೆಯನ್ನು ಬಹಿರಂಗವಾಗಿ ನಿಷೇಧಿಸಿದರು; ಆದರೆ ಉದಯಸಿಂಗನು ತನ್ನ ದುರಾಗ್ರಹ

ಯಾರು ಅರುಣಕುಮಾರಿಯ ಅಧಿಕಾರಕ್ಕೊಳಗಾಗ ದಿಲ್ಲವೋ,

ಮಾರನೆಯ ದಿನ ಬಾದಶಹನ ಅಮೋಘವಾದ ಸೈನ್ಯವು ಚಿತೋಡವ ಮುತ್ತಿತು. ಆಗ ಸಂಧ್ಯಾಕಾಲವಾದ್ದರಿಂದ ಯುದ್ಧವನ್ನು ಪ್ರಾರಂಭಿಸುವದು ಅನುಚಿತವೆಂದು ಎರಡೂ ಪಕ್ಷದವರು ತಟಸ್ಥರಾಗಿದ್ದರು. ಅರುಣಕುಮಾರಿಯು ಶತ್ರುಗಳ ಬಲವು ಎಷ್ಟಿರುವದೋ ನೋಡಬೇಕೆಂದು ಚಿತ್ತೋಡದುರ್ಗದ ದೊಡ್ಡ ಕೊತ್ತಳವನ್ನೇರಿದಳು. ಅವಳ ಬಳಿಯಲ್ಲಿ ನಾಲ್ಕು ಜನ ಅಂಗರಕ್ಷಕರಿದ್ದರು. ಅವಳು ಕೊತ್ತಳವನ್ನೇರುತ್ತಿರುವಾಗ ಹತ್ತೆಂಟು ಜನರು ವೇಗದಿಂದ ಬರುತ್ತಿರುವದನ್ನು ಅವಳು ಕಂಡಳು. ಅವರು ರಜಪುತರಿದ್ದುದರಿಂದ ಅವಳಿಗೆ ಯಾವ ವಿಧದ ಅಂಜಿಕೆಯೂ ಹುಟ್ಟಲಿಲ್ಲ. ಯಾವದೋ ಒಂದು ಮಹತ್ವದ ಸುದ್ದಿಯನ್ನು ಹೇಳುವದಕ್ಕೆ ಅವರು ಬರುತ್ತಿರಬಹುದೆಂದು ಅರುಣಕುಮಾರಿಯು ತಿಳಿದಳು. ಆ ಜನರು ಬಂದವರೇ ತಮ್ಮ ಖಡ್ಗಗಳನ್ನೆತ್ತಿದರು. ಕೂಡಲೆ ಅರುಣಕುಮಾರಿಗೆ ಅವರ ಪ್ರಯತ್ನವು ತಿಳಿಯಿತು. ಅವಳು ತನ್ನ ಟೊಂಕಕ್ಕೆ ಕಟ್ಟಿದ ಖಡ್ಗದ ಕಡೆಗೆ ಕೈ ನೀಡಿದಳು. ಒರೆಯಿಂದ ಖಡ್ಗವಿನ್ನೂ ಹೊರಬಿದ್ದಿರಲಿಲ್ಲ; ಅಷ್ಟರಲ್ಲಿ ಅರುಣಕುಮಾರಿಯ ಮಸ್ತಕವು ಭೂಮಿಗೆ ಬಿತ್ತು! ಅರುಣಕುಮಾರಿಯಂತಹ ಕುಲಕಲಂಕಿನಿಯಾದ ಸ್ತ್ರೀಯ ಆಧಿಪತ್ಯಕ್ಕೊಳಗಾಗಬೇಕಾಯಿತೆಂದು ನೊಂದ ರಜಪುತ ಸರದಾರರು ಗುಪ್ತ ಕಾರಸ್ಥಾನವನ್ನು ರಚಿಸಿ, ಅವಳ ಕೊಲೆ ಮಾಡಿಸಿದರು. ಚಿತೋಡದ ಸ್ವಾತಂತ್ರ್ಯ ರಕ್ಷಣೆಗಾಗಿ ಆತ್ಮಬಲಿದಾನ ಮಾಡಲಿಕ್ಕೆ ಸಿದ್ಧಳಾದ ಒಬ್ಬ ದಿವ್ಯ ಕ್ಷತ್ರಿಯ ರಮಣಿಯು ದುರಭಿಮಾನದಿಂದ ತಲ್ಲಣಿಸುವ ಜನರ ಕ್ರೂರ ಖಡ್ಗಕ್ಕೆ ಬಲಿಯಾದಳು! ನಿಯತಿಯು ಅಲಂಘ್ಯನೀಯವೆಂಬ ಶಿಷ್ಟಸಮ್ಮತ ವಾಕ್ಯವನ್ನು ನೆನೆದು, ಇಂತಹ ಘಟನೆಗಳಿಂದ ಚಲವಿಚಲವಾಗುತ್ತಿರುವ ಮನಸ್ಸನ್ನು ಶಾಂತಪಡಿಸದಿದ್ದರೆ ಗತ್ಯಂತರವಿಲ್ಲ. ಅರುಣಕುಮಾರಿಯ ಈ ಭಿಷಣವಾದ ಕೊಲೆಯ ಸಂಗತಿಯು ಯುದ್ಧವು ಪ್ರಾರಂಭವಾಗುವವರೆಗೆ ಉದಯಸಿಂಹನಿಗೆ ತಿಳಿಯಲಿಲ್ಲ.

ಅಕಬರ ಬಾದಶಹನು ಈ ಸಾರೆ ಅಪೂರ್ವವಾದ ಸೇನಾಸನ್ನಾಹದೊಡನೆ ಸಾಗಿ ಬಂದಿದ್ದನು. ಅವನ ಸೈನ್ಯವು ಪಾಂಡೌಲಿಯಿಂದ ಬಸಿಯು ವರೆಗೆ ಸುಮಾರು ಐದು ಕ್ರೋಶಗಳ ವರೆಗೆ ವ್ಯಾಪಿಸಿತ್ತು. ಈ ಸೈನ್ಯವನ್ನು ಉದಯಸಿಂಹನು ನೋಡಿ ಭಯಗೊಂಡನು. ಅರುಣಕುಮಾರಿಯು ಹೇಳಿದ ಉತ್ಸಾಹಜನಕವಾದ ಮಾತುಗಳನ್ನು [illegible]ನು ಮತ್ತೆ ಮರೆತನು. ಆಗ ಅವನು ತನ್ನ ರಾಣಿಯ[illegible]

[illegible]

ಕೊಲೆ ಮಾಡಿದವರನ್ನು ಶೋಧಿಸುವಂತಹ ವೇಳೆಯು ಆಗ ಇದ್ದಿಲ್ಲ. ಆದ್ದರಿಂದ ಅವನು ನಿರುಪಾಯನಾಗಿ ಶವದ ವ್ಯವಸ್ಥೆ ಮಾಡಿಸಿ, ಅರಮನೆಗೆ ಬಂದನು. ಅವನಿಗೆ ಯುದ್ಧ ಮಾಡುವ ಇಚ್ಛೆಯಿದ್ದಿಲ್ಲ. ಅವನು ಮೊದಲೇ ಅಳ್ಳೆದೆಯವನು; ಅದರಲ್ಲಿ ಧೈರ್ಯವೀಯುವವಳೂ ಶೌರ್ಯದಿಂದ ಕಾದುವವಳೂ ಆದ ರಾಣಿಯು ಮರಣ ಹೊಂದಿದ್ದರಿಂದ ಅವನು ತೀರ ಅಳ್ಳೊಡೆದನು. ಕೂಡಲೆ ಆತನು ತನ್ನ ಪರಿವಾರ ಸಮೇತನಾಗಿ ಗುಪ್ತ ಮಾರ್ಗದಿಂದ ಚಿತೋಡವನ್ನು ಬಿಟ್ಟು ತೆರಳಿದನು.

ಮಹಾರಾಣಾ ಉದಯಸಿಂಗನು ಚಿತೋಡವನ್ನು ಬಿಟ್ಟು ತೆರಳಿದರೂ, ಅವನೊಡನೆ ರಜಪುತರ ಶೌರ್ಯ ವೀರ್ಯ ಸಾಹಸಗಳು ಹೊರಟು ಹೋಗಲಿಲ್ಲ. ಪರಾಕ್ರಮಿಗಳಾದ ಸರದಾರರು ದಿಲ್ಲೀಶ್ವರನ ಸೇನಾಸಾಗರವನ್ನು ನೋಡಿ ಅಂಜದೆ, ಚಿತೋಡಕ್ಕಾಗಿ ಕಾದಿ ಪ್ರಾಣಕೊಡುವದನ್ನು ನಿರ್ಧರಿಸಿದರು. ಚಿತೋಡದ ಸೂರ್ಯದ್ವಾರದಲ್ಲಿ ಸಾಳುಂಬ್ರೆಯ ಚೋಂಡಾ ಅಧಿಪತಿಯಾದ ಸಾಹಿದಾಸನು ಶತ್ರುಗಳೊಡನೆ ಕಾದತೊಡಗಿದನು. ಬೇಡಲಾ ಹಾಗು ಕೋಠಾರಿಯಾದ ಠಾಕುರರು, ದಿಲ್ಲಿಯ ಪೃಥ್ವೀರಾಜ ಚಂಹ್ವಾಣನ ವಂಶಜನಾದ ಬಿಜೌಲಿಯ ಪ್ರಮಾರನು, ಸಾದ್ರಿಯ ಝಾಲಾನು, ಝಾಲವಾಡದ ರಾವನು, ಇಸರೀದಾಸ ರಾಠೋಡ, ದೇವಳಾದ ಎರಡನೆಯ ರಾಜಕುಮಾರ, ಕರಮುಚಂದ ಕುಚ್ಛವಾಹ, ದುದಾಸುದಾನಿ, ಗ್ವಾಲೇರದ ತುವರ ಹಾಗು ಚಿತೋಡದ ಸೇನಾಪತಿಗಳು ಮೊದಲಾದವರು ಮೇವಾಡದ ಸ್ವಾತಂತ್ರ್ಯ ರಕ್ಷಣೆಗಾಗಿ ಯುದ್ಧ ಮಾಡತೊಡಗಿದರು. ಬೇದನೂರ ಜಯಮಲ್ಲನೂ ಕೇಳವಾದ ಪಟ್ಟಾನೂ ಶತ್ರುಗಳ ಸಮಾಚಾರವನ್ನು ತೆಗೆದುಕೊಳ್ಳಲಿಕ್ಕೆ ಸಿದ್ಧರಾಗಿದ್ದರು. ಒಳ್ಳೆಯ ನಿಕರವಾದ ಯುದ್ಧವು ನಡೆಯಿತು. ಎರಡೂ ಬಣದವರು ತಮ್ಮ ತಮ್ಮ ರಣಕೌಶಲ್ಯವನ್ನು ತೋರಿಸತೊಡಗಿದ್ದರು. ಸೂರ್ಯದ್ವಾರದಲ್ಲಿ ಕಾದುತ್ತಿದ್ದ ಸಾಹಿದಾಸ ಚೋಂಡಾನು ಶತ್ರುಗಳ ಸೈನ್ಯದಲ್ಲಿ ಅಂತಕನ ಕೋಲಾಹಲವನ್ನೆಬ್ಬಿಸಿದ್ದನು. ಜಯಮಲ್ಲನೂ ಕೇಳವಾದ ಪಟ್ಟಾನೂ ಬಾದಶಹನ ಬೇರೆ ಬೇರೆ ಪಥಕಗಳ ಮೇಲೆ ಬಿದ್ದು ಅವುಗಳನ್ನು ನುಗ್ಗುನುಗ್ಗು ಮಾಡತೊಡಗಿದ್ದರು. ಮೊಗಲರ ಹಾಗು ರಜಪುತರ ನಡುವೆ ಘನಘೋರವಾದ ಸಂಗ್ರಾಮವು ನಡೆಯಿತು. ಎರಡೂ ಬಣದವರು ಒಳ್ಳೆಯ ಈರ್ಷೆಯಿಂದ ಕಾದತೊಡಗಿದ್ದರು. ಹೀಗೆ ಕೆಲವು ವೇಳೆ ಯುದ್ಧವು ನಡೆಯುವಷ್ಟರಲ್ಲಿ ಸೂರ್ಯದ್ವಾರದ ಬಳಿಯಲ್ಲಿ ಯುದ್ಧ ಮಾಡುತ್ತಿದ್ದ ಸಂಗ್ರಾಮ ಶಾರ್ದೂಲನಾದ ಸಾಹಿದಾಸ ಚೋಂಡಾನು ಧಾರಾತೀರ್ಥದಲ್ಲಿ ಶಯನ ಮಾಡಿದನು. ಕೂಡಲೆ ಅವನ ಸೈನಿಕರು ಅಂಜಿ ಕಾಲ್ತೆಗೆಯುವ ಯತ್ನದಲ್ಲಿ ತೊಡಗಿದರು. ಆಗ ಪಟ್ಟಾನು ಆ ಸೈನಿಕರನ್ನು ಹುರಿದುಂಬಿಸಿ, ಚೋಂಡಾನು ಯುದ್ಧ ಮಾಡುತ್ತಿದ್ದ ಸೂರ್ಯದ್ವಾರದ ಬಳಿಗೆ ಬಂದು ಅದರ ರಕ್ಷಣೆ ಮಾಡಲಾರಂಭಿಸಿದನು.

ಕೇಳವಾದ ಪಟ್ಟಾನು ಹದಿನಾರು ವರ್ಷದವನಿದ್ದನು. ಅವನ ತಂದೆಯು ಅದೇ ಕಾಳಗದಲ್ಲಿ ಅಂದೇ ಮರಣಹೊಂದಿದ್ದನು. ಆದರೂ ಅವನು ಧೃತಿಗುಂದದೆ,

ಪಿತೃಶೋಕದಿಂದ ಖಿನ್ನನಾಗಿ ಕರ್ತವ್ಯಪರಾಙ್ಮುಖನಾಗದೆ ಒಳ್ಳೆಯ ಸಾಹಸದಿಂದ ಕಾಳಗಕ್ಕಣಿಯಾದನು. ಅಂದಿನ ರಣದಲ್ಲಿ ಪಟ್ಟಾನ ತಾಯಿಯು ಹೆಂಡತಿಯು ಸಶಸ್ತ್ರರಾಗಿ ಕಾದ ಬಂದಿದ್ದರು. 'ಚಿತೋಡದ ಪವಿತ್ರ ಸ್ವಾತಂತ್ರ್ಯಸಿಂಹಾಸನದ ರಕ್ಷಣೆಗಾಗಿ ತಮ್ಮ ವಂಶವು ನಿರ್ವಂಶವಾದರೂ ಚಿಂತೆಯಿಲ್ಲ; ಕರ್ತವ್ಯವನ್ನು ನೆರವೇರಿಸಿಯೇ ಬಿಡಬೇಕು.' ಎಂದು ಅವರು ಪಟ್ಟಾನಿಗೆ ಹುರುಪು ಕೊಡತೊಡಗಿದ್ದರು. ರಜಪುತರು ಜೀವದ ವ್ಯಾಮೋಹವನ್ನು ಬಿಟ್ಟು ಕಾದಹತ್ತಿದ್ದರು. ಆಗ ಪಟ್ಟಾನು ಸೂರ್ಯದ್ವಾರದ ಬಳಿಯಲ್ಲಿ ಧಾರಾಶಾಯಿಯಾದನು.

ಪಟ್ಟಾನು ಪಡೆದ ಮೇಲೆ ಸಂಗ್ರಾಮಕೇಸರಿಯಾದ ಜಯಮಲ್ಲನು ಅವನ ಸ್ಥಳಕ್ಕೆ ಬಂದನು. ಅವನು ಮೊಗಲ ಸೈನ್ಯದಲ್ಲಿ ಭಯಂಕರವಾದ ಕೋಲಾಹಲವನ್ನೆಬ್ಬಿಸಿಬಿಟ್ಟನು. ವಿಜಯಲಕ್ಷ್ಮಿಯು ಮೊಗಲರಿಗೆ ಪ್ರಸನ್ನಳಾಗಿದ್ದಳೋ ಏನೋ, ಸ್ವಲ್ಪ ವೇಳೆ ಯುದ್ಧ ನಡೆಯುವಷ್ಟರಲ್ಲಿ ಜಯಮಲ್ಲನಿಗೆ ತುಬಾಕಿಯ ಗುಂಡು ತಾಕಿತು. ಸೈನಿಕರು ಗಾಯ ಹೊಂದಿದ ಜಯಮಲ್ಲನನ್ನು ಕೋಟೆಯಲ್ಲಿ ತಂದರು. ಜಯಮಲ್ಲನು ಗಾಯ ಹೊಂದಿದ ಮೇಲೆ ರಜಪುತರ ಸೈನ್ಯವು ಹಿಂಜರಿಯತೊಡಗಿತು. ಮೊಗಲರು ದ್ವಿಗುಣಿತವಾದ ಉತ್ಸಾಹದಿಂದ ಕಾದಲಾರಂಭಿಸಿದರು. ಇನ್ನು ರಜಪುತರಿಗೆ ಜಯ ದೊರೆಯುವ ಆಶೆಯಿಲ್ಲವೆಂದೂ, ಸ್ತ್ರೀಯರಿಗೆ ಜೋಹಾರಕ್ಕೆ ಅನುಮತಿಯಿತ್ತು, ಪುರುಷರೆಲ್ಲರೂ ಕೇಸರೀ ವಸ್ತ್ರಗಳನ್ನು ಧರಿಸಿ, ರಣದೇವತೆಗೆ ಆತ್ಮಬಲಿದಾನ ಮಾಡಬೇಕೆಂದೂ ಅವನು ತನ್ನ ಇಚ್ಛೆಯನ್ನು ಪ್ರಕಟಗೊಳಿಸಿ ಮರಣ ಹೊಂದಿದನು.

ಜಯಮಲ್ಲನ ಅಂತಿಮ ಸಂದೇಶದ ಮೇರೆಗೆ ರಜಪುತರು ತಮ್ಮ ಸ್ತ್ರೀ ಪರಿವಾರಕ್ಕೆ ಜೋಹಾರ ವ್ರತವನ್ನಾಚರಿಸಲು ಅಜ್ಞೆಯಿತ್ತು, ತಾವು ಕೇಸರೀ ಉಡಿಗೆ-ತೊಡಿಗೆಗಳನ್ನು ಧರಿಸಿ ಯುದ್ಧಕ್ಕೆ ಹೊರಟರು. ಚಿತೋಡದ ಮಹಾದ್ವಾರವು ತೆರೆಯಲ್ಪಟ್ಟಿತು. ಪ್ರಾಣವನ್ನು ತೃಣಸಮಾನವೆಂದು ತಿಳಿದು ಕಾದಲಾರಂಭಿಸಿದ ರಜಪುತರು ಕೆಲವು ವೇಳೆಯ ವರೆಗೆ ಮೊಗಲ ಸೈನ್ಯವನ್ನು ಧ್ವತಿಗುಂದಿಸಿದರು; ಆದರೆ ಈ ಸ್ಥಿತಿಯು ಕಡೆಯವರೆಗೆ ಉಳಿಯುವಂತಿದ್ದಿಲ್ಲ. ಮೊಗಲ ಸೇನಾಸಾಗರಕ್ಕೆ ಅಲ್ಪ ಸಂಖ್ಯಾಕ ರಜಪುತರು ಬಹಳ ವೇಳೆ ತಡೆದು ನಿಲ್ಲುವಂತಿದ್ದಿಲ್ಲ. , ಬಿಜೌಲಿಯ ಪ್ರಮಾರ, ಸಾದ್ರಿಯ ಝಾಲಾ, ಇಸರೀದಾಸ ರಾಠೋಡ, ವಿಜಯಲಾಲ, ಕೃಷ್ಣಲಾಲ ಮೊದಲಾದ ಸರದಾರ ಸೇನಾಪತಿಗಳು ಮೃತಿಹೊಂದಿದರು. ಬಹಳವೇನು? ಕೈಯಲ್ಲಿ ಶಸ್ತ್ರ ಹಿಡಿದು ಯುದ್ಧ ಮಾಡುವ ಯೋಗ್ಯತೆಯ ಯಾವ ರಜಪುತನೂ ಜೀವಂತವಾಗಿ ಉಳಿಯಲಿಲ್ಲ. ವಿಜಯಲಕ್ಷ್ಮಿಯು ದಿಲ್ಲೀಶ್ವರನ ಕೊರಳಲ್ಲಿ ವಿಜಯಮಾಲೆ ಹಾಕಿದಳು. ಮೊಗಲ ಸೈನ್ಯವು ವಿಜಯಾನಂದದಿಂದ ಜಯಜಯಕಾರ ಧ್ವನಿಗೈಯುತ್ತ ಚಿತೋಡವನ್ನು ಪ್ರವೇಶಿಸಿತು.

ಅಕಬರಬಾದಶಹನು ಚಿತೋಡವನ್ನು ಪ್ರವೇಶಿಸಿದ ಮೇಲೆ ಮಾಡಿದ ಅತ್ಯಾ

ಚಾರವನ್ನು ವರ್ಣಿಸಲಾಸಲ್ಲ. ಅವನು ಅಲ್ಲಿಯ ಸ್ತ್ರೀ-ಪುರುಷರ ಕೊಲೆಯನ್ನು ಅಮಾನುಷ ಪ್ರಕಾರದಿಂದ ಮಾಡಿದನು. ಸುಮಾರು ಮೂವತ್ತುಸಾವಿರ ಸ್ತ್ರೀ-ಪುರುಷರು ಕೊಲ್ಲಲ್ಪಟ್ಟರು! ಅಕಬರಬಾದಶಹನ ಖಡ್ಗವು ರಾಜಪುತ್ರನದ ಮೇಲೆಯೂ ರಾಜಪರಿವಾರದ ಮೇಲೆಯೂ ಪ್ರಯೋಗಿಸಲ್ಪಟ್ಟು, ಒಂಬತ್ತು ಜನ ರಾಣಿಯರೂ, ಐದುಜನ ಬಾಲಿಕೆಯರೂ, ಎಷ್ಟೋ ಸಣ್ಣ ಹುಡುಗರೂ, ರಾಜಾಪ್ತಆಪ್ತಸ್ವಕೀಯರೂ, ಸರದಾರ-ಸೇನಾಪತಿಗಳ ಹೆಂಡರೂ ಹೀಗೆ ಒಟ್ಟು ಹದಿನೇಳು ನೂರು ಜನರು ಕೊಲ್ಲಲ್ಪಟ್ಟರು! ಈ ಬಗೆಯಾಗಿ ಹಿಂಸಕ ಪಶುವೃತ್ತಿಯು ಕೆಲಸ ಮಾಡಿಯೂ ಬಾದಶಹನ ಆಸುರೀ ಹೃದಯವು ಶಾಂತವಾಗದೆ, ಧರ್ಮದ ದುರಭಿಮಾನದಿಂದ ಎಷ್ಟೋ ದೇವಾಲಯಗಳನ್ನೂ ಮಂದಿರಗಳನ್ನೂ ರಾಜಭುವನವನ್ನೂ ಅವನು ನೆಲಸಮ ಮಾಡಿಸಿದನು. ಚಿತೋಡದ ನಗರದೇವಿಯ ಮಂದಿರದ ಅವಸ್ಥೆಯಾದರೂ ಇದೇ ಬಗೆಯಾಯಿತು. ಅಲ್ಲಿಯ ನಗಾರಿ, ನೌಬತ್ತು, ದೀಪ, ದೀಪಿಗಳು ಅಲಂಕಾರಗಳು, ದೇವಾಲಯದ ಬಾಗಿಲ ಮೊದಲಾದವುಗಳು ಆಗ್ರಾಕ್ಕೆ ಕಳಿಸಲ್ಪಟ್ಟವು. ತನ್ನ ಕೃತ್ಯದ ಕುರುಹು ಉಳಿಯಬೇಕೆಂಬ ಉದ್ದೇಶದಿಂದ ಅವನು ದೇವಾಲಯಗಳಿದ್ದ ಸ್ಥಳಗಳಲ್ಲಿ ಮಸೀದೆಗಳನ್ನು ಕಟ್ಟಿಸಿದನು! ಈ ಹಾವಳಿಯು ೧೫೬೮ನೆಯ ಕ್ರಿಸ್ತಾಬ್ದದ ಮೇ ತಿಂಗಳಲ್ಲಿ ನಡೆಯಿತು. ಚಿತೋಡದ ಈ ಮಹಾ ಸಂಗ್ರಾಮದಲ್ಲಿ ಮಡಿದ ರಜಪುತವೀರರ ಯಜ್ಞೋಪವೀತಗಳ ತೂಕವು ೭೪|| ಮಣ (ಕಚ್ಚಾ - ಶೇರು=೧ ಮಣ) ವಾಯಿತಂತೆ! ಹಿಂದುಸ್ತಾನದೊಳಗಿನ ಚಿನಿವಾಲರೂ ಹಳೇ ವ್ಯಾಪಾರಿಗಳೂ ತಮ್ಮ ಕಾಗದ-ಪತ್ರಗಳ ಮೇಲೆ ೭೪|| ಅಂಕಿಯನ್ನು ಹಾಕುತ್ತಿರುವರು. ಯಾರಾದರೂ ಅಕ್ಷರಗಳನ್ನು ತಿದ್ದಿದರೆ ಅಥವಾ ಪತ್ರ ಒಡೆದರೆ, ಅವರು ತೂಕ ಜನಿವಾರ ಹಾಕುವವರನ್ನು ಕೊಂದ ಪಾಪವು ಬರುವದೆಂಬ ಆಣೆಯಿತ್ತೆಂದು ಈ ಚಿಹ್ನದಿಂದ ತಿಳಿದುಕೊಳ್ಳತಕ್ಕದ್ದು.

ದುರ್ಧೈವಿಯಾದ ಚಿತೋಡವು ಸಂಪೂರ್ಣವಾಗಿ ವಿಧ್ವಸ್ತವಾಯಿತು! ಅಲ್ಲಿಯ ಎಲ್ಲ ಸಂಪತ್ತು ಬಾದಶಹನ ವಶವಾಯಿತು. ಅವನು ಒಂದು ದಿನ ಅಲ್ಲಿ ಸಭೆ ಮಾಡಿ ಎಲ್ಲ ಸೈನಿಕರಿಗೂ ಸೇನಾಪತಿಗಳಿಗೂ ಸಂಭಾವನೆ ಕೊಟ್ಟನು. ಉದಯಸಿಂಗನು ಶೂರನಾಗಿದ್ದರೆ, ರಾಣೀ ಅರುಣಕುಮಾರಿಯು ಕೊಲೆಯಾಗದಿದ್ದರೆ, ಚಿತೋಡದ ಮೇಲೆ ದಾಳಿ ಮಾಡಿ ವಿಜಯ ಸಂಪಾದನೆ ಮಾಡಿಕೊಳ್ಳುವ ಸಂಭವವಿದ್ದಿಲ್ಲೆಂದು ಅವನು ಸಭೆಯಲ್ಲಿ ಸಾರಿ ಹೇಳಿದನು.

ಮೂರನೆಯ ದಿನ ಬಾದಶಹನು ತನ್ನ ಸೈನ್ಯದೊಡನೆ ಸಂಭ್ರಮದಿಂದ ದಿಲ್ಲಿಯ ಕಡೆಗೆ ತೆರಳಿದನು. ಉದಯಸಿಂಗನ ಕಾಲದಲ್ಲಿ ಪರವಶತೆ ಹೊಂದಿದ ದುರ್ಧೈವಿಯಾದ ಚಿತೋಡವು ಮುಂದೆ ಎಷ್ಟೋ ವರ್ಷಗಳವರೆಗೆ ಪಾರತಂತ್ರ್ಯದಲ್ಲಿಯೇ ಇತ್ತು!

ಸಂಪೂರ್ಣಂ

## ಶ್ರೀ. ನಾಗೇಶ ರಂಗೋ ಕುಲಕರ್ಣಿ

ಇವರಿಂದ ಬರೆಯಲ್ಪಟ್ಟ

**ಪುಸ್ತಕಗಳು.**

| | | |
|---|---|---|
| ೧ | ಅಮಾತ್ಯ ರಾಕ್ಷಸ | ೪ಆ |
| ೨ | ಆತ್ಮಬಲಿ | ೧ರೂ |
| ೩ | ಈಶಸಂಕಲ್ಪ | ೧೪ಆ |
| ೪ | ಚಾಲುಕ್ಯರ ಅಭ್ಯುದಯ | ೧೨ಆ |
| ೫ | ಪತಿತೋದ್ಧರಣ | ೪ಆ |
| ೬ | ಪರಾವರ್ತನ | ೮ಆ |
| ೭ | ಭಾಗ್ಯೋದಯ | ೮ಆ |
| ೮ | ಮಾತೃಭೂಮಿಗಾಗಿ | ೩ಆ |
| ೯ | ರಕ್ತಸಿಂಚನ | ೨ಆ |
| ೧೦ | ರಾಣೀ ಕುರಂಗಿ | ೩ಆ |
| ೧೧ | ಸತ್ಯಮೇವಜಯತೆ | ೧೨ಆ |
| ೧೨ | ಸೂರ್ಯಾಸ್ತ | ೮ಆ |
| ೧೩ | ವೀರ ವಿದುಲೆ | ೩ಆ |
| ೧೪ | ಮೋಹಿನಿ | ೧\|\|ರೂ |
| ೧೫ | ಭಯಂಕರ ಸೇಡು | ೧\|\|ರೂ |
| ೧೬ | ಪ್ರಾರಬ್ಧ ಪ್ರಹಾರ | ೪ಆ |

ಸಿಗುವ ವಿಳಾಸ :—

ಭಿ. ಪ. ಕಾಳೆ,

ಆನಂದವನ.